## ಲೇಖಕರಿಗೆ ಸೂಚನೆಗಳು

೧. ಲೇಖನಗಳು ಕರ್ನಾಟಕ ಅಧ್ಯಯನಗಳಿಗೆ ಸಂಬಂಧಿಸಿರಬೇಕು ಅಥವಾ ಕರ್ನಾಟಕ ಅಧ್ಯಯನಗಳಿಗೆ ಹೊಸ ಆಯಾಮ ನೀಡಬಲ್ಲ ತಾತ್ವಿಕ ಚಿಂತನೆಗಳನ್ನು ಒಳಗೊಂಡಿರಬೇಕು.

೨. ಅನುವಾದಿತ ಲೇಖನವಾಗಿದ್ದಲ್ಲಿ ಸಂಬಂಧಪಟ್ಟವರ ಅನುಮತಿಯನ್ನು ಪಡೆದಿರಬೇಕು.

೩. ಲೇಖನಗಳನ್ನು ಹಾಳೆಯ ಒಮ್ಮಗ್ಗುಲಲ್ಲಿ ಅಂದವಾಗಿ ಬರೆದಿರಬೇಕು.

೪. 'ಲೇಖನಗಳು' ೫ ರಿಂದ ೧೦ ಪುಟಗಳ ಒಳಗೆ ಹಾಗೂ 'ಹೊಳಹು'ಗಳು ೧ ರಿಂದ ೨ ಪುಟಗಳ ಒಳಗೆ ಇರಬೇಕು.

೫. ಲೇಖನಗಳಲ್ಲಿ ಬರುವ ಉಲ್ಲೇಖಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಗಳನ್ನು ನೀಡುವಾಗ, ಕೆಳಕಂಡ ಮಾದರಿ ಅನುಸರಿಸಿದರೆ ಒಳ್ಳೆಯದು. ಲೇಖನದ ಒಳಗೆ: ಲೇಖಕರ ಸಂಕ್ಷಿಪ್ತ ಹೆಸರು, ಕೃತಿವರ್ಷ, ಪುಟಸಂಖ್ಯೆ -ಈ ಕ್ರಮದಲ್ಲಿ. ಉದಾ: (ಚಿಮೂ: ೧೯೯೩:೫೪) ಲೇಖನದ ಕೊನೆಗೆ: ಲೇಖಕ, ವರ್ಷ, ಕೃತಿ, ಪ್ರಕಾಶನ, ಊರು -ಈ ಕ್ರಮದಲ್ಲಿ ಉದಾ: ಚಿದಾನಂದಮೂರ್ತಿ ಎಂ. (೧೯೯೩) ಹೊಸತು ಹೊಸತು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಲೇಖನಗಳ ಒಳಗಿನ ಅಭಿಪ್ರಾಯಗಳು ಆಯಾ ಲೇಖಕರವು. ವಿಶ್ವವಿದ್ಯಾಲಯದವಲ್ಲ.

೭. ಲೇಖನಗಳನ್ನು ಪತ್ರಿಕೆಯ ಆಶಯಕ್ಕೆ ಅನುಗುಣವಾಗಿ ಆಯ್ದು ಪ್ರಕಟಿಸಲಾಗುವುದು. ಅಪ್ರಕಟಿತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಆದ್ದರಿಂದ ಲೇಖಕರು ಲೇಖನದ ನಕಲನ್ನು ಇಟ್ಟುಕೊಳ್ಳುವುದು.

೮. ಲೇಖನಗಳನ್ನು ಕಳಿಸುವ ವಿಳಾಸ: ಸಂಪಾದಕ
'ಕನ್ನಡ ಅಧ್ಯಯನ' ಪತ್ರಿಕೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬.

| | |
|---|---|
| ಚಂದಾ ವಿವರ : | ವಾರ್ಷಿಕ ಚಂದಾ: ರೂ. ೫೦.೦೦<br>ಐದು ವರ್ಷಗಳಿಗೆ: ರೂ. ೨೦೦.೦೦ |
| ಚಂದಾ ಕಳಿಸುವ ವಿಳಾಸ : | ನಿರ್ದೇಶಕರು, ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>ವಿದ್ಯಾರಣ್ಯ - ೫೮೩ ೨೭೬ |

# ಕನ್ನಡ ಅಧ್ಯಯನ

## ಗಾಳಿ ಸಂಚಿಕೆ

ಸಂಪಾದಕ

**ರಹಮತ್ ತರೀಕೆರೆ**



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**KANNADA ADHYAYANA** (Quartely) Vol. VI-3
Ed. by Dr. Rahamath Tarikere

Published by The Director, Prasaranga,
Kannada University, Hampi, Vidyaranya - 583 276

Pages : xii + 138

ತ್ರೈಮಾಸಿಕ ಪತ್ರಿಕೆ, ಸಂಪುಟ ೬, ಸಂಚಿಕೆ ೩ (ಜನವರಿ, ಫೆಬ್ರವರಿ, ಮಾರ್ಚ್ ೨೦೦೦)

© ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸಲಹಾ ಸಂಪಾದಕರು : ಡಾ. ಎಂ.ಎಂ. ಕಲಬುರ್ಗಿ
ಪ್ರೊ. ಅಲ್ಲಮಪ್ರಭು ಬೆಟ್ಟದೂರ
ಡಾ. ಶಾಂತಿನಾಥ ದಿಬ್ಬದ
ಡಾ. ಕೆ.ವಿ. ನಾರಾಯಣ
ಪ್ರೊ. ಹನುಮಣ್ಣ ನಾಯಕ ದೊರೆ
ಪ್ರೊ. ಲಕ್ಷ್ಮಣ್ ತೆಲಗಾವಿ

ಸಹಾಯಕ ಸಂಪಾದಕರು : ಶಿವಾನಂದ ವಿರಕ್ತಮಠ
ಸುಜ್ಞಾನಮೂರ್ತಿ

ಬಿಡಿ ಪ್ರತಿ ಬೆಲೆ : ರೂ. ೧೫.೦೦
ವಾರ್ಷಿಕ ಚಂದಾ : ರೂ. ೫೦.೦೦
ಪಂಚವಾರ್ಷಿಕ ಚಂದಾ : ರೂ. ೨೦೦.೦೦

ಮುಖಪುಟ : ಕೆ.ಕೆ. ಮಕಾಳಿ

**ಪ್ರಕಾಶಕರು**
ಪ್ರೊ. ಎ.ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಡಿ.ಟಿ.ಪಿ.**
ಸಂಧ್ಯಾ ಕಂಪ್ಯೂಟರ್ ಗ್ರಾಫಿಕ್ಸ್, ಹೊಸಪೇಟೆ

**ಮುದ್ರಕರು**
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಗದಗ

ಸೊಲ್ಲು

# ಲಂಕೇಶ್: ಸಾಯುವ ತನಕ ಓದು

ಕನ್ನಡದ ದೊಡ್ಡ ಲೇಖಕರಾದ ಪಿ ಲಂಕೇಶ್ ತೀರಿಕೊಂಡಾಗ, ಅವರ ಸಾವಿನ ವರದಿಗಳಲ್ಲಿ ಒಂದು ವಿಶಿಷ್ಟ ಸಂಗತಿಯಿತ್ತು. ಅದೆಂದರೆ, ಅವರ ಹಾಸಿಗೆಯಲ್ಲಿ ಬಿ ಎನ್ ಶಂಕರಭಟ್ಟರ 'ಕನ್ನಡ ಶಬ್ದರಚನೆ' ಪುಸ್ತಕ ಇತ್ತು ಎಂಬುದು. ಲಂಕೇಶ್ ಅವರು ಸಾಯುವ ತನಕ ಅಧ್ಯಯನ ಮಾಡುತ್ತಿದ್ದರು ಎಂಬುದಕ್ಕೆ ಇದೊಂದು ಸಾಕ್ಷಿಯಾಗಿತ್ತು.ಅವರು ಇಂಗ್ಲೀಶ್ ಸಾಹಿತ್ಯದ ವಿದ್ಯಾರ್ಥಿಯಾಗಿದ್ದವರು; ಅಪಾರ ಬರವಣಿಗೆ ಮಾಡುತ್ತಿದ್ದ ಲೇಖಕ ಹಾಗೂ ಪತ್ರಕರ್ತನಾಗಿದ್ದವರು; ಬೆಂಗಳೂರಿನಂತಹ ಗಡಿಬಿಡಿಗಳ ಊರಿನಲ್ಲಿದ್ದವರು;ಇದರ ಜೊತೆಗೆ ಕೊನೆಯ ವರುಷಗಳಲ್ಲಿ ಅವರ ಒಂದು ಕಣ್ಣು ಇಂಗಿಹೋಗಿತ್ತು - ಇಷ್ಟು ಸಂಗತಿಗಳು ಒಬ್ಬ ಮನುಷ್ಯ ಪುಸ್ತಕ ಓದದೆ ಇರಲು ನೆಪಗಳೂ ಆಗಬಹುದಿತ್ತು. ಯಾಕೆಂದರೆ ನಮ್ಮಲ್ಲಿ ಲೇಖಕರು ಎಂದರೆ 'ಬರೆಯುವವರು ಮಾತ್ರ,ಮತ್ತೊಬ್ಬರು ಬರೆದುದುದನ್ನು ಓದಬೇಕಾದವರಲ್ಲ' ಎಂಬ ಗ್ರಹಿಕೆಯೂ ಇದ್ದಂತಿದೆ. ಪ್ರತಿಕ್ರಿಯಿಸದಿರುವ ಘನಗಾಂಭೀರ್ಯವಾಗಲೀ ಆಶೀರ್ವಾದ ಶೈಲಿಯಲ್ಲಿ ಪ್ರತಿಕ್ರಿಯಿಸುವುದಾಗಲೀ ಯಾವತ್ತೂ ಒಂದು ಸಾಹಿತ್ಯ ಸಂಸ್ಕೃತಿಯಲ್ಲಿ ಸಂವಾದ ಹುಟ್ಟಿಸುವುದಿಲ್ಲ. ಸಂವಾದಕ್ಕೆ ಎದುರಿನ ವ್ಯಕ್ತಿ ಅಥವಾ ಕೃತಿಯನ್ನು ಸಮಾನವಾಗಿ ಪರಿಗಣಿಸುವ ಗುಣವಿರಬೇಕು. ಕನ್ನಡದಲ್ಲಿ ತಮ್ಮ ಕಾಲದ ಎಲ್ಲ ತಲೆಮಾರಿನ ಬರೆಹಗಾರರು ಬರೆದುದನ್ನು ಗಂಭೀರವಾಗಿ ಓದಿ ಪ್ರತಿಕ್ರಿಯಿಸುತ್ತಿದ್ದ, ಕೆಲವೇ ಲೇಖಕರಲ್ಲಿ ಲಂಕೇಶ್ ಒಬ್ಬರಾಗಿದ್ದರು.

ಓದುವುದು ಬರೆಯುವುದು ಸಂಶೋಧಕರು ಅಧ್ಯಾಪಕರು ಆದವರಿಗೆ ವೃತ್ತಿಸಂಬಂಧಿಯಾದ ಮೂಲಭೂತ ಕೆಲಸ ಕೂಡ ಆಗದೆ, ಸಮಯ ಸಿಕ್ಕರೆ ಮಾಡುವ ಹವ್ಯಾಸವಾದಂತಿರುವ ಹೊತ್ತಿನಲ್ಲಿ, ಲಂಕೇಶ್ ಮೃತ್ಯುಶಯ್ಯೆಯಲ್ಲಿ ಸಿಕ್ಕ ಪುಸ್ತಕವು ಒಂದು ಮೌಲ್ಯದಂತೆ ಭಾಸವಾಗುತ್ತಿದೆ. ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ ಇದೇ ಶಂಕರಭಟ್ಟರ 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ' ಎಂಬ ಪುಸ್ತಕ ಬಂದಾಗ, ಅದಕ್ಕೆ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿರುವ ಪ್ರಾಧ್ಯಾಪಕರು

ಭಾಷಾವಿಜ್ಞಾನಿಗಳು ಪ್ರತಿಕ್ರಿಯಿಸಿದಂತೆ ಕಾಣಲಿಲ್ಲ. ಆದರೆ ಲಂಕೇಶ್ ಅದನ್ನು ಓದಿ ದೀರ್ಘವಾಗಿ ಚರ್ಚಿಸಿದರು. ಲೇಖಕರೂ ಪತ್ರಕರ್ತರೂ ಆಗಿದ್ದ ಅವರಿಗೆ ಕನ್ನಡದ ಪುಸ್ತಕಗಳ ಓದು ಯಾವ ಬಗೆಯ ಆಂತರಿಕ ಅಗತ್ಯವಾಗಿತ್ತು ತಿಳಿಯದು. ಆದರೆ ಲಂಕೇಶ್ ವೃತ್ತಿಪರ ವಿಮರ್ಶಕರಿಗಿಂತಲೂ ಹೆಚ್ಚಿನ ಶ್ರದ್ಧೆಯಲ್ಲಿ ಪುಸ್ತಕಗಳನ್ನು ಓದಿ ಪ್ರತಿಕ್ರಿಯಿಸುತ್ತಿದ್ದರು. ಅವರು ಕಳೆದ ೨೦ ವರುಷಗಳಿಂದ ಪತ್ರಿಕೆಗೆ ಬರೆದ ಅನೇಕ ಬಗೆಯ ಬರೆಹಗಳು ಅವರ ಹೊಸಓದಿನ ಫಲವಾಗಿದ್ದವು. ಅವುಗಳಲ್ಲಿ ಕುವೆಂಪು,ನೆರೂಡ, ಶೇಕ್ಸ್ ಪಿಯರ್, ಮಾಸ್ತಿ, ತಕಟಿ, ಟಾಲಸ್ಟಾಯ್,ವೈಕಂ, ಇಲಿಯಟ್, ಅಡಿಗ, ಪುತಿನ, ತೇಜಸ್ವಿ, ಡಿವಿಜಿ, ಆಲನಹಳ್ಳಿ, ನವರತ್ನ ರಾಮರಾವ್, ಬೇಂದ್ರೆ, ಬಿ. ಚಂದ್ರೇಗೌಡ - ಹೀಗೆ ಅನೇಕ ಕಾಲದ ಅನೇಕ ತಲೆಮಾರಿನ ಅನೇಕ ಭಾಷೆ ದೇಶಗಳ ಲೇಖಕರಿರುತ್ತಿದ್ದರು. ಈ ಓದು ಏಕಕಾಲಕ್ಕೆ ಒಬ್ಬ ಓದುಗ ತನ್ನ ಖುಷಿ ಹಾಗೂ ಕುತೂಹಲಗಳಿಗಾಗಿ ಮಾಡುವ; ಒಬ್ಬ ಲೇಖಕ ಪರಂಪರೆಯಿಂದ ಪ್ರೇರಣೆ ಪಡೆಯಲು ಮಾಡುವ ; ಹಾಗೂ ಒಬ್ಬ ಪತ್ರಕರ್ತ ತನ್ನ ಕಾಲಂಗಳ ಮೂಲಕ ಓದುಗರ ಅಭಿಪ್ರಾಯ ರೂಪಿಸಲು ಮಾಡುವ ಹಾಗೂ ಒಬ್ಬ ವಿಮರ್ಶಕ ಪರಂಪರೆಯನ್ನು ಅರ್ಥಮಾಡಿಕೊಳ್ಳಲು ಮಾಡುವ- ಹೀಗೆ ಬಹುರೂಪಿ ಓದಾಗಿತ್ತು.ಲಂಕೇಶ್ ಕನ್ನಡದ ಪ್ರತಿಭಾಶಾಲಿ ವಿಮರ್ಶಕ ಕೂಡ ಆಗಿದ್ದರು. ತಟ್ಟನೆ ನೆನಪಿಗೆ ಬರುವುದು ಕಂಬಾರರ 'ಸಾವಿರದ ನೆರಳು' ಕವನ ಸಂಕಲನಕ್ಕೆ ಬರೆದ ಮುನ್ನುಡಿ. ಒಬ್ಬ ಲೇಖಕನ ನಿಜವಾದ ಶಕ್ತಿ ಎಲ್ಲಿ ಪ್ರಕಟ ವಾಗಿದೆ ಹಾಗೂ ದೌರ್ಬಲ್ಯ ಎಲ್ಲಿದೆ ಎಂಬುದನ್ನು, ಅಸ್ಪಷ್ಟತೆಗೆ ಎಡೆಯಿಲ್ಲದಂತೆ ಅವರು ಮುಟ್ಟಿ ತೋರಿಸಬಲ್ಲರಾಗಿದ್ದರು.

ಓದು, ಚಳುವಳಿ, ಚಿಂತನೆ - ಯಾವುದೇ ಕ್ರಿಯೆ ಇರಲಿ, ಅದು ಭಾವುಕ ಆರಾಧಕತೆ ಹಾಗೂ ನಿರಾಕರಣೆಯ ಸಿನಿಕತೆಗಳ ಮನಸ್ಥಿತಿಯಲ್ಲಿದ್ದಾಗ, ಚರಿತ್ರೆ ಮತ್ತು ವರ್ತಮಾನಗಳ ಜತೆ ಫಲದಾಯಕ ಅನುಸಂಧಾನ ಮಾಡಲಾರದು; ಲಂಕೇಶ್ ಓದಿನ ಮಹತ್ವವಿರುವುದು ಅವರು ಕೊನೆಗೂ ತಪ್ಪದೆ ಎತ್ತುತ್ತಿದ್ದ ತಕರಾರುಗಳಲ್ಲಿ. ಪ್ರಾಚೀನವಾದ ಅಸ್ಪಷ್ಟವಾದ ಅಮೂರ್ತವಾದ ಭಾವುಕವಾದ ಸಂಗತಿಗಳ ಬಗ್ಗೆ ಯಾವತ್ತೂ ಅನುಮಾನ ಪಡುವ ಲಂಕೇಶರದು ಮೂಲತ: ವೈಚಾರಿಕ ಮನಸ್ಸು; ಎಂತಲೇ ಅದು ಆಧುನಿಕತೆಯನ್ನು ಒಂದು ಮೌಲ್ಯವೆಂದು ತಕರಾರುಗಳಿಲ್ಲದೆ ಒಪ್ಪಿಬಿಡುತ್ತಿತ್ತು. ತನ್ನನ್ನು ಆವರಿಸಿಕೊಳ್ಳಬಲ್ಲ ಯಾವುದೇ ದೊಡ್ಡ ಪುಸ್ತಕ, ಲೇಖಕ, ಸಂಗತಿಯಿರಲಿ, ಕೊನೆಯಲ್ಲಿ 'ಆದರೆ' ಎಂದು ಶುರುವಾಗುತ್ತಿದ್ದ ಗಾಢ ಗುಮಾನಿಯ ಮಾತುಗಳು ಖಂಡಿತ ಇರುತ್ತಿದ್ದವು. ಉದಾ:ಗೆ 'ಮತ್ತೆ ಚೆಮ್ಮೀನ್ ಓದಿದಾಗ' ಎಂಬ ಅವರ ಟಿಪ್ಪಣಿ, ಹೀಗೆ ಕೊನೆಗೊಳ್ಳುತ್ತದೆ:

''ಕತೆ ನೀಟಾಗಿ ಮೋಹಕವಾಗಿದೆ. ತಾನು ಸೃಷ್ಟಿಸಿಕೊಂಡ ಪರಿಸರ,ನಂಬಿಕೆಯಮಿತಿಯಲ್ಲಿ ದುರಂತವನ್ನು ರೂಪಿಸುತ್ತದೆ.ಆದರೆ ನನ್ನ ಪ್ರಶ್ನೆ ಏನೆಂದರೆ,ಕಾದಂಬರಿಕಾರ ಶಿವಶಂಕರ ಪಿಳ್ಳೆ ಬೆಸ್ತರ ನಂಬಿಕೆಯ ಮಿತಿಯಲ್ಲಿಯೇ ಕತೆ ಮುಗಿಸುವುದು ಸರಿಯೇ? ಆಧುನಿಕ ಕತೆಗಾರ

ಎದುರಿಸುವ ಮುಖ್ಯ ಪ್ರಶ್ನೆ ಇದಾದ್ದರಿಂದ, ನಾನು ಹೇಗೆ ಕೇಳುತ್ತಿದ್ದೇನೆ. ಹೆಂಡತಿ ಕೆಟ್ಟೊಡನೆ ಗಂಡ ನಾಶವಾಗುವ ನಂಬಿಕೆಯನ್ನು ನಾವು ಒಪ್ಪಿಕೊಂಡರೆ, ಬೆಸ್ತರ ಬಡತನ ಮೂಢನಂಬಿಕೆ ಶೋಷಿತ ಸ್ಥಿತಿಯನ್ನು ಒಪ್ಪಿಕೊಂಡಂತೆ ಆಗಲಿಲ್ಲವೆ? ಹಾಗಾದರೆ ಕಾದಂಬರಿಕಾರತಾನು ಕತೆಗಾಗಿ ಎತ್ತಿಕೊಂಡ ಪರಿಸರವನ್ನು ಹೇಗೆ ನಿಯಂತ್ರಿಸಬೇಕು?ಕರುತ್ತಮ್ಮ ಪರೀಕುಟ್ಟಿಯ ಪ್ರೇಮ ಮತ್ತು ಬದುಕು ನಿಸರ್ಗದ ಅವಾಂತರಗಳ, ಅನೀರೀಕ್ಷಿತ ಆಘಾತ, ಸಹಾಯಗಳ ಮಡಿಲಲ್ಲಿ ರೂಪುಗೊಳ್ಳದೆ ಬೆಸ್ತರ ಗುಂಪಿನ ನಂಬಿಕೆಗಳಲ್ಲಿ ಕಟ್ಟಿಹಾಕಿಕೊಳ್ಳುವುದು ವಿಚಿತ್ರವಾಗಿದೆ. 'ಚೆಮ್ಮೀನ್' ಎಷ್ಟು ಒಳ್ಳೆಯ ಕೃತಿಯೆಂದರೆ,ಅನೇಕಾನೇಕ ಪ್ರಶ್ನೆಗಳನ್ನು ಕೇಳಿಸಿಕೊಳ್ಳುತ್ತಲೇ ಮನವನ್ನು ಅಲ್ಲಾಡಿಬಿಡುತ್ತದೆ."

ಲಂಕೇಶ್ ಇಂಗ್ಲೀಶಿನ ಮೂಲಕ ಜಗತ್ತಿನ ಅನೇಕ ಭಾಷೆಗಳ ಸಾಹಿತ್ಯದ ಓದುಗರಾಗಿದ್ದರು. ಅವರು ಬರೆಯುತ್ತಿದ್ದ ಟೀಕೆಟಿಪ್ಪಣಿಗಳು ಪಾಶ್ಚಾತ್ಯ ಸಾಹಿತ್ಯ ಕೃತಿಗಳ ಉಲ್ಲೇಖಗಳಿಂದ ತುಂಬಿಹೋಗಿರುತ್ತಿದ್ದವು. ಮುಖ್ಯ ಸಂಗತಿಯೆಂದರೆ, ಅವನ್ನು ಕನ್ನಡದ ಸಾಮಾನ್ಯ ಓದುಗರೂ ಕತೆಕಾದಂಬರಿಯಂತೆ ಓದುತ್ತಿದ್ದುದು. ಕಾರಣ, ಇವು ಪಾಶ್ಚಿಮಾತ್ಯ ಸಾಹಿತ್ಯದ ವಿಮರ್ಶೆ ಅನಿಸುತ್ತಿರಲಿಲ್ಲ. ಇಲಿಯಟ್ ಬಗೆಗೆ ಬರೆದ 'ಮತ್ಸ್ಯ ಕನ್ಯೆಯರು ನನಗಾಗಿ ಹಾಡುತ್ತಿಲ್ಲ' ಲೇಖನವನ್ನಾಗಲೀ, ಬೋದಿಲೇರನ 'ಪಾಪದ ಹೂಗಳು' ಸಂಕಲನಕ್ಕೆ ಬರೆದ ಮುನ್ನುಡಿ ಯನ್ನಾಗಲೀ ಗಮನಿಸಬಹುದು. ಪತ್ರಿಕೆಗಳಲ್ಲಿ ಅನೇಕ ನಿವೃತ್ತ ಇಂಗ್ಲೀಶ್ ಪ್ರಾಧ್ಯಾಪಕರು 'ನಿಮಗೆ ಇದು ಗೊತ್ತಿಲ್ಲ' ಎಂಬ ಗಣ್ಯತೆಯಲ್ಲಿ ಬರೆಯುತ್ತಿರುವ ಪಾಶ್ಚಾತ್ಯ ಸಾಹಿತಿಗಳ ಬಗೆಗಿನ ಕ್ಲಾಸ್‌ನೋಟ್ಸ್‌ಗಳಂತಹ ಗೊಡ್ಡುಬರೆಹಗಳಿಗೆ ಹೋಲಿಸಿದರೆ, ಈ ಟಿಪ್ಪಣಿಗಳ ಜೀವಂತಿಕೆ ಗೊತ್ತಾಗುತ್ತದೆ. ಇದಕ್ಕೆ ಸರಳ ಕಾರಣವೆಂದರೆ, ಲಂಕೇಶ್ ಓದನ್ನು ರಕ್ತಗತ ಮಾಡಿಕೊಂಡು ತಮ್ಮ ಸುತ್ತಮುತ್ತಲಿನ ಮಾತುಕತೆಯೆಂಬಂತೆ ಸೃಜನಶೀಲ ರೂಪಾಂತರ ಮಾಡುತ್ತಿದ್ದುದು; ಇದಕ್ಕೆ ಸಂವಾದಿಯಾಗಿ ನೆನಪಾಗುವುದು, ಬಿಎಂಶ್ರೀ ಅವರ 'ಇಂಗ್ಲಿಷ್ ಗೀತಗಳು' ಅಥವಾ ಕುವೆಂಪು ಅವರ 'ಬೊಮ್ಮನಹಳ್ಳಿಯ ಕಿಂದರಜೋಗಿ'ಯಂತಹ ಸೃಜನಶೀಲ ಕನ್ನಡೀಕರಣಗಳು. ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಕಾಣುವ ಸತ್ಯವೆಂದರೆ, ನಿಜವಾದ ಕನ್ನಡದ ಮನಸ್ಸು 'ಹೊರಗಿ'ನಿಂದ ಏನನ್ನಾದರೂ ಪಡೆಯಲಿ, ಅದನ್ನು ತನ್ನ ಜನಕ್ಕೆ ಭಾಷೆಗೆ ಸಂಸ್ಕೃತಿಗೆ ಹೇಗೆ ಅದರದನ್ನಾಗಿ ಮಾಡಿ ಸಲ್ಲಿಸಬೇಕು ಎಂಬ ದರ್ದಿನಲ್ಲಿ ಫಲದಾಯಕ ಅನುಸಂಧಾನಕ್ಕೆ ಹಾತೊರೆದಿರುವುದು. ಆದುದರಿಂದ ಅಪಾರವಾದ ಓದು-ಕಾವ್ಯಮೀಮಾಂಸೆ ಪರಿಭಾಷೆಯಲ್ಲಿ ಹೇಳುವುದಾದರೆ ವ್ಯುತ್ಪತ್ತಿಯು - ತನಗೆ ತಾನೇ ಸೌಭಾಗ್ಯವಲ್ಲ. ಅದು ಯಾವ ರೂಪಾಂತರದ ಮರುಹುಟ್ಟಿನಲ್ಲಿ ತನ್ನ ಸಮುದಾಯಕ್ಕೆ ದೊರಕುತ್ತದೆ ಎಂಬುದು ಮುಖ್ಯ. ಲಂಕೇಶ್ ಸಾಯುವ ತನಕ ಮಾಡಿದ ಓದು ತನ್ನ ಸಮುದಾಯವನ್ನು ಎಜುಕೇಟ್ ಮಾಡುವ ಗುಣವನ್ನೂ ಹೊಂದಿತ್ತು ಎಂಬುದನ್ನು ಇಲ್ಲಿ ಪರಿಭಾವಿಸಬೇಕು.

ತನಗೆ ಇಷ್ಟವಾಗದುದನ್ನು ಅತ್ಯಂತ ಕಟುವಾಗಿ ನಿರಾಕರಿಸುತ್ತಿದ್ದ ಲಂಕೇಶ್, ಈ ಕಾರಣಕ್ಕೆ ಸಮಸಮವಾಗಿ ಕಡುವಿರೋಧಿಗಳನ್ನೂ ಕಡುಭಿಮಾನಿಗಳನ್ನೂ ಪಡೆದಿದ್ದ ಕನ್ನಡದ ಒಬ್ಬ ಖಾಯಂ ಭಿನ್ನಮತೀಯ ಚಿಂತಕನಾಗಿದ್ದರು; ಪ್ರಶ್ನೆಯೆಂದರೆ, ತಮ್ಮ ಭಿನ್ನಾಭಿಪ್ರಾಯಗಳನ್ನು ದಾಖಲಿಸಲು ತೋರುತ್ತಿದ್ದಷ್ಟು ದಿಟ್ಟತನವನ್ನು, ಅನ್ಯರ ಭಿನ್ನಾಭಿಪ್ರಾಯಗಳನ್ನು ಕೇಳಸಿ ಕೊಳ್ಳಲು ಸಂಯಮ ತೋರಿದರೆ? ಎಂಬ ಪ್ರಶ್ನೆಯಿದೆ. ಅವರ ವ್ಯಕ್ತಿತ್ವದಲ್ಲಿ ಸಂವಾದಕ್ಕೆ ಬೇಕಾದ ಗುಣ ಕಡಿಮೆ ಇತ್ತೆನಿಸುತ್ತದೆ. ಇದಕ್ಕೆ ಕಾರಣ ಅವರ ವ್ಯಕ್ತಿತ್ವದಲ್ಲೇ ಇದ್ದ ಗೌಡಿಕೆಯೋ ಅಥವಾ ಪತ್ರಿಕೆ ಕೊಟ್ಟಿದ್ದ ಬಲಾಢ್ಯ ಶಕ್ತಿಯೋ ತಿಳಿಯದು. ಗಾಢ ಚರ್ಚೆಗೆ ಬೇಕಾದ ಪ್ರಶ್ನೆಗಳನ್ನು ಎತ್ತಬಲ್ಲರಾಗಿದ್ದ ಅವರಿಗೆ ಸಂವಾದವನ್ನು ಮುಂದುವರೆಸುವುದಕ್ಕೆ ಬೇಕಾದ ಡೆಮಾಕ್ರಟಿಕ್ ತಾಳ್ಮೆಯಿರಲಿಲ್ಲ. (ಕಾರಂತರಲ್ಲಿಯೂ ಈ ಸಮಸ್ಯೆಯಿತ್ತು.) ಕನ್ನಡದ ಅನೇಕ ಲೇಖಕರ ಬುದ್ಧಿಜೀವಿಗಳ ಜತೆ ಅವರು ಮಾಡಿದ ಅರ್ಥಪೂರ್ಣ ಸಂವಾದಗಳನ್ನು ಮರೆಯದೆಯೂ ಹೇಳಬಹುದಾದರೆ, ಅವರು ಸಾಮಾನ್ಯವಾಗಿ ಭಿನ್ನಾಭಿಪ್ರಾಯಗಳನ್ನು 'ಮೂರ್ಖ' ಎಂದು ಜರೆದು ಪಕ್ಕಕ್ಕೆ ತಳ್ಳಿಬಿಡುತ್ತಿದ್ದರು. ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸುವ ಅವಕಾಶವೂ ಪತ್ರಿಕೆಯಲ್ಲಿ ಇರುತ್ತಿರಲಿಲ್ಲವಾಗಿ, ಈ ಪ್ರಶ್ನೆಗಳು ಜಗಳಗಳಾಗಿ ದ್ವೇಷಗಳಾಗಿ ಮುಂದುವರೆಯುತ್ತಿದ್ದವು.

ಲಂಕೇಶ್ ಅವರ ಓದು ಹಾಗೂ ವಿಮರ್ಶೆಯಲ್ಲಿ ತೀವ್ರ ಮಮಕಾರ ಹಾಗೂ ಪೂರ್ವಗ್ರಹ ಗಳಿದ್ದವು, ನಿಜ. ಆದರೆ ಅವು 'ವಿಮರ್ಶಹೀನವಾಗಿದ್ದವು, ಮನಸ್ಸಾಕ್ಷಿಗೆ ವಿರುದ್ಧವಾಗಿ ಕೊಂಡಾಟ ಮಾಡುತ್ತಿದ್ದವು' ಎಂದು ಅನಿಸುವುದಿಲ್ಲ. ಅವರ ಓದು ತಕ್ಷಣದ ಪ್ರತಿಕ್ರಿಯೆಯಾಗಿ ಆಯಾವಾರವೇ 'ಪತ್ರಿಕೆ'ಯಲ್ಲಿ ಪ್ರಕಟವಾಗುತ್ತಿತ್ತು ಎಂಬುದು, ಅದರ ಸ್ವರೂಪವನ್ನು ನಿರ್ಧರಿ ಸುತ್ತಿದ್ದ ಸಂಗತಿ ಕೂಡ ಆಗಿತ್ತು. ಹೀಗಾಗಿ ಅನೇಕ ಸಲ ಪ್ರತಿಕ್ರಿಯೆಗಳು ಆಳವಾದ ಚಿಂತನೆಯಿಂದ ಮೂಡಿಬರದೆ ಆ ಕ್ಷಣಕ್ಕೆ ಅನಿಸಿದ್ದನ್ನು ಹಂಚಿಕೊಳ್ಳುವ ಲಹರಿತನದಿಂದ ಕೂಡಿರುತ್ತಿದ್ದವು. ಅವುಗಳಲ್ಲಿ ಸಾಮಾನ್ಯವಾಗಿ ಪತ್ರಿಕಾ ಬರೆಹಗಳಲ್ಲಿ ತೀವ್ರತೆಗಾಗಿ ಮಾಡುವ ಚುಚ್ಚುವಿಕೆ, ಛೇಡಿಸುವಿಕೆ ಇರುತ್ತಿದ್ದವು. ಕುರ್ತಕೋಟಿಯವರ ಜಡವಾದ ಕನ್ನಡವನ್ನು ಸಮರ್ಥವಾಗಿಯೇ ತಮಾಷೆ ಮಾಡುತ್ತಿದ್ದ ಅವರಿಗೆ, ಕುರ್ತಕೋಟಿ ವಿಮರ್ಶೆಯ ಒಳನೋಟಗಳನ್ನು ಹೇಳಲು ಸಾಧ್ಯವಾಗುತ್ತಿರಲಿಲ್ಲ.

ಲಂಕೇಶ್ ಎಷ್ಟೇ ವಿವಾದಕಾರ, ಪೂರ್ವಗ್ರಹಿ, ಯಜಮಾನಿಕೆ ದನಿಯ ಟೀಕಾಕಾರ ಆಗಿ ದ್ದರೂ, ೨೦ ನೇ ಶತಮಾನದ ಕರ್ನಾಟಕ ಸೃಷ್ಟಿಸಿದ ಬಹು ಮುಖ್ಯ ಸಾಂಸ್ಕೃತಿಕ ವ್ಯಕ್ತಿತ್ವಗಳಲ್ಲಿ ಒಂದು. ಅವರು ತಮ್ಮ ಪತ್ರಿಕೆಯ ಮೂಲಕ ಅನೇಕ ಪ್ರಕರಣಗಳಲ್ಲಿ ತಳೆದ ನಿಲುವು, (ಉದಾ: ಕೊಲ್ಲಿ ಯುದ್ದದಲ್ಲಿ ಅಮೆರಿಕ ಪರವಾಗಿ ನಿಂತಿದ್ದು, ಶ್ರೇಷ್ಠಸಾಹಿತ್ಯ ಸಮ್ಮೇಳನದಲ್ಲಿ ತಳೆದ ಎಲೈಟ್ ನಿಲುವು, ಬಂಡವಾಳವಾದದ ಕ್ರೌರ್ಯಗಳನ್ನು ಲೆಕ್ಕಿಸದೆ ಆಧುನಿಕತೆಯನ್ನು ಮೆಚ್ಚುವ, ಕಮ್ಯುನಿಸಂ ಬಗೆಗಿನ ಪೂರ್ವಗ್ರಹಗಳು ಇತ್ಯಾದಿ) ಇದು ಉಂಟುಮಾಡಿದ

ಪರಿಣಾಮ ಈ ಬಗ್ಗೆ ತೀವ್ರ ಭಿನ್ನಾಭಿಪ್ರಾಯಗಳು ಇವೆ. ಆದರೆ ಅವರ ಪತ್ರಿಕೆಯು ಕಳೆದ ೨೦ವರುಷಗಳಲ್ಲಿ ನಿರ್ವಹಿಸಿದ ಪಾತ್ರವು ಚರಿತ್ರೆಯಲ್ಲಿ ದಾಖಲಾಗದೆ ಹೋಗುವಂತಿಲ್ಲ; ತನ್ನ ಕಾಲದ ಎಲ್ಲ ಯಜಮಾನಿಕೆ ಬೂಟಾಟಿಕೆ ಓಲೈಸುವಿಕೆಗಳ ವಿರುದ್ಧ ಬಹುದೊಡ್ಡ ನೈತಿಕ ಶಕ್ತಿಯಾಗಿದ್ದ ಲಂಕೇಶ್, ಸಾಯುವ ದಿನ ಬರೆದ ಎರಡು ಬರೆಹಗಳ ಸ್ವರೂಪವನ್ನು ಗಮನಿಸಬೇಕು. ಒಂದರಲ್ಲಿ ಅಧಿಕಾರಸ್ಥರ ವಿರುದ್ಧ ಅವರ ಟೀಕೆಯಿತ್ತು. ಇನ್ನೊಂದರಲ್ಲಿ ತಮ್ಮ ಪ್ರೀತಿಯ ಚಿಂತಕರಾದ ಜಿ ರಾಜಶೇಖರ್ ಅವರ ಪುಸ್ತಕವಿಮರ್ಶೆಯ ಒಳಗಿನ ಒಳನೋಟ ಮತ್ತು ಸಾಂಸ್ಕೃತಿಕಕಾಳಜಿಯ ಬಗ್ಗೆ ಮೆಚ್ಚುಗೆಯಿತ್ತು.ಆದರ್ಶ ಪುಸ್ತಕ ವಿಮರ್ಶೆಯೊಂದು ಹೇಗಿರಬೇಕು ಎಂಬ ಬಗ್ಗೆ ಮತ್ತೆಮತ್ತೆ ಬರೆಯುತ್ತಿದ್ದ ಲಂಕೇಶ್, ಸ್ವತ: ಪುಸ್ತಕ ವಿಮರ್ಶೆ ಮಾಡುತ್ತ, ತಾವು ಹೇಳಿದ ಆದರ್ಶವನ್ನು ರುಜುವಾತು ಪಡಿಸಲು ಯತ್ನಿಸುತ್ತಿದ್ದರು. ಅದನ್ನು ಸಾಧಿಸಲು ಆಗದೆ ಸೋಲುತ್ತಿದ್ದರು ಕೂಡ. ಅವರು ಪ್ರಾಸಂಗಿಕವಾಗಿ ಬರೆಯುತ್ತಿದ್ದ ಟಿಪ್ಪಣಿಗಳು ಒಳನೋಟ ಚಿಂತನೆಗಳಿಂದ ತುಂಬಿರುತ್ತಿದ್ದವು; ಕರ್ನಾಟಕದ ಬಹುದೊಡ್ಡ ಸಂಖ್ಯೆಯ ಓದುಗರ ಜತೆ ಸಂಬಂಧವಿಟ್ಟುಕೊಂಡಿದ್ದ ಅವರ ಓದು ಮತ್ತು ವಿಮರ್ಶೆಗಳು, ಪೂರ್ವಗ್ರಹ ಜಗಳ ಪ್ರೀತಿ ಚಿಂತನೆಗಳ ಭಾಗವಾಗಿದ್ದವು.ಎಂತಲೇ ೨೦ ವರುಷ ಬರೆದರೂ ಅವು ಹಳತಾಗಲಿಲ್ಲ.

ಯಾವಾಗಲೂ ಬರವಣಿಗೆಯ ಜೀವಂತಿಕೆಯ ಬಗ್ಗೆ ಚಿಂತಿಸುತ್ತಿದ್ದ ಲಂಕೇಶ್ ನಮ್ಮನ್ನು ಜೀವಂತವಾಗಿಸಬಲ್ಲ ಓದುವ ಮತ್ತು ಬರೆಯುವ ಕ್ರಿಯೆಯ ನಿಗೂಢತೆಯನ್ನು 'ಯಕ್ಷಿಣಿ'ಯನ್ನು ಮತ್ತೆ ಪರಿಭಾವಿಸುತ್ತಿದ್ದರು.ಈ ನಾಡು ಬರುವ ದಿನಗಳಲ್ಲಿ ಏನು ಮಾಡಿದರೆ ಸುಖಸಮೃದ್ಧಿಯ ಬೀಡಾಗುತ್ತದೆ ಎಂಬ ಕನಸಿನ ಭಾಗವಾಗಿಯೇ ಅವರ ಓದು ಬರೆಹಗಳು ಇದ್ದವು. ಕನ್ನಡದ ಸಾಧನೆಯೆಂದು ಕರೆಯಲಾಗುವ ಅವರ ಗದ್ಯದ ಜೀವಂತಿಕೆಗೂ ಈ ಕನಸುಗಾರಿಕೆಗೂ ಸಂಬಂಧವಿದೆ. ಅವರ ಮೃತ್ಯುಶಯ್ಯೆಯಲ್ಲಿ ಸಿಕ್ಕ ಶಂಕರಭಟ್ಟರ ಪುಸ್ತಕವು, ಕನ್ನಡಕ್ಕೆ ಅದರದ್ದೇ ಸ್ವಂತಿಕೆಯಿದೆ ಎಂಬ ವಾದಗಳನ್ನು ಒಳಗೊಂಡಿತ್ತು ಎಂಬುದು ಸಾಂಕೇತಿಕವಾಗಿದೆ.

● ಸಂಪಾದಕ

# ಪರಿವಿಡಿ

ಲೇಖನಗಳು

## ಬೊಂಬಾಯಿಯಲ್ಲಿ ನಾಗಮಂಗಲದ ಜನ

● ಬಿ. ಚಂದ್ರೇಗೌಡ

ಮಲೆನಾಡ ಕಡೆಯಿಂದ ಬಂದಿದ್ದ ಗೆಳೆಯನೊಬ್ಬನಿಗೆ ನಮ್ಮೂರಿನಲ್ಲಿ ತೋರಿಸುವಂತಹದ್ದೇನು ಇರಲಿಲ್ಲ, ಆದರೂ ಕೆರೆಯ ಕೋಡಿ ತುದಿಯಲ್ಲಿದ್ದ ಪಟೇಲರ ಆಲೆಮನೆಗೆ ಕರೆದುಕೊಂಡು ಹೋದೆ. ಬೆಲ್ಲ ಬರುವ ಸಮಯವಾದ್ದರಿಂದ ಪಾಕದ ವಾಸನೆ ಮೂಗಿಗೆ ಬಡಿಯುತ್ತಿತ್ತು. ಬಿಸಿಬೆಲ್ಲಕ್ಕಾಗಿ ಕಾಯುವ ಬದಲು ಕಬ್ಬು ಸಿಗಿಯುತ್ತ ನಿಂತೆವು. ಆಗ ಗೆಳೆಯ ತಾನು ಎಂದೋ ನೋಡಿದ ಬಾಂಬೆಯನ್ನು ವರ್ಣಿಸತೊಡಗಿದ. ನನ್ನ ನಿರುತ್ಸಾಹವನ್ನು ನೋಡಿ ಅಲ್ಲೇ ನಿಂತಿದ್ದ ಅಬ್ಬೆಪಾರಿಯಂತಹವನಿಗೆ ಕೊರೆಯತೊಡಗಿದ. ಸೆಕೆಗೆ ಅಂಗಿ ಬಿಚ್ಚಿ ಹೆಗಲ ಮೇಲೆ ಹಾಕಿದ್ದ ಕುರುಚಲು ಗಡ್ಡದ ಆ ವ್ಯಕ್ತಿ ತನ್ನ ಕುಳ್ಳು ದೇಹದ ಸೊಂಟಕ್ಕೆ ಕುಡ್ಲು ಸಿಗಿಸಿದ್ದ. ನನ್ನ ಗೆಳೆಯನಿಗೆ ತಾನು ಬೊಂಬಾಯಿಯಲ್ಲಿ ಕಂಡ ವಿಸ್ಮಯಗಳನ್ನು ಉತ್ಪ್ರೇಕ್ಷೆಮಾಡಿ ಹೇಳಲು ತಕ್ಕ ವ್ಯಕ್ತಿ ಸಿಕ್ಕಂತಾಯ್ತು. ಆಗ, ನಿಧಾನಕ್ಕೆ ತುಟಿಬಿರಿಸಿ ಆ ವ್ಯಕ್ತಿ "ನಾನೂ ಬೊಂಬಾಯಿಲಿದ್ದೆ" ಎಂದ. ದಂಗುಬಡಿದ ಮಿತ್ರ "ನೀವು ಬೊಂಬಾಯಿಲಿದ್ರ?" ಎಂದ.

"ಊ ಇಪ್ಪತ್ತೊರಸ ಜಟಗಾ ಹ್ವಡದೆ. ರುಕ್ಸ ಟ್ಯಾಕ್ಸಿ ಬಂದ ಮ್ಯಾಲೆ ನಮಿಗೆ ಯಾಪಾರಿಲ್ದಂಗಾಯ್ತು. ಕುದರೇನೂ ಗಾಡೀನು ಮಾರಿ ಅತ್ಲಾಗೆ ಊರಿಗೆ ಬಂದೆ" ಎಂದು ನಮ್ಮೂರ ಕುಳ್ಳಗೆಂಪಣ್ಣ ತಣ್ಣಗೆ ಹೇಳಿದ. ನನ್ನ ಗೆಳೆಯನ ಧ್ವನಿ ಸಂಪೂರ್ಣ ಬಂದಾಯಿತು. ಬಾಂಬೆಗೆ ಹೀಗೆ ಹೋಗಿ ಹಾಗೆ ಬಂದವನಿಗೆ ಪುನಃ ಏನಾದರೂ ಕೊರೆಯಬಹುದು. ಆದರೆ ಇಪ್ಪತ್ತು ವರ್ಷ ಜಟಕಾ ಹೊಡೆದು ಬಂದವನು ಬೊಂಬಾಯಿಯ ಯಾವ ಗಲ್ಲಿಯನ್ನು ಬಿಟ್ಟಿರಲಾರ ಎಂಬುದು ಗೆಳೆಯನ ಮುಖದಲ್ಲೇ ವ್ಯಕ್ತವಾಯ್ತು. ಆಗ ನಾನು "ಏನ್ ಅನ ಕಂಡೆ ನಮ್ಮೂರ ನೀನು? ನೋಡಲ್ಲಿ ಗಾಣಕ್ಕೆ ಕಬ್ಬು ಕೊಡ್ತಾ ಅವನಲ್ಲ, ಅವುನು ಚೆನ್ನಮಲ್ಲಣ್ಣ ಅಂತ. ಅವುನಂತ ಡ್ರೈವರೇ ಇಲ್ಲ. ಆ ಹೊಲದತ್ರ ಎತ್ತು, ಎಮ್ಮೆ ಹಿಡಕಂಡು ಬದಮೇಸ್ತ ಅವುನಲ್ಲ, ಅವುನು ನೀಲಾಚಾರಿ ಅಂತ, ಪ್ರಿಮಿಯರ್ ಕಂಪನಿಲಿ ಮೆಕಾನಿಕ್ ಆಗಿದ್ದು ರಿಟೈರಾಗಿ ಬಂದವುರೆ. ಒಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಕೇಳಿಸ್ಕೊ, ಇಲ್ಲಿ ಜನ ಹಿಂದಿ, ಮರಾಠಿಲೂ ಮಾತಾಡ್ತರೆ.

ಅದೊಂತರ ಪ್ಯಾಶನ್ ಎಂದೆ. ಗೆಳೆಯ ಸೋತ ದನಿಯಲ್ಲಿ "ಅಲ್ಲಯ್ಯಾ! ಮಂಡ್ಯ ಜಿಲ್ಲೆ ಮೂಲೇಲಿರೋ ಈ ಊರಿಗೂ ಬೊಂಬಾಯಿಗೂ ಏನು ಸಂಬಂಧ?" ಎಂದ. ಅವನಿಗೆ ನಮ್ಮೂರು (ನಾಗಮಂಗಲ ತಾಲೂಕು ಬಿದರಕೆರೆ) ಮತ್ತು ಬೊಂಬಾಯಿ ಸೇರಿದ್ದು ಹೇಗೆ ಎಂಬ ವೃತ್ತಾಂತ ಹೇಳಬೇಕಾಯ್ತು.

ಸುಮಾರು ಅರವತ್ತು ವರುಷದ ಹಿಂದೆ ನಮ್ಮೂರ ಆಚಾರ್ರ ಪೈಕಿ, ನೀಲಾಚಾರ್ರ ಮಗ ಅಳ್ಳಣ್ಣ, ಆಗಿನ್ನೂ ಹದಿನಾರೊರಸದ ಹುಡುಗ, ಇದ್ದಕ್ಕಿದ್ದಂತೆ ಕಾಣೆಯಾದ. ಅದು ಸ್ವಾತಂತ್ರ ಹೋರಾಟದ ಕಾಲ. ವ್ಯಕ್ತಿಗಳು ಇದ್ದಕ್ಕಿದ್ದಂಗೆ ಕಾಣೆಯಾಗದು ಮಾಮೂಲಿನ ಸಂಗತಿಯಾದ್ರು, ನಮ್ಮೂರಿಗೂ ಸ್ವಾತಂತ್ರ ಹೋರಾಟಕ್ಕೂ ಯಾವ ಸಂಬಂಧವೂ ಇರಲಿಲ್ಲ. ಒಬ್ಬ ಸುಂದರವಾದ ಯುವಕ ಮನೆ ಬಿಟ್ಟುಹೋದ ಅಂದ್ರೆ, ಯಾವಳನ್ನೋ ಹಾರಿಸಿಕೊಂಡು ಹೋದ ಅನ್ನೋದಕ್ಕೂ ಆಧಾರ ಇರಲಿಲ್ಲ. ಇನ್ನ ಹೋಗಿ ದಂಡಿಗೆ ಸೇರಿದ ಅಂದ್ರೆ, ಅಂಥಾ ಧೈರ್ಯದ ಹುಡುಗನೂ ಅಲ್ಲ. ಅಂತು ಮನೆಯಿಂದ ಹೊರಗೋದವನು ಮತ್ತೆ ಬರಲಿಲ್ಲ. ಅವನ ಜೊತೆಯಲ್ಲಿ ಹುಟ್ಟಿದ ಇನ್ನೂ ಮೂವರು ಗಂಡುಮಕ್ಕಳಿದ್ದರೂ ಆ ಮನೆಯ ರೋದನ ಊರಿನ ಮೂಲೆ ಮೂಲೆಗೂ ತಲುಪಿತು. ಜನರೆಲ್ಲಾ ಬಂದು, ತಾವು ಅತ್ತು ಸಮಾಧಾನ ಮಾಡಿ ಹೋಗುವುದು ಎಷ್ಟೋ ದಿನ ನಡೆದೇ ಇತ್ತು. ಮೂರ್ನಾಲ್ಕು ವರುಷಗಳಾದ ನಂತರ, ಅವನು ಬದುಕಿರುವ ಬಗ್ಗೆ ಯಾವ ಅನುಮಾನವೂ ಉಳಿಯಲಿಲ್ಲ. ಎದೆ ಕಲ್ಲು ಮಾಡಿಕೊಂಡು ತಿಥಿ ಮಾಡಿಬಿಡುವ ಮಾತನಾಡತೊಡಗಿದರು. ಅವನಿಗಿನ್ನ ಮದುವೆಯಾಗಿಲ್ಲವಾದ್ದರಿಂದ ಹಾಲು-ತುಪ್ಪ ಬಿಡುವುದು ಸೂಕ್ತವೆಂದು ಹಲವರು ಸಲಹೆ ಕೊಟ್ಟರು. ಹೆತ್ತವ್ವ ಇದಾವುದಕ್ಕೂ ಅವಕಾಶ ಕೊಡಲಿಲ್ಲ.

ಹೀಗಿರುವಾಗ ಒಂದು ದಿನ ಊರಮುಂದೆ ಅಳ್ಳಣ್ಣ ಪ್ರತ್ಯಕ್ಷವಾದ, ಊರಿನ ಯಾರೂ ಗೊತ್ತು ಹಿಡಿಯಲಿಲ್ಲ. ಆ ಊರು ಎಂದು ನೋಡಿರದಿದ್ದ ವೇಷದೊಂದಿಗೆ ಕೈಯಲ್ಲಿ ಸೂಟ್ ಕೇಸ್ ಹಿಡಿದು, ವಾಚು ಉಂಗುರ ಚೈನು ಪಳಪಳ ಹೊಳೆಯುವ ಚಪ್ಪಲಿ ಧರಿಸಿದ್ದ ಅಳ್ಳಣ್ಣ, ಊರ ಮುಂದೆ ಕಾಣಿಸಿಕೊಂಡ ಕೂಡಲೇ, ಕಲ್ಲು ಕಟ್ಟೆಯ ಮೇಲೆ ಕುಳಿತ ಕೆಲವರು ಎದ್ದು ನಿಂತರು. ಹಲವರು ದೂರದಿಂದಲೇ ಬಾಯಿಬಿಟ್ಟುಕೊಂಡು ನೋಡತೊಡಗಿದರು. ಅಳ್ಳಣ್ಣನೇ ಬಾಯಿಬಿಟ್ಟು "ಇದ್ಯಾಕ್ರೋ ಹಿಂಗೆ ನೋಡ್ತಿರಿ? ನಾನು ಕಣ್ರೋ ಅಳ್ಳಣ್ಣ" ಎಂದ ಕೂಡಲೇ ಎಲ್ಲಾ ಓಡಿಬಂದು ಮುತ್ತಿಕೊಂಡು ಮನೆಯವರೆಗೂ ಮೆರವಣಿಗೆಯಂತೆ ಬಂದರು. ಆಗ ಅವರಪ್ಪನೇ ಮಗನನ್ನ ಗುರುತು ಹಿಡಿಯುವುದು ತಡವಾಯಿತು. ಮಗ ಬಂದ ಕೂಡಲೇ ಸಂತೋಷಪಡುವುದು ಬಿಟ್ಟು ಎಲ್ಲರು ಅಳತೊಡಗಿದರು, ಅಳ್ಳಣ್ಣ ನಗುತ್ತಾ ಸೂಟ್‌ಕೇಸ್ ತೆಗೆದು ಮಿಠಾಯಿ ಪ್ಯಾಕೆಟ್ ಒಡೆದು ಎಲ್ಲರಿಗೂ ಕೊಟ್ಟ. ಆದಿನ, ಅಳ್ಳಣ್ಣ ನಮ್ಮೂರಿನ ವಾಸ್ಕೋಡಿಗಾಮನಾಗಿದ್ದ.

ಅಕ್ಕಸಾಲಿಗನಾಗಿದ್ದ ಅಳ್ಳಣ್ಣ ಯಾರೊ ಸ್ವಜಾತಿ ಬಾಂಧವರೊಡನೆ ಬಾಂಬೆಗೆ ಹೋಗಿಬಿಟ್ಟಿದ್ದ. ಆಗಲೇ ಚಿನ್ನಗೆಲಸ ಕಲಿತಿದ್ದ ಅಳ್ಳಣ್ಣನಿಗೆ ಹೋದ ಕೂಡಲೇ ಸೇಟು

ಅಂಗಡಿಯಲ್ಲಿ ಕೆಲಸ ಸಿಕ್ಕಿತು. ಈತ ಮಾಡುವ ಲೋಲಾಕು, ಜುಮಕಿ, ಚಿನ್ನದ ಸರಗಳ ಕುಸುರಿ ಕೆಲಸಕ್ಕೆ ಮಾರುಹೋದ. ಸೇಟು ಈತನನ್ನ ಎಲ್ಲೂ ಹೋಗದಂತೆ ಹಿಡಿದಿಟ್ಟುಕೊಂಡು, ನಾಲ್ಕುವರ್ಷಗಳ ನಂತರ ಊರು ನೋಡಿಕೊಂಡು ಬರುತ್ತೇನೆಂದು ಹಟ ಹಿಡಿದ ಅಳ್ಳಣ್ಣನ ಕೈತುಂಬ ದುಡ್ಡು ಒಡವೆಯನ್ನೂ ಕೊಟ್ಟು ಕಳಿಸಿದ. ಊರಿಗೆ ಬಂದ ಅಳ್ಳಣ್ಣ, ಈ ದಟ್ಟದರಿದ್ರ ಊರಿನಲ್ಲಿ ಬಹಳದಿನ ಇರಲಾಗಲಿಲ್ಲ. ಅಲ್ಲಿಂದ ತಂದ ಹಣದಲ್ಲಿ ಬಹಳ ಸುಂದರವಾದ ಹುಡುಗಿಯನ್ನು ಮದುವೆಯಾದುದಲ್ಲದೆ, ಇನ್ನುಳಿದ ದುಡ್ಡಿಗೆ ಹೊಳೇನರಸೀಪುರದ ಸಮೀಪ ನೀರಾವರಿ ಗದ್ದೆ ತೆಗೆದು, ಮನೆಯವರೆಲ್ಲಾ ಅಲ್ಲಿಗೆ ಹೋಗಿ ಗೇಯ್ದು ಉಣ್ಣುವಂತೆ ಮಾಡಿ, ಪುನಃ ಬಾಂಬೆಗೆ ಹೊರಡಲು ತಯಾರಾದ.

ಹೊರಡುವ ಮುನ್ನ ಊರಿಗೇ ಸಮಸ್ಯೆಯಂತಿದ್ದ ಕೆಲಹುಡುಗರನ್ನ ಅವರ ತಂದೆ ತಾಯಿಗಳು "ಅಲ್ಲೆಲ್ಲಾರ ಒಂದು ಕೆಲಸಕ್ಕೆ ಸೇರಿಸಿ ಪುಣ್ಯಕಟ್ಟಿಗಳೊ ನಮ್ಮಪ್ಪ, ಈ ಹಾಳುಹುಡುಗರಿಂದ ನಮಿಗೆ ಸುಖಿಲ್ಲ" ಎಂದು ಗೋಗರೆದರು. ಅಳ್ಳಣ್ಣನ ಒಳ್ಳೆತನದೆದುರು ಆ ಹುಡುಗರು ಏನೂ ಮಾಡುವಂತಿರಲಿಲ್ಲ. ಆತ ನಗುತ್ತಲೆ ಆ ಹುಡುಗರ ಮೇಲೆ ತನ್ನ ಸಾಮಾನು ಸರಂಜಾಮನ್ನು ಹೇರಿಕೊಂಡು ಹೊರಟ. ಊರ ಜನ ಬಹಳ ದೂರದವರೆಗೂ ಹೋಗಿ ಕಳಿಸಿ ಬಂದರು.

ಅಂದಿನ ನಮ್ಮೂರ ಸಂಪ್ರದಾಯದಲ್ಲಿ ಯಾರು ಈ ಅಕ್ಕಸಾಲಿಗರ ಮನೆಯಲ್ಲಿ ಉಣ್ಣುತ್ತಿರ ಲಿಲ್ಲ. ಅಷ್ಟೇ ಅಲ್ಲದೆ ಊರ ದೇವಸ್ಥಾನ ಮತ್ತದರ ಎದುರಿಗಿರುವ ರಂಗಮಂಟಪದ ಹತ್ತಿರವೂ ಅವರು ಬರುವಂತಿರಲಿಲ್ಲ. ಅವರ ಮದುವೆ ಮೆರವಣಿಗೆಯೂ ಕೂಡ ದೇವಸ್ಥಾನಕ್ಕೆ ಬರುವಂತಿರಲಿಲ್ಲ. ಇಂತಹ ಕ್ರೂರ ನಿರ್ಬಂಧವನ್ನು ಯಾವ ಮೂರ್ಖ ನಮ್ಮೂರ ಮೇಲೆ ವಿಧಿಸಿದ್ದನೊ ಕಾಣೆ. ಇದೇ ಅಳ್ಳಣ್ಣನ ಅಣ್ಣನ ಮಗ ಮದುವೆಯಾದಾಗ, ಪೋಲೀಸರನ್ನು ಕರೆಸಿ, ಅವರ ರಕ್ಷಣೆಯಲ್ಲಿ ದೇವಸ್ಥಾನದವರೆಗೂ ಮೆರವಣಿಗೆ ಹೋಗಿ ಬಂದಿದ್ದ. ಅಂದ ಮೇಲೆ, ಈ ಅಳ್ಳಣ್ಣನೊಟ್ಟಿಗೆ, ಹೋಗುತ್ತಿರುವ ಹುಡುಗರು ಎಲ್ಲಿ ಊಟ ಮಾಡುತ್ತಾರೆಂಬ ಹಲವರ ಅನುಮಾನದ ಪ್ರಶ್ನೆಗೆ 'ಹೋಟ್ಳಲಿ ತಿಂತವೆ ಬುಡಿ' ಎಂದು ಕಳಿಸಿಕೊಟ್ಟವರು ಸಮಾಜಾಯಿಸಿ ನೀಡಿದ್ದರು. ಅಂದು ಬೊಂಬಾಯಿಯಲ್ಲಿ ಸ್ಥಾಪನೆಗೊಂಡ ಅಳ್ಳಣ್ಣನವರ ಕುಟುಂಬ ನಮ್ಮೂರವರ ಭಾಗಕ್ಕೆ ಒಂದು ಪ್ರವಾಸಿಮಂದಿರದಂತಾಯ್ತು. ಕೇವಲ ಒಂದು ಕಡೆಯ ಗಾಡಿ ಚಾರ್ಜನ್ನು ಜೇಬಿಗೆ ಹಾಕಿಕೊಂಡು ಕಾಣೆಯಾದ ಹುಡುಗರು ನೇರ ಬೊಂಬಾಯಿ ಗೆ ಹೋಗಿ, ಯಾವುದಾದರು ಹೋಟೆಲ್‌ನಲ್ಲಿ ಕೆಲಸ ಸಿಗುವವರೆಗೆ ಅಳ್ಳಣ್ಣನ ಮನೆಯಲ್ಲಿದ್ದು, ಆ ನಂತರ ಬೊಂಬಾಯಿಯ ಜನಸಾಗರದಲ್ಲಿ ಕಾಣೆಯಾಗುತ್ತಿದ್ದವು. ಅವನ್ನೂ ಹುಡುಕಲು ಹೋದ ಊರವರೂ ಅಳ್ಳಣ್ಣನ ಮನೆಯಲ್ಲಿ ಉಳಿದಿದ್ದು, ಬೊಂಬಾಯಿ ನೋಡಿ ಬೆರಗಾಗಿ, ಸುಸ್ತಾಗಿ, ಕೆಲವರು ಹೆದರಿ ಊರಿಗೆ ಬಂದು ಸುಧರಾಯಿಸಿಕೊಳ್ಳುತ್ತಿದ್ದರು.

ಹೀಗೆ ನಮ್ಮೂರಲ್ಲಿ ಬೊಂಬಾಯಿ ನೋಡದ ಕುಟುಂಬವೇಯಿಲ್ಲ. ಈ ಬೊಂಬಾಯಿ ಯಿಂದ ಬಂದ ಹುಡುಗರನ್ನ ನೋಡಲು ಊರೇ ನೆರೆಯುತ್ತಿತ್ತು. ಹೋಗುವಾಗ ಸೀಕಲು

ಕೋತಿಗಳಂತೆ ಹೋದ ಹುಡುಗರು, ಹೋಟೆಲಿನ ಒಳಗೇ ಇದ್ದು ಬೆಂಡಿಗೆ ನೀರು ಬಿದ್ದಂತೆ ಅರಳಿ, ಇಂಗ್ಲೀಶಿನವರನ್ನು ಮೀರಿಸುವಂತೆ ಹೊಳೆಯುವ ಕೈಕಾಲುಗಳನ್ನು ಧಿಮಾಕಿನಿಂದ ಬೀಸಿ ಹಾಕುತ್ತ ಬರುತ್ತಿದ್ದರು. ಅವರನ್ನು ನೋಡಿದ ಕೂಡಲೇ ಊರಲ್ಲಿನ ಇತರ ಹುಡುಗರು ಹೇಳದೆ ಕೇಳದೆ ಬಾಂಬೆಗೆ ಪರಾರಿಯಾಗುತ್ತಿದ್ದರು. ಹೀಗೆ ಹೋದ ಹುಡುಗರೆಲ್ಲಾ ಅವಿದ್ಯಾವಂತರಾದ್ದರಿಂದ ಅವರಿಗಾಗಿ ಹೋಟೆಲ್ ರಚ್ಚಿನ ಕೆಲಸ, ಬಟ್ಟೆ ಮಿಲ್ಲುಗಳು, ಸೋಡಾ ಫ್ಯಾಕ್ಟರಿ, ಬಾರ್‌ಗಳಲ್ಲಿ ಲೋಟ ತಟ್ಟೆ ಎತ್ತುವ ದೈಹಿಕ ಶ್ರಮದ ಕೆಲಸವೆಲ್ಲಾ ರೆಡಿ ಇರುತ್ತಿದ್ದವು. ಅವರು ಊರಲ್ಲಿ ಮಾಡುತ್ತಿದ್ದ ಕೆಲಸಗಳಿಗೆ ಹೋಲಿಸಿದರೆ, ಇವು ಸರಾಗವಾಗಿ ಮಾಡುವ ಕೆಲಸಗಳಾಗಿದ್ದವು. ಅಳ್ಳಣ್ಣ ಬೊಂಬಾಯಿ ತೋರಿಸಿದ್ದರಿಂದ ಊರ ಬಡವರ ಜಮೀನು ಅವರ ಬಳಿಯೇ ಉಳಿಯುವಂತಾಯಿತು. ಅಳ್ಳಣ್ಣ ಕರೆದುಕೊಂಡು ಹೋದ ಎಲ್ಲಾ ಹುಡುಗರು ಬದುಕಿದ್ದಲ್ಲದೆ, ಊರ ಕಡೆ ಜಮೀನು ಹಿಡಿದು ಮನೆಯನ್ನೂ ಕಟ್ಟಿಸಿದವು.

ಈ ಪೈಕಿ ಅಳ್ಳಣ್ಣ ಕರೆದುಕೊಂಡು ಹೋದವನೊಬ್ಬ 'ಡಕಾತಿ' ಎಂಬ ಹೆಸರು ಸಂಪಾದಿಸಿ, ಅವನು ಕಂಡ ಕೂಡಲೇ ಅಳ್ಳಣ್ಣನೇ ಹೆದರಿ ಓಡುವಂತೆ ಬೆಳೆದುಹೋದ. ಭಯಂಕರ ನಟನೆಯ ಆ ವ್ಯಕ್ತಿ ಊರಿಗೆ ಬಂದಾಗ "ನಾನೀಗ ದಿಲೀಪ್ ಕುಮಾರ್ ಮನೆ ಕಾರ್ ಡ್ರೈವರ್" ಎಂದು ಹೇಳುತ್ತಿದ್ದ. ಅದಕ್ಕಿಂತ ಮೊದಲು ರಾಜಕಪೂರ್ ಬಳಿ ಇದ್ದನಂತೆ. ಹೀಗೆ ಹೇಳಿ ಊರವರನ್ನು ಬೆರಗುಗೊಳಿಸುತ್ತಿದ್ದ. ಈ 'ಡಕಾತಿ' ಬಾಂಬೆಗೆ ಹೋದ ಹೊಸದರಲ್ಲೇ ಕೆಲವರ ಬಳಿ ನಂಬಿಕೆಯಾಗಿ ವರ್ತಿಸಿ, ಸಾಲ ಮಾಡುವುದು, ಹೇಳಿದ ಸಮಯಕ್ಕೆ ಸರಿಯಾಗಿ ವಾಪಸ್ ಕೊಡುವುದು. ಕೊಡುವಾಗ ತಾನು ಈಸಿಕೊಂಡ ಸಮಯಕ್ಕೆ ಸರಿಯಾಗಿ ಮರಳಿಕೊಡುವುದರ ಕರಾರುವಾಕ್ ಸಾಕ್ಷಿಗೆ ಗಡಿಯಾರ ತೋರಿ ಹಲ್ಕಿರಿಯುವುದು, ಇಂತಹ ನಂಬಿಗಸ್ಥನಿಗೆ ಸಾವಿರಾರು ರೂಪಾಯಿ ಸಾಲಕೊಟ್ಟ ಕೂಡಲೇ ಆ ಪ್ರಾಂತ್ಯವನ್ನೇ ಖಾಲಿ ಮಾಡಿಬಿಡುವುದು ಮಾಡುತ್ತಿದ್ದ. ಒಂದು ಸಲ ಹೀಗೆ ಮೋಸ ಹೋದವನೊಬ್ಬ ತನ್ನ ಹಣ ವಸೂಲಾತಿಗೆ ಬದಲು 'ಡಕಾತಿ'ಯ ತಲೆ ಬೋಳಿಸಿ ಬಿಟ್ಟುಕಳಿಸಿದ. ಅದೇ ಸಮಯಕ್ಕೆ ಅಳ್ಳಣ್ಣ ಸಿಕ್ಕಿದಾಗ "ಇದ್ಯಾಕ್ಲ ಇಡೀ ಬೊಂಬಾಯಿ ದೇವಾನಂದನಂಗೆ ತಲೆ ಕಟ್ ಮಾಡಿಸಿಗಂಡಿದ್ರೆ ನೀನು ಬೋಳಿಸಿದ್ದಿಯಲ್ಲ, ಯಾಕೆ ನಿಮ್ಮಪ್ಪ ನಿಮ್ಮವ್ವ ಯಾರಾರ ಸತ್ರೇನ್ಲ" ಎಂದಿದ್ದಕ್ಕೆ "ಅಯ್ಯೋ ತಲೆಗೆ ಹೇನುಹತ್ತಿಬಿಟ್ಟದೂ ಕಣಣ್ಣ" ಎಂದನಂತೆ, ಮತ್ತೊಮ್ಮೆ ಸಿಕ್ಕಾಗ ಕುಂಟುತ್ತಿದ್ದನಂತೆ, ಕೇಳಿದ್ದಕ್ಕೆ "ಯಾವಳೂ ಬಾಳೆಹಣ್ಣಿನ ಸಿಪ್ಪೆ ಯಸ್ತಿದ್ಲು ಕಣಣ್ಣ, ಕಾಲು ಮಡಿಗಿದೆ ನೋಡು, ಜಾರಿ ಚರಂಡಿಗೆ ಬಿದ್ದೋದೆ" ಎಂದನಂತೆ. ವಾಸ್ತವವಾಗಿ ಹಣ ಕೊಟ್ಟು ಮೋಸಹೋದವನೊಬ್ಬ ತೊಡೆಗೆ ಬ್ಲೇಡಾಕಿದ್ದನಂತೆ. ಇದೇನಾದರಾಗಲಿ ಈ ಡಕಾತಿ ಬೊಂಬಾಯಿ ಎಂಬ ಮಾಯಾನಗರಿ ಬಗ್ಗೆ ನಮಗೆ ಆಗಾಗ್ಗೆ ವಿಸ್ಮಯ ಹುಟ್ಟಿಸುತ್ತಿದ್ದ. ಒಮ್ಮೆ ಇದ್ದಕ್ಕಿದ್ದಂತೆ ಗ್ರಾಂಪೋನು ತಂದು ಊರೆಲ್ಲಾ ನಾಗಾಲೋಟದಲ್ಲಿ ಓಡಿ ಬಂದು ಅವನ ಮನೆಯ ಮುಂದೆ ಜಾಮಾಗುವಂತೆ ಮಾಡಿದ್ದ. ಒಮ್ಮೆ ರೇಡಿಯೋ ತಂದು ಕೈಲಿಡಿದುಕೊಂಡು ಹಾಡಿಸುತ್ತ ಒಂದು ಮಾತೂ ಆಡದೆ ಯಾವುದೋ ಲೋಕದ ಅವದೂತನಂತೆ ಕೂತಿದ್ದ. ಲೆಗ್ ಹಾರ್ಮೋನಿ ತಂದು ಅದು ಬರದಿದ್ದರೂ ಬಾರಿಸುತ್ತ ಕೂತಿದ್ದ.

ಒಮ್ಮೆ ಮಾತ್ರ ಉಬ್ಬಲು ಬಡಿಯುವ ಶಬ್ದ ಮಾಡುವ ಬುಲೆಟ್ ತಂದು ನಿಲ್ಲಿಸಿದ. ಅದನ್ನು ಪಕ್ಕದ ಹಳ್ಳಿಯ ಗೌಡನೊಬ್ಬ ಕಲಿಯಲು ಹೋಗಿ ಎಮ್ಮೆ ಕೊಟ್ಟಿಗೆಯಲ್ಲಿ ಸ್ಟಾರ್ಟ್ ಮಾಡಿಕೊಂಡು ಬಿದ್ದು, ಅದರ ಶಬ್ದಕ್ಕೆ ದನಕರುಗಳೆಲ್ಲಾ ಕಿತ್ತುಕೊಂಡು ಓಡಿದ್ದವು. ಮೊದಲು ನೀರು ಹೊಡೆಯುವ ಮಿಷನ್ ತಂದವನೂ ಇವನೆ. ಇಂತಹ ಸಾಹಸಿ ಊರಲ್ಲಿ ಹೆಂಡತಿ ಮಕ್ಕಳಿದ್ದರೂ, ಯಾವುದೊ ಅಸ್ಸಾಂ ಮೂಲಕ ಹುಡುಗಿ ಕಟ್ಟಿಕೊಂಡು ಕಾಣೆಯಾದ.

ಅಳ್ಳಣ್ಣನೇ ಕರೆದುಕೊಂಡು ಹೋದ ಮತ್ತೊಬ್ಬನ ಹೆಸರು ದೊಡ್ಡಡುಗ. ಅದರೆ ದೊಡ್ಡಡುಗ ಬಾಂಬೆಯಲ್ಲಿ ರಾಜುವಾಗಿದ್ದ. ಹಿಂದಿ ಸಿನಿಮಾ ನಟರಿಗಿಂತಲೂ ಸುಂದರನಾಗಿದ್ದ ರಾಜುವನ್ನು, ಅವನು ಕೆಲಸ ಮಾಡುವ ಮನೆಯ ಸಾಹುಕಾರನ ಮಗಳೇ ಮೋಹಿಸಿದಳು. ಹೆದರಿದ ರಾಜು ಊರಿಗೆ ಓಡಿಬಂದ, ಬರುವಾಗ್ಗೆ ತನ್ನ ಹಳ್ಳಿ ಹೆಸರು ಹೇಳುವುದಕ್ಕೆ ನಾಚಿಕೆ ಯಾಗಿ, ನಾಗಮಂಗಲ ಭಾಗದಲ್ಲಿ ದೊಡ್ಡ ಊರಾದ 'ಹಿರಿಸೇವೆ' ಎಂದು ಬಂದಿದ್ದ. ಆ ಹೆಣ್ಣುಮಗಳು ಹಿರಿಸೇವೆವರೆಗೂ ಬಂದು ತಪಾಸಣೆ ಮಾಡಿ ಹೋಗಿದ್ದಳು. ಈಗ ದೊಡ್ಡಣ್ಣ ನಾಗಿರುವ ಇವನಿಗೆ ಇದನ್ನೆಲ್ಲ ಜ್ಞಾಪಿಸಿದರೆ, ಆ ಮುದಿಮುಖದಲ್ಲೂ ಕಳೆಯೇರಿ ಕಣ್ಣು ಮಿನುಗುತ್ತವೆ.

ಮತ್ತೊಬ್ಬ ಚೆನ್ನಮಲ್ಲ. ಈತ ಬಂದರಂತೂ ಇಡೀ ಊರು ಸಂಭ್ರಮಗೊಳ್ಳುತ್ತಿತ್ತು. ಕುಡಿದು ಹಿಂದಿ ಸಿನಿಮಾ ನಟರಂತೆ ಬೀದಿಯಲ್ಲಿ ನರ್ತಿಸುತ್ತಿದ್ದ ಚೆನ್ನಮಲ್ಲ, ಬಾಂಬೆಯಿಂದ ತಂದ ದುಡ್ಡಿನಲ್ಲಿ ಎಲ್ಲರಿಗೂ ಕುಡಿಸಿ ತಿನ್ನಿಸಿ, ಸಂಬಂಧಿಗಳಿಗೆ ಬೇಕಾದ್ದನ್ನು ತಂದುಕೊಟ್ಟು, ಕಡೆಗೆ ಯಾರ್‍ಯಾರ ಬಳಿಯೋ ಗಾಡಿಚಾರ್ಜು ಕೇಳುತ್ತ ಕನಿಕರಕ್ಕೆ ತುತ್ತಾಗಿ ಹೋಗುತ್ತಿದ್ದ. ಒಮ್ಮೆ ಮಾತ್ರ ಮಧ್ಯರಾತ್ರಿಯಲ್ಲಿ ಒಂದು ಲಾರಿ ಉದ್ದದ ಕಾರನ್ನ ತಂದು ಊರ ಮುಂದೆ ನಿಲ್ಲಿಸಿಕೊಂಡು ಹಾರನ್ ಮಾಡಿದ ಹೊಡೆತಕ್ಕೆ ಬೆಚ್ಚಿದ ಊರು, ಎದ್ದು ಓಡಿಬಂದಿತ್ತು. ಅದರೊಳಕ್ಕೆ ಒಂದಿಷ್ಟು ಹರಕಲು ಅಂಗಿ ಚೆಡ್ಡಿ ಉಟ್ಟ ಜನರನ್ನು ತುಂಬಿಕೊಂಡು ಹೋಗಿ, ತಿರುಪತಿ ತೋರಿಸಿ ತಲೆ ಬೋಳಿಸಿ ತಂದು ಬಿಟ್ಟುಹೋಗಿದ್ದ. ಇಂತ ಚೆನ್ನಮಲ್ಲಣ್ಣ ಈಗ ಗಾಣಕ್ಕೆ ನಿತ್ರಾಣವಾಗಿ ಕಬ್ಬು ಕೊಡುವುದುದನ್ನು ನೋಡಿದರೆ, ಈ ಬೊಂಬಾಯಿಯ ಮಾಯೆ ಗೊತ್ತಾಗುತ್ತದೆ.

ಬೊಂಬಾಯಿಗೆ ಮುಪ್ಪಿನ ವ್ಯಕ್ತಿಗಳ ಅಗತ್ಯವಿಲ್ಲ. ಅದೇನಿದ್ದರೂ ಪ್ರಾಯವನ್ನು ಬಳಸಿಕೊಂಡು ಬಿಸಾಕಿಬಿಡುತ್ತದೆ. ಅರ್ಧ ಶತಮಾನ ಬೊಂಬಾಯಿಯಲ್ಲಿದ್ದರೂ ಅಳ್ಳಣ್ಣ ಬಾಂಬೆಯಲ್ಲಿರಲಾಗಲಿಲ್ಲ. ಊರಿಂದ ಹೋದ ಜನಕ್ಕೆಲ್ಲಾ ಆಶ್ರಯಕೊಟ್ಟು ಅವರವರ ಊರಿನ ಆಸ್ತಿ ಅಡವು ಹಾಗೆ ಇರುವಂತೆ ಮಾಡಿದ ಅಳ್ಳಣ್ಣ ಧಾರಾಳಿಯಾದ ಕಾರಣಕ್ಕೆ, ಬೊಂಬಾಯಿ ಯಿಂದ ಬರುವಾಗ ಬರಿಗೈಯಾಗಿದ್ದರು. ಅಷ್ಟರಲ್ಲಾಗಲೇ ಮೊದಲ ಹೆಂಡತಿ ತೀರಿಹೋಗಿ ಗಂಡು ಮಕ್ಕಳಿಲ್ಲ ಎಂದು ಎರಡನೇ ಮದುವೆಯಾಗಿದ್ದರು. ಇದು ಅವರ ಸಂಬಂಧಿಗಳಿಗೆ ಇಷ್ಟವಿಲ್ಲದ ವಿಷಯವಾದ್ದರಿಂದ, ಊರಿಗೆ ಬಂದ ನಂತರ ಅಳ್ಳಣ್ಣ ಏಕಾಂಗಿಯಾದರು. ತನ್ನ

ಕಿರಿ ಹೆಂಡತಿಯೊಡನೆ ಮನೆಯಲ್ಲೇ ಇರತೊಡಗಿದರು. ಬೊಂಬಾಯಿಯಲ್ಲಿ ಅವರ ಆಶ್ರಯ ಪಡೆದು ಮೇಲೆ ಬಂದ ಜನ, ಅವರು ಊರಿಗೆ ಬಂದ ನಂತರ ಹೋಗಿ ನೋಡಿ ಮಾತನಾಡಿಸುವ ಗೋಜಿಗೆ ಹೋಗಲಿಲ್ಲ. ಜೋತು ಮೊಲೆಯ ನಾಯಿಯನ್ನು ಹಿಡಿದು ನಿಲ್ಲಿಸಿ ಹಾಲ್ಹೀರಿ ಸಾಲದೆ ಹೋದ ಕೂಡಲೇ ಅಮೇಧ್ಯ ಹುಡುಕುತ್ತ ಹೋಗಿ ಬಿಡುವ ಬಲಿತ ನಾಯಿ ಮರಿಗಳಂತೆ, ಜನ ಅರುಗಾಸಿದರು. ಇದು ಯಾರ ಗಮನಕ್ಕೂ ಬರಲಿಲ್ಲ.

ಅಳ್ಳಣ್ಣನ ತಲೆಮಾರಿನ ನಂತರ ಮತ್ತೊಂದು ತಲೆಮಾರು ಬೊಂಬಾಯಿಗೆ ಹೋಗಿ ಬರತೊಡಗಿತು. ಇದಾದ ನಂತರ ನನ್ನ ವಾರಿಗೆಯವರೆಲ್ಲಾ ಹೋದರು. ಸ್ಕೂಲಿಗೆ ಹೋಗದಿದ್ದರೆ ನಾನೂ ಇಷ್ಟೊತ್ತಿಗೆ ಅಲ್ಲೇ ಇರುತ್ತಿದ್ದೆ. ಆದರೂ ಈ ಬೊಂಬಾಯಿ ಹೇಗಿರಬಹುದೆಂದು ನೊಡಿ ಬರಲು ಹೋದೆ. ದಾದರ್‌ನಲ್ಲಿ ಇಳಿದ ಕೂಡಲೇ ನಮ್ಮ ಶಾಂತಿನಾಥ ದೇಸಾಯಿಯವರು ಬರದಿರುವ 'ಮುಕ್ತಿ ಕಾದಂಬರಿಯ ನಾಯಕನಿಗಾದ ಅನುಭವವಾಯಿತು. ಆ ಜನಸಾಗರ ನೋಡಿ ದಂಗುಬಡಿದು ಹೋದೆ. ನಮ್ಮ ಕಡೆಯಿಂದ ಹೋದ ಹುಡುಗರೆಲ್ಲಾ ಕುರ್ಲಾ ಸಮೀಪದ ಜೋಪಡಪಟ್ಟಿಯಲ್ಲಿವೆ. ಈ ಜೋಪಡಪಟ್ಟಿಯ ತಲೆಯಮೇಲೆ ಐದುಹತ್ತು ನಿಮಿಷಕ್ಕೊಂದು ದೈತ್ಯಾಕಾರದ ವಿಮಾನಗಳು ಹಾರಿಹೋಗುವುದರಿಂದ, ಆಗಾಗ್ಗೆ ಬರಸಿಡಿಲಿನ ಶಬ್ದ ಬೆಚ್ಚಿಸುತ್ತಲೇ ಇರುತ್ತದೆ. ನನ್ನ ಊರ ಕಡೆಯ ಹುಡುಗರನ್ನು ನೋಡುವ ಸಲುವಾಗಿ ನನಗೆ ಮೊದಲು ದರ್ಶನವಾದದ್ದು ಸ್ಲಂಗಳು, ಈ ಸ್ಲಂಗಳ ದರ್ಶನದಿಂದ ಅನಂತರ ನೊಡಿದ ಬೊಂಬಾಯಿಯ ಯಾವ ತಾಣಗಳೂ ನನಗೆ ಸುಂದರವಾಗಿ ಕಾಣಲಿಲ್ಲ. ಹೋಟೆಲ್ ಹಿಂಭಾಗದಲ್ಲಿ ಎಂಜಲು ತೊಳೆಯುವ ಹುಡುಗರು, ಫುಟ್‌ಪಾತಿನಲ್ಲಿ ಇಡ್ಲಿ ತಲೆಬಾಡು ಬೇಯಿಸಿ ಮಾರುವ ಹುಡುಗರು, ಹೀಗೆ ಕಷ್ಟಪಡುವ ಇವರನ್ನು ನೋಡಿ, ನಮ್ಮ ಪ್ರಾಂತ್ಯಕ್ಕೆ ಬಹಳ ಹಿಂದೆಯೇ ಹೇಮಾವತಿ ನದಿ ನೀರು ಬಂದಿದ್ದರೆ, ಈ ಹಾಲುಗಲ್ಲದ ಮಕ್ಕಳು ತಮ್ಮ ಅಪ್ಪ ಅವ್ವ ಊರನ್ನು ಬಿಟ್ಟು ಸಾವಿರಾರು ಮೈಲಿದೂರದ ಈ ಬೊಂಬಾಯಿಯಲ್ಲಿ ಇಂತಹ ಜೀತಮಾಡಬೇಕಿತ್ತೆ ಅನಿಸಿತು. ಹೋಟೆಲ್ ಸೇರಿ ಲೋಟ ತೊಳೆಯಲು ಬೊಂಬಾಯಿಗೇ ಬರಬೇಕೆ, ಬೆಂಗಳೂರು ಮೈಸೂರಿಲ್ಲವೆ' ಎಂದು ಯೋಚಿಸಿದಾಗ, ನಮ್ಮ ಜನ ಇಂತಹ ಕೆಲಸ ಮಾಡುವವರನ್ನು ನೋಡುವ ದೃಷ್ಟಿಯಿಂದ ತಪ್ಪಿಸಿಕೊಳ್ಳಲು, ಕಾಣದ ಕಣ್ಣುಮರೆಯ ಬೊಂಬಾಯಿಗಿಂತ ಸೂಕ್ತ ಜಾಗವಿಲ್ಲ ಅನ್ನಿಸಿತು.

ಒಂದು ಹಂತದಲ್ಲಿ ಈ ಬೊಂಬಾಯಿಗೆ ಬರಲೇಬಾರದಿತ್ತು ಅನ್ನಿಸಿತು. ಸುಮ್ಮನೆ ಊರಿಗೆ ಬರುವವರ ಬಾಯಿಂದ ಬಾಂಬೆ ವಿಷಯ ಕೇಳುತ್ತ ನನ್ನ ಕಲ್ಪನೆಯ ಬೊಂಬಾಯಿಯಲ್ಲಿ ವಿಹರಿಸಬಹುದಿತ್ತು. ಶ್ರೀಕಂಠಾಚಾರಿ ಬಂದಾಗ ಬರೀ ಹಿಂದಿ ಸಿನಿಮಾ ಕತೆ ಹಾಡುಗಳನ್ನು ಹೇಳುತ್ತಿದ್ದ. ಶಂಕರ್ ದಾದಾ ಬಂದರೆ ಬಾಂಬೆ ಭೂಗತ ಲೋಕ ಮತ್ತು ಹೊಡೆದಾಟದ ಸುದ್ದಿ ಹೇಳುತ್ತಿದ್ದ. ಚೆನ್ನಮಲ್ಲಣ್ಣ ಕಾರು ಬಸ್ಸು ರೈಲಿನ ಸುದ್ದಿ ಹೇಳುತ್ತಿದ್ದ. ನಾಗರಾಜನಂತೂ ಬರೀ ಬಾಂಬೆ ಹುಡುಗಿಯರ ಸುದ್ದಿ ಹೇಳುತ್ತಿದ್ದ. ಹೀಗೆ ಇವರೆಲ್ಲ ನನ್ನಂಥವರ ಮನಸ್ಸಿನಲ್ಲಿ

ಬಾಂಬೆಯನ್ನು ಬೆಳೆಸಿ ಬೆರಗುಗೊಳಿಸಿದ್ದರು. ಆದರೆ ನಾನೇ ಕಣ್ಣಾರೆ ಕಂಡುಬಿಟ್ಟಾಗ, ಬೊಂಬಾಯಿ ಭಾರತದ ದುರ್ಮಾಂಸಕ್ಕಂಟಿದ ವ್ರಣದಂತೆ ಕಂಡುಬಿಟ್ಟಿತು. ಯಾಕೆಂದರೆ ನಮ್ಮ ಪ್ರಾಂತ್ಯದ ಹೆಣ್ಣುಮಕ್ಕಳು ಬಾಂಬೆ ಕಾಮಾಟಿಪುರಕ್ಕೂ ಬಂದುಬಿಟ್ಟಿದ್ದವು. ಅವರನ್ನ ನೋಡಿ ಮಾತನಾಡಿಸಲು ಧೈರ್ಯ ಸಾಲದೆ ಹೊರಟುಬಿಟ್ಟೆ.

ಅಳ್ಳಣ್ಣನ ಕಾಲದಲ್ಲಿ ಬಾಂಬೆಗೆ ಹೋಗಿ ಬಂದವರು ಉದ್ಧಾರವಾಗಿದ್ದು ಬಿಟ್ಟರೆ, ಈಚಿನ ಹುಡುಗರು ಸಂಪೂರ್ಣ ಹಾಳಾಗಿ ಬರುತ್ತಿವೆ. ಕೆಲವರು ಎಂದೂ ಬರದಂತಾಗಿದ್ದಾರೆ. ಈಚೆಗೆ ಸತ್ತ ಒಂದಿಬ್ಬರಿಗೆ ಏಡ್ಸ್ ಇದ್ದಿದ್ದು ಪತ್ತೆಯಾಯ್ತು. ಕಡೆಗೂ, ಈ ಬಾಂಬೆ ಸಹವಾಸದಿಂದ ಮುಂದೆ ನಮ್ಮ ಏರಿಯಾಕ್ಕೆ ಅಪತ್ತು ಬರಬಹುದೇನೂ ಎಂಬ ಭಯವಾಗಿದೆ. ಸಾವಿರಾರು ಮೈಲು ದೂರವಿದ್ದು ನನ್ನ ತಲೆಯೊಳಗೆ ಸ್ವರ್ಗದಂತೆ ಕಂಡಿದ್ದ ಬೊಂಬಾಯಿಗೆ ಈಗ ನಮ್ಮ ಪ್ರಾಂತ್ಯದಿಂದ ಎರಡು ಬಸ್ಸು ಹೋಗಿ ಬರುತ್ತಿವೆ. ಬಾಂಬೆ ದಾರಿ ಸಂತೆದಾರಿಯಾಗಿ ಹೋಗಿದೆ. ಆದರೆ ನಮ್ಮ ದೇಶದ ಹಳ್ಳಿಗಳ ಜತೆ ಪಟ್ಟಣಗಳು ತಾವೂ ಅಭಿವೃದ್ಧಿಯಾಗುವಂತೆ ಮಾಡುವುದನ್ನು ಬಿಟ್ಟು, ಹಳ್ಳಿ ಹಾಳುಮಾಡಿ, ತಾವು ಬೆಳೆದು, ಆ ಮುಖಾಂತರ ಎಲ್ಲವೂ ಸರ್ವನಾಶದ ಕಡೆ ಹೊರಟಂತೆ ಕಾಣತೊಡಗಿದೆ.

●

# ಮುದ್ದಣನ ನಮಸ್ಕಾರ ಯಾರಿಗೆ?

● ಬಾಲಸುಬ್ರಹ್ಮಣ್ಯ ಕಂಜರ್ಪಣೆ

ಮುದ್ದಣನ ಕುರಿತು ಬರೆಯುತ್ತ ಕುರ್ತಕೋಟಿಯವರು 'ಮೇಲುನೋಟಕ್ಕೆ ಅವನು ಆಧುನಿಕತೆಯಿಂದ ದೂರವಾಗಿದ್ದಾನೆಂದು ತೋರಬಹುದು. ಆದರೆ ಅವನು ಆಧುನಿಕತೆಯಿಂದ ಬೆನ್ನು ತಿರುಗಿದ್ದು, ಹೊಸ ಸಾಹಿತ್ಯಕ್ಕೆ ತಡೆಯುಂಟು ಮಾಡುವುದಕ್ಕಾಗಿರದೆ, ಪ್ರಾಚಿನ ಸಾಹಿತ್ಯಕ್ಕೆ ನಮ್ಮೆಲ್ಲರ ವತಿಯಿಂದ ಕೊನೆಯ ನಮಸ್ಕಾರ ಹೇಳುವುದಕ್ಕೆ' ಎನ್ನುತ್ತಾರೆ.

ನನಗೆ ಈ ಮಾತುಗಳು ಆಸಕ್ತಿ ತಂದಿವೆ. ಕುರ್ತಕೋಟಿಯವರು ಏನನ್ನು ಹೇಳುವುದಾದರೂ ಅತ್ಯಂತ ಆಸ್ಥೆಯಿಂದ, ಪ್ರಾಮಾಣಿಕತೆಯಿಂದ ಮತ್ತು ಗಹನ ಗಂಭಿರರಾಗಿಯೇ ಹೇಳುತ್ತಾರೆ. ಮುದ್ದಣನ ಕುರಿತು ಅವರು ಹೇಳಿದ ಮಾತುಗಳು ಕ್ಲೀಷೆಯಾಗಬಹುದಾದಷ್ಟು ಸಲ ಉಧೃತಗೊಂಡಿವೆ. ಮುದ್ದಣನ ಬಗ್ಗೆ ಅಷ್ಟನ್ನೇ ಹೇಳಿ ಕೈತೊಳೆದ್ದುಕೊಳ್ಳುವವರು ಅನೇಕರಿದ್ದಾರೆ. ಇನ್ನು ಹೆಚ್ಚೆಂದರೆ ಎಸ್.ವಿ.ರಂಗಣ್ಣನವರು ಹೇಳಿದ ಸಾಮಾನ್ಯ ಚಿತ್ರಕ್ಕೆ ಸುವರ್ಣ ಚೌಕಟ್ಟು ಪದಪುಂಜವನ್ನು ಗುಣಾತ್ಮಕವಾಗಿ ಅಂದರೆ ಈಗಾಗಲೇ ಬಳಸಿಕೊಂಡ, ಕಾವ್ಯವಾದ ಕಥೆಯನ್ನು ಹೊಸ ವಿನ್ಯಾಸದಲ್ಲಿ ಮುದ್ದಣ ರಚಿಸಿದ ಎಂಬಂತೆಯೂ, ಅಥವಾ ಋಣಾತ್ಮಕವಾಗಿ ಅಂದರೆ ಹೊಸ ವಿನ್ಯಾಸದ ಹೊರತಾಗಿ ಕೃತಿ ಅರ್ಥಪೂರ್ಣವೆನಿಸುವುದಿಲ್ಲ ಎಂಬಂತೆಯೋ ಅಭಿಪ್ರಾಯ ಬರುವಂತೆ ವರ್ಣಿಸುವುದು. ಮುದ್ದಣನನ್ನು ಪ್ರಾಚೀನ ಕಾವ್ಯಕ್ಕೆ ವಿದಾಯ ಹೇಳಿದ ಆಧುನಿಕನೆಂಬಂತೆ ವಿಚಾರಿಸುವಾಗ, ಕುರ್ತಕೋಟಿಯವರೂ ಸೇರಿದಂತೆ ನಮ್ಮ ಅನೇಕ ಹಿರಿಯ ವಿಮರ್ಶಕರು ಮುದ್ದಣನ ಕಾಲದಲ್ಲಿ, ಅಂದರೆ ೧೯ನೇ ಶತಮಾನದ ಅಂತ್ಯದಲ್ಲಿ ಮತ್ತು ೨೦ನೇ ಶತಮಾನದ ಆದಿಯಲ್ಲಿ(ಮುದ್ದಣ ೧೯೦೧ ರಲ್ಲಿ ತೀರಿಕೊಂಡದ್ದನ್ನು ನೆನಪಿನಲ್ಲಿಟ್ಟೂ) ಇದ್ದಂತಹ ಭಾರತದ ಪರಿಸ್ಥಿತಿಯನ್ನು ಮತ್ತು ಇಂಗ್ಲೀಷ್ ಭಾಷೆ ಮತ್ತು ಸಂಸ್ಕೃತಿಯ ಪ್ರಭಾವದಿಂದಾಗಿ ದೇಶಿ ಭಾಷೆಗಳು (ನಮ್ಮ ಸಂದರ್ಭದಲ್ಲಿ ಕನ್ನಡ) ನಲುಗಿದ್ದನ್ನು ಮತ್ತು ಮುದ್ದಣನ ಸಮಕಾಲೀನ ಅನೇಕ ಕನ್ನಡ ಸಾಹಿತಿಗಳ ಪ್ರಯೋಗಗಳನ್ನೂ ಆಧುನಿಕ ದೃಷ್ಟಿಕೋನ ಗಳನ್ನೂ ಗೌಣವಾಗಿ ಕಂಡರೇನೋ ಅನ್ನಿಸಿದೆ.

ಹಳೆಯ ಸಾಹಿತ್ಯವು ಸಂಸ್ಕೃತದಿಂದ ಕನ್ನಡಕ್ಕೆ ಹೊರಳುವ ಮೊದಲು ಅದು ತನ್ನ ಕಿರೀಟವನ್ನಿಳಿಸಿ ಜನರ ಬಳಿಗೆ ಬರಲು ಉದ್ದೇಶಿಸಿರಬೇಕು. ಪಂಡಿತರ ಪಾಲಾದ ಸಂಸ್ಕೃತದಿಂದ ಜನ ದೂರವಾದರು. ಅವರನ್ನು ಅಪ್ಪಿಕೊಂಡದ್ದು ಕನ್ನಡ. ಕನ್ನಡ ಆಡುಭಾಷೆ, ನಾಡ ಭಾಷೆಯಾಗಿ ಜನಪರವಾದಂತೆಲ್ಲ ಕನ್ನಡದಲ್ಲೇ ಸಾಹಿತ್ಯ ಸೃಷ್ಟಿಯಾಗತೊಡಗಿತ್ತು. ಸಂಸ್ಕೃತ ನಿಧಾನಕ್ಕೆ ಹಿಂದೆ ಸರಿದಿತ್ತು. ಮಹಲಿಂಗರಂಗನ 'ಅನುಭವಾಮೃತ'ದಲ್ಲಿ ಸಂಸ್ಕೃತ ಎಷ್ಟು ಜನದೂರವಾಗಿದೆಯೆಂದೂ ಕನ್ನಡ ಎಷ್ಟು ಜನಸನಿಹವಿದೆಯೆಂಬುದನ್ನು ವರ್ಣಿಸಲಾಗಿತ್ತು.

ಆದರೆ ಕನ್ನಡವೂ ಕ್ರಮೇಣ ಕ್ಲಿಷ್ಟತೆಯನ್ನು ಪಡೆಯಿತು. ಹಳತಾದ್ದಕ್ಕೆ ಹಳಗನ್ನಡ ವಾಯಿತೋ ಅಥವಾ ಹಳಸಿದ್ದಕ್ಕೆ ಹಳಗನ್ನಡವಾಯಿತೋ ಎಂದು ಹೇಳುವುದು ಕಷ್ಟ. ಒಂದು ಐತಿಹಾಸಿಕ ಘಟ್ಟದಲ್ಲಿ ಒಂದು ಭಾಷೆ-ಸಾಹಿತ್ಯ-ಸಂಸ್ಕೃತಿ ಹೇಗಿತ್ತು ಎಂಬುದನ್ನು ಅಧ್ಯಯನ ಮಾಡುವುದಕ್ಕಷ್ಟೇ ಒಂದು ಸಾಹಿತ್ಯ ಪ್ರಕಾರವನ್ನು ಕಲಿಯುವುದಿಲ್ಲ; ಅಲ್ಲಿಂದ ಉಳಿಯುವ ಬೆಳೆಯುವ ಮೌಲ್ಯಗಳನ್ನು, ಕಾಣ್ಕೆಗಳನ್ನು ಪರಿಭಾವಿಸುವ ಉದ್ದೇಶದಿಂದಲೂ ಸಾಹಿತ್ಯವನ್ನು ಕಲಿಯಬಹುದು.

ಹಳಗನ್ನಡ ತನ್ನ ಎಲ್ಲ ಶ್ರೀಮಂತಿಕೆಯೊಂದಿಗೂ ಸೇಫ್ ಪಾಸಿಟ್ ಲಾಕರಿನಲ್ಲಿಟ್ಟ ಬಂಗಾರ ದೊಡವೆಗಳಂತೆ ವಿಶೇಷ ಸಂದರ್ಭಗಳಲ್ಲಷ್ಟೇ ಮತ್ತು ಸಾಮಾನ್ಯ ಶಿಕ್ಷಣಕ್ಕೆ ಸ್ಯಾಂಪಲ್ಲು ಗಳಾಗಿಯೂ ಉನ್ನತ ಶಿಕ್ಷಣದ ವಿಶೇಷ ಜ್ಞಾನವೆಂಬಂತೆಯೂ ಕಲಿಯಲ್ಪಟ್ಟಿತು. ಇಂದಿಗೂ ಪಂಪ-ರನ್ನರು ವಿಶ್ವವಿದ್ಯಾಲಯಗಳೊಳಗೇ ಪ್ರೇತಾತ್ಮಗಳಂತೆ ಸುತ್ತುತ್ತವೆಯೇ ಹೊರತು ಜನನಾಡಿಗಳಲ್ಲಲ್ಲ. ಅಲ್ಲಿರುವುದು ಆಯಾ ಕಾಲದ ಮಾತುಗಳಲ್ಲಿ ಪ್ರಕಟಗೊಳ್ಳುವ ಜ್ಞಾನ ಮತ್ತು ಮೌಖಿಕ ಪರಂಪರೆಯ ಜಾನಪದ ಸಿರಿ.

ಈ ಮಾತನ್ನು ಸಮರ್ಥಿಸಲು ನಾನು ಮತ್ತೆ ಕುರ್ತಕೋಟಿಯವರು ಕನ್ನಡ ಆಧುನಿಕ ಕಾವ್ಯದ ಕುರಿತು ಬರೆದ 'ಮಂಗಳೂರು ಕವಿಗಳು ಹಳಗನ್ನಡ ಕಾವ್ಯದ ಓಜಸ್ಸು ಸಾಮರ್ಥ್ಯ ಗಳನ್ನು ತಮ್ಮ ಕಾವ್ಯಕ್ಕೆ ತಂದುಕೊಂಡರು. ಗೋವಿಂದ ಪೈ, ಶಂಕರ ಭಟ್ಟರು ಹಾಗು ಮುಳಿಯ ತಿಮ್ಮಪ್ಪಯ್ಯನವರ ಕಾವ್ಯದಲ್ಲಿ ಈ ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ ಎಂಬ ವಾಕ್ಯಗಳನ್ನು ನೆನಪಿಸುತ್ತೇನೆ. ಮೇಲೆ ಹೇಳಿದ ಕಾಲಾವಾಧಿಯಲ್ಲಿ ಮಂಗಳೂರು, ಮೈಸೂರು, ಧಾರವಾಡ ಮುಂತಾದ ಇತರ ಕನ್ನಡ ಕೇಂದ್ರಗಳಲ್ಲೂ ಕನ್ನಡ ಸಾಹಿತ್ಯ ಹಳಗನ್ನಡದ ಕವಚವನ್ನು ಕಳಚಿ ಹೊಸಗನ್ನಡದ ಮೃಣ್ಮಯತೆಯನ್ನು ರೂಢಿಸಲಾರಂಭಿಸಿತ್ತು. ಇದು ಗದ್ಯ-ಪದ್ಯಗಳೆರಡರಲ್ಲೂ ಕಾಣಿಸುವಂತಿತ್ತು. ೧೮೪೩ರಷ್ಟು ಹಿಂದೆಯೇ ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ಪ್ರಕಟವಾಗಿ ಕನ್ನಡ ಪತ್ರಿಕೋದ್ಯಮ ಹುಟ್ಟಿತ್ತು. ಆಧುನಿಕ ಕನ್ನಡ ಪ್ರಚಾರವಾಗುವು ದಕ್ಕೆ ಪತ್ರಿಕೋದ್ಯಮಕ್ಕಿಂತ ಉತ್ತಮ ಮಾಧ್ಯಮವಿನ್ನೇನಿದ್ದೀತು? ಈ ಕಾಲದಲ್ಲಿ ಬಿ. ವೆಂಕಟಾ ಚಾರ್ಯರು ಬಂಕಿಮಚಂದ್ರರ ಕೃತಿಗಳನ್ನು, ಬಸವಪ್ಪ ಶಾಸ್ತ್ರಿಗಳು ಸಂಸ್ಕೃತದಿಂದ 'ಶಾಕುಂತಲ' ವನ್ನು, ಎಂ.ಎಲ್. ಶ್ರೀಕಂಠೇಶಗೌಡರು ಇಂಗ್ಲೀಷನಿಂದ ಶೇಕ್ಸ್ಪಿಯರನ ಮ್ಯಾಕ್‌ಬೆತ್ತನ್ನು,

ಕನ್ನಡಕ್ಕೆ ಅನುವಾದಿಸಿದ್ದರಲ್ಲದೆ ಗಳಗನಾಥ, ಕೆರೂರ ವಾಸುದೇವಾಚಾರ್ಯ, ಎಂ.ಎಸ್. ಪುಟ್ಟಣ್ಣ, ಗುಳವಾಡಿ ವೆಂಕಟರಾವ್, ಬೋಳಾರ ಬಾಬುರಾವ್ ಮುಂತಾದವರ ಮೂಲ ರಚನೆಗಳು ಇದ್ದವು. ಇನ್ನು ಹಿಂದಕ್ಕೆ ಹೋದರೆ ಕೆಂಪುನಾರಾಯಣ ಕವಿಯ 'ಮುದ್ರಾಮಂಜೂಷ'ವೂ ಆಧುನಿಕವೆಂಬ ಗದ್ಯದಲ್ಲೇ ರಚನೆಗೊಂಡಿತ್ತು. ಮಂಗಳೂರಿನ ಕವಿಗಳಾದ ಗೋವಿಂದ ಪೈ, ಶಂಕರಭಟ್ಟರು ಮತ್ತು ಮುಳಿಯರು ಹಳಗನ್ನಡದ ಶೈಲಿಯಲ್ಲಿ ಹೊಸವಿಚಾರಗಳನ್ನು ಪ್ರತಿಪಾದಿಸಿದರು. ೨೦ನೇ ಶತಮಾನದ ಶ್ರೇಷ್ಠರಲ್ಲೊಬ್ಬರಾಗಿ ಕಾವ್ಯ-ಕಾದಂಬರಿ ಈ ಎರಡೂ ಪ್ರಕಾರಗಳಲ್ಲಿ ಪ್ರಸಿದ್ಧರಾದ ಕುವೆಂಪು, ನವೋದಯ ಮತ್ತು ನವ್ಯದ ಮಧ್ಯೆ ಹಳಗನ್ನಡವನ್ನು ಬಳಸಿಕೊಂಡು 'ರಾಮಾಯಣ ದರ್ಶನಂ' ಬರೆದರು; ಅವರು ಬರೆದ ಕಾಲಕ್ಕೆ ಹಳಗನ್ನಡದ ಉಪಯೋಗ ಎಷ್ಟು ಅನಿವಾರ್ಯವಿತ್ತು ಎಂಬುದು ಚರ್ಚಾಸ್ಪದ ವಿಷಯ. ಈ ಚರ್ಚೆಗೆ ಶ್ರೀ, ಪುತಿನರಂಥವರ ರಚನೆಗಳೂ ಬೇಕಾಗುತ್ತವೆ.

ಪಂಜೆಯವರು 'ಈ ಕಾಲವು ವೆಂಕಟಾಚಾರ್ಯರ ಕಾಲ'ವೆನ್ನುತ್ತಾರೆ. '೨೦೦ ವರ್ಷಗಳ ಈಚೆಯಿಂದ ಮುಳ್ಳುಪೊದೆಯಾಗಿ ಬಿದ್ದಿದ್ದ ಕನ್ನಡ ತೋಟವು' ಎಂಬ ಉಲ್ಲೇಖವನ್ನು ಮಾಡುತ್ತಾರೆ. ಪ್ರಾಯಃ ಮುದ್ದಣನ ಸಮಕಾಲೀನರಾದ ಪಂಜೆಯವರು ಈ ದೃಷ್ಟಿಯಿಂದ ಬಹು ಗಮನಾರ್ಹರಾಗುತ್ತಾರೆ. ಮುದ್ದಣ ಹುಟ್ಟಿದ್ದು ೧೮೭೦ರಲ್ಲಿ; ಪಂಜೆ ಹುಟ್ಟಿದ್ದು ೧೮೭೪ರಲ್ಲಿ. ಸಾಹಿತ್ಯಕ್ಕೆ ಅತೀ ಅಗತ್ಯವೆಂದು ಹಲವರು ಇಂದು ತಪ್ಪಾಗಿ ಭಾವಿಸುವ ಮಧ್ಯಮ ವರ್ಗಕ್ಕೆ ಈ ಇಬ್ಬರೂ ಸೇರಿದವರಾಗಿರಲಿಲ್ಲ. ಅವರು ಕಡುಬಡವರು.

ಶಿಶುಸಾಹಿತ್ಯ ಪ್ರವರ್ತಕರೆಂದು ಪಂಜೆಯವರನ್ನು ಪ್ರಸಿದ್ಧಿಮಾಡಲಾಗಿದೆಯಾದರೂ, ಕನ್ನಡ ಸಣ್ಣಕತೆ ಮತ್ತು ಕಾವ್ಯದಲ್ಲಿ ಅವರ ಸಾಧನೆ ದೊಡ್ಡದು. ನವೋದಯದ ಬಹುಪಾಲು ಸೃಜನಶೀಲರು ಅಕೆಡೆಮಿಕ್ ಶಿಕ್ಷಣದ ಹೊರತಾಗಿಯೂ ದೊಡ್ಡ ವಿದ್ವಾಂಸರಾಗಿದ್ದರು. ಆದ್ದರಿಂದ ಕವಿಗಳು, ಕಾದಂಬರಿಕಾರರು ಛಂದಸ್ಸು, ಶೈಲಿ, ವ್ಯಾಕರಣ, ಸಂಶೋಧನೆ, ವಿಮರ್ಶೆ ಈ ವಿಭಾಗಗಳಲ್ಲಿಯೂ ಸಾಕಷ್ಟು ದುಡಿಯುತ್ತಿದ್ದರು. ಮುದ್ದಣ, ಪಂಜೆ, ಗೋವಿಂದ ಪೈ, ಬಿ.ಎಂ.ಶ್ರೀ, ಮುಳಿಯ ಈ ಎಲ್ಲರೂ ಹಳಗನ್ನಡ ಸಾಹಿತ್ಯ ಮೂಲವನ್ನು ಹಿಡಿದು ಜಗ್ಗಬಲ್ಲವರಾಗಿದ್ದರು. ಈ ಎಲ್ಲರೂ ಕನ್ನಡ ಭಾಷೆಗೆ, ಸಾಹಿತ್ಯಕ್ಕೆ ಬಡಿದ ಆಂತರಿಕ ಮತ್ತು ಬಾಹ್ಯ ಶನಿಯ ವಿರಾಟ್ ಸ್ವರೂಪವನ್ನು ಅರ್ಥಮಾಡಿಕೊಂಡಿದ್ದರು.

ಈ ಹೊತ್ತಿಗೆ ಪಂಜೆಯವರು ಕನ್ನಡ ಭಾಷೆ-ಸಾಹಿತ್ಯಕ್ಕೆ ಅಪರೂಪ ಮತ್ತು ಹೊಸತೆನ್ನಿಸಿದ ಮಕ್ಕಳ ಪದ್ಯಗಳನ್ನು ಬರೆದರು. ಇವುಗಳನ್ನು ಮಕ್ಕಳಿಗಾಗಿಯೇ ಬರೆದರೆಂಬುದಕ್ಕಿಂತಲೂ, ಅವರ ವೃತ್ತಿಯಾಗಿದ್ದ ಶಿಕ್ಷಣದಲ್ಲಿ ಪಾಠ ಹೇಳುವುದಕ್ಕೆ ಅಕ್ಷರಗಳ, ಪದಗಳ ಪುನರುಕ್ತಿ ಅಗತ್ಯವೆಂಬ ಸಿದ್ಧಾಂತ ಮತ್ತು ಅವುಗಳ ಅನುಕರಣನೆಯಿಂದಾಗಿ ಪದ್ಯ ಓದುಗನ ಮೇಲೆ ಬೀರಬಲ್ಲ ಪ್ರಭಾವದ ಅರಿವು ಇವೇ ಮುಖ್ಯವಾಗಿದ್ದುವು ಮಾತ್ರವಲ್ಲ, ಹಳಗನ್ನಡದ ರಾಜಾಡಂಬರ ಮತ್ತು ಕ್ಲಿಷ್ಟತೆ ಇವುಗಳಿಂದ ದೂರ ಸರಿದು, ಭಾಷೆ ಹಾಗೂ ಸಾಹಿತ್ಯ

ಸರಳವಾಗಿರಬೇಕೆಂಬ ಅವರ ಅಕ್ಕರೆ ಹೆಚ್ಚು ಪ್ರವೇಶಿಸಿತ್ತೆಂದು ಕಾಣಿಸುತ್ತದೆ. ಹೀಗಾಗಿ ಅವರ so called ಶಿಶು ಸಾಹಿತ್ಯ ಮೇಲ್ಪದರದಲ್ಲಿ ಹಾಡಬಲ್ಲಂತಹ, ನೀತಿಪಾಠ ಹೇಳಬಲ್ಲಂತಹ ಕಾವ್ಯ-ಕಥನಗಳಾಗಿ ಮೂಡಿದರೆ, ಒಳಗೆ ಅನೇಕ ಗಂಭೀರ ಅರ್ಥಗಳನ್ನೂ ಸಂದೇಶಗಳನ್ನು ಹೊಮ್ಮಿಸುವ ಸರಕಾಗಿ ಕಾಣಿಸುತ್ತದೆ. (ಪೂರ್ಣಚಂದ್ರ ತೇಜಸ್ವಿಯವರ ಕೃತಿಗಳೂ ಇಂತಹ ಸಾಧ್ಯತೆಗಳನ್ನು ನೀಡುತ್ತವೆ) 'ಹಾವಿನ ಹಾಡು' ಮಕ್ಕಳ ಕೈಗೆ ಸಿಕ್ಕ ನಾಗರಹಾವು ಮಾತ್ರವಲ್ಲ, ದೇಶಾಭಿಮಾನಿಯೊಬ್ಬ ಬಿಳಿಯರಿಗೆ ಹೇಳುವ ಮಾತೂ ಆಗಬಲ್ಲುದು. 'ತೆಂಕಣಗಾಳಿ' ಹಾಡಿ ಕುಣಿಯಬಲ್ಲ ಪದ್ಯ ಹೇಗೋ ಪಡುವಣ ಪ್ರಕೃತಿಯ ಒಂದು ಗಂಭೀರ ಚಿತ್ರವೂ ಹೌದು. 'ಮೂಡುವನು ರವಿ ಮೂಡುವನು' ಎಂದು ಆರಂಭಗೊಳ್ಳುವ ಪದ್ಯ ಮುಗಿಯುವ ಹೊತ್ತಿಗೆ ಒಂದು ರೂಪಕಚಿತ್ರವಾಗಿ ಬೆಳೆಯುತ್ತದೆ. ಹಾಗೆಯೇ ಮಕ್ಕಳಿಗಾಗಿ ಬರೆದ ಕಥೆಗಳು ಜಾನಪದ ಶೈಲಿಯ ಜನಪರ ಕಥಾನಕಗಳಾಗಿವೆ. 'ಕೋಟಿ ಚೆನ್ನಯ್ಯ' ಅತಿಮಾನುಷರನ್ನು ಮನುಷ್ಯರಂತೆ ಚಿತ್ರಿಸಿದ ಕೃತಿ. 'ಡೊಂಬರ ಚೆನ್ನೆ' ಎಂಬ ಕಥನ ಕವನದಲ್ಲಿ ಇಲೆಕ್ಟ್ರಾ ಕಾಂಪ್ಲೆಕ್ಸಿನ ವ್ಯತ್ಯಸ್ತ ಸ್ಥಿತಿಯನ್ನು ಕಾಣಬಹುದು. ಪಂಜೆಯವರ ಕೃತಿಗಳ ಎಲ್ಲ ವಿವರಗಳಿಗೆ ಇದು ಸಂದರ್ಭವಲ್ಲ. ಆದರೆ ಅವರ ಕೃತಿಗಳ ಪುರೋಗಾಮಿತ್ವ, ಪ್ರಗತಿಪರತೆಗೆ ಅವರ ಅನೇಕ ಕೃತಿಗಳು ಕನ್ನಡಿಯಾಗಿವೆ. ಅವರ ಐತಿಹಾಸಿಕ ಕಥೆಗಳು-'ಪೃಥುಲಾ', 'ರೂಪಮತಿ'; 'ಶೈಲಿನಿ' 'ದುರ್ಗಾವತಿ' ಈ ಎಲ್ಲಾ ಕತೆಗಳಲ್ಲಿ ಕಾಣುವ ಸಮಾನಾಂಶಗಳೆಂದರೆ, ಶೀರ್ಷಿಕೆಗಳೇ ಸೂಚಿಸುವಂತೆ ಈ ಕಥೆಗಳ ಕೇಂದ್ರ ಪಾತ್ರಗಳು ಸ್ತ್ರೀಯರು. ಸ್ತ್ರೀ ಸಂವೇದನೆ, ಸ್ತ್ರೀವಾದಗಳು ಚಳುವಳಿರೂಪವನ್ನು ತಾಳಿದ ೨೦ನೇ ಶತಮಾನದ ಕೊನೆ ಮತ್ತು ೨೧ನೇ ಶತಮಾನದ ಆದಿಯಲ್ಲಿ ಅವಲೋಕಿಸಿದರೆ, ಪಂಜೆಯವರ ದೂರದರ್ಶಿತ್ವ ಹೃದ್ಗೋಚರವಾಗದಿರದು. ಇಷ್ಟೇ ಅಲ್ಲ, ಬಹು ಮುಖ್ಯವಾದ ಎರಡು ಅಂಶಗಳನ್ನು ಅವರ ಕತೆ ಮತ್ತು ಕವನಗಳಿಂದ ಹೆಕ್ಕಿ ಹೇಳಲೇಬೇಕು. ಮೊದಲನೆಯದು- 'ಪೃಥುಲಾ' ಕತೆಯಲ್ಲಿ ಕಾಣುವ ಅಸಾಂಪ್ರದಾಯಿಕ ವಿವರಗಳು. ಇಲ್ಲಿ ವಿಜಯನಗರದ ಮತ್ತು ಇಂದು ಕನ್ನಡ ಕಣ್ಮಣಿಯೆಂದು ವೈಭವೀಕರಿಸುವ ಶ್ರೀಕೃಷ್ಣದೇವರಾಯನನ್ನು ಹೋಲುವ ದೇವರಾಜನೆಂಬ ಅರಸು ಮತ್ತು ಮಹಾಮಂತ್ರಿ ತಿಮ್ಮರಸುವನ್ನು ಹೋಲುವ ತಿಮ್ಮ ಅಥವಾ ತಿಮ್ಮರಸು ಎಂಬ ಮಂತ್ರಿ, ಇವರಿಬ್ಬರ ಕ್ರೂರ ದೃಷ್ಟಿಗೆ ಬೀಳುವ ಪೃಥುಲಾ ಎಂಬ ಸುಂದರಿ ತನ್ನ ರಕ್ಷಣೆಯ ಯತ್ನದಲ್ಲಿ ಗಂಡ ಮತ್ತು ತಂದೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ಅಂತಿಮ ಕ್ಷಣಗಳಲ್ಲಿ ಅವಳು ಮಾನರಕ್ಷಣೆಗಾಗಿ ಪ್ರಾಣಕಳೆದುಕೊಳ್ಳುವ ಮೊದಲು ಪರಸತಿಯನ್ನು ಬಯಸುವ ದೇವರಾಜನಂತಹ ಅರಸು ಮತ್ತು ಅವರ ಕುಮತಿ ಮಂತ್ರಿ ಎಂತಹ ಹಿಂದೂ ನಾಯಕರೆಂದು ಅಪಮಾನಿಸುತ್ತ, ಅವರಿಗಿಂತ ಬಹಮನಿ ಸುಲ್ತಾನರೇ ಗುಣದಲ್ಲಿ ಲೇಸು ಎಂಬಂತೆ ದೂಷಿಸುತ್ತಾಳೆ. ಕನ್ನಡ ಸಾಮ್ರಾಜ್ಯವನ್ನು ಹಿಂದುತ್ವದೊಂದಿಗೆ ಸಮೀಕರಿಸಿ (ಇಂದಿಗೂ ಕನ್ನಡ ತಾಯಿ ಎಂದರೆ ಭುವನೇಶ್ವರಿ, ದುರ್ಗೆ, ಲಕ್ಷ್ಮಿ, ಸರಸ್ವತಿ; ಕ್ರೈಸ್ತಳೂ ಅಲ್ಲ, ಮುಸಲ್ಮಾನಳೂ ಅಲ್ಲ, ಹೋಗಲಿ ಜಾತ್ಯತೀತಳೂ ಅಲ್ಲ; ಶುದ್ಧ ಹಿಂದು ಎಂಬ ಸ್ಥಿತಿಯಿದೆ. ಪುಸ್ತಕವೆಂದರೆ ಸರಸ್ವತಿಯೆಂಬ ಸಾಂಪ್ರದಾಯಿಕ ಅವೈಜ್ಞಾನಿಕ ಸಮೀಕರಣವೂ

ಇದೆ. ಇದು ಬುದ್ಧಿಗೆ ಸಂಬಂಧಪಟ್ಟ ವಿಚಾರವಲ್ಲ. ಭಾವಕ್ಕೆ ಸಂಬಂದಿಸಿದ್ದು ಎಂಬ ನೆಲೆಯಲ್ಲಿ ಈ ಚರ್ಚೆಯನ್ನು ಕೈಬಿಡಬೇಕಾಗಿದೆ) ಸಾಹಿತ್ಯ-ಸಂಸ್ಕೃತಿ-ಭಾಷೆ ವಿಜೃಂಭಿಸುತ್ತಿದ್ದ ದಶಕಗಳಲ್ಲಿ, ಐತಿಹಾಸಿಕ ಕೃತಿಗಳು ದೇಶಾಭಿಮಾನೀ ಪ್ರವೃತ್ತಿಗೆ ಇಂಬುಕೊಡಬೇಕೆಂಬ ಅಲಿಖಿತ ಸಾಹಿತ್ಯ ಮಾನದಂಡವಿದ್ದ ಕಾಲದಲ್ಲಿ, ಪಂಜೆಯವರು ಇವೆಲ್ಲವನ್ನು ಮೀರಿ ಒಂದು ಜಾತ್ಯತೀತ ಮತಾತೀತ ಪಂಥವನ್ನು ದರ್ಶಿಸುತ್ತಿದ್ದರು. ಅವರ 'ಹೊಲೆಯನ ಹಾಡು' ಕವನದಲ್ಲಿ ಅಸ್ಪೃಶ್ಯತೆಯ ಕುರಿತಾದ ವ್ಯಂಗ್ಯವು ಸ್ವಾತಂತ್ರ್ಯ ಹೋರಾಟದ ಉದ್ದೇಶದ ವಿಪರ್ಯಾಸದ ಹಿನ್ನೆಲೆಯಲ್ಲಿ ವಾಸ್ತವ ಸ್ಥಿತಿಯನ್ನು ಸ್ಪಷ್ಟವಾಗಿ, ಕಾವ್ಯಕ್ಕೆ ಮೀರಿದ ನೇರಗತಿಯಲ್ಲಿ ಹೇಳಿದೆ. ಇದನ್ನು ಮತ್ತೆ ಅನೇಕರು ಬರೆದಿರಬಹುದು; ಹೇಳಿರಬಹುದು. ಆದರೆ ಪಂಜೆಯವರ ಸಾಧನೆ ಅವರನ್ನು ಸಮಕಾಲೀನತೆಯನ್ನು ದಾಟಿದ ಭವಿಷ್ಯಪರರನ್ನಾಗಿಸಿದೆ. ಅವರ ಮಾರ್ಗದರ್ಶಿತ್ವದಲ್ಲೇ ಗೋವಿಂದಪೈಗಳು ಪ್ರಾಸದ ಬಂಧನದಿಂದ ವಿಮುಕ್ತಿಗೊಂಡರು ಎಂದು ತಿಳಿಯಲಾಗಿದೆ.

ಮುದ್ದಣನ ಕುರಿತು ಇನ್ನಷ್ಟು ಹೇಳುವುದಕ್ಕಾಗಿಯೇ ಪಂಜೆಯವರ ಕುರಿತಾದ ಈ ವಿವರಗಳನ್ನು ಸ್ಥೂಲವಾಗಿಯಾದರೂ ನೀಡಬೇಕಾಯಿತು. ಪಂಜೆಯವರ ಸಾಹಿತ್ಯದ ಬೆಳವಣಿಗೆಯನ್ನು ಇಲ್ಲಿ ತೌಲನಿಕ ಉದ್ದೇಶಗಳಿಗಾಗಿ ಮಾತ್ರವೇ ಪರೀಕ್ಷಿಸಿದರೂ, ಅವರು ತನ್ನ ಸುತ್ತಣ ಪ್ರಚಲಿತವನ್ನು ಪ್ರಸ್ತುತತೆಯನ್ನು ಗಮನಿಸಿದ್ದರೆಂದು ಗೊತ್ತಾಗುತ್ತದೆ. ೧೯೦೧ರ ಒಳಗಿನ ಅವರ ಕೃತಿಗಳನ್ನಷ್ಟೇ ಪರಿಶೀಲಿಸಿದರೂ (ಅಂದರೆ ಮುದ್ದಣ ಬದುಕಿರುವವರೆಗೆ) ಪಂಜೆ ಮತ್ತು ಮುದ್ದಣ ಹಿಡಿದ ದಾರಿ ಭಿನ್ನವಷ್ಟೇ ಅಲ್ಲ, Diametrically opposite ಅನ್ನಬಹುದಾದ ಸಾಹಿತ್ಯ ಮಾರ್ಗ ಗೋಚರಿಸುತ್ತದೆ. ಪಂಜೆಯವರ ಸುತ್ತ ಇದ್ದ ಅದೇ ಪರಿಸರ ಹೆಚ್ಚೂ ಕಡಿಮೆ ಮುದ್ದಣನಿಗಿತ್ತು. ಈ ಮೊದಲೇ ಹೇಳಿದಂತೆ ಇಬ್ಬರಿಗೂ ಪ್ರಾಚೀನ ಕನ್ನಡ ಸಾಹಿತ್ಯದ ಗಾಢ ಜ್ಞಾನವಿತ್ತು. ಪರಸ್ಪರ ಪರಿಚಯವಿತ್ತು. ಅಲ್ಲದೆ ಬ್ರಿಟಿಷ್ ಆಡಳಿತದ ಪರಮೋಚ್ಛ ಪ್ರಭಾವದ ಗೋಚರವಿತ್ತು. ಕನ್ನಡ ಭಾಷೆ ಮತ್ತು ಸಾಹಿತ್ಯ ನಿಂತುಹೋದ ನೀರಾದ ಅನುಭವವಿತ್ತು. ಪಂಜೆಯವರು ಯೂರೋಪಿನ ಸಾಹಿತ್ಯವನ್ನು ಇಂಗ್ಲೀಷಿನ ಮುಖಾಂತರ ಪರಿಚಯಿಸಿಕೊಂಡಿದ್ದರು. ಬೆನಗಲ್ ರಾಮರಾಯರ ಸಂಪಾದಕತ್ವದ 'ಸುವಾಸಿನಿ' ಪತ್ರಿಕೆಯ ಸೆಪ್ಟಂಬರ್ ೧೯೦೦ರ ಸಂಚಿಕೆಯಲ್ಲಿ 'ನನ್ನ ಚಿಕ್ಕತಾಯಿ' ಕತೆಯನ್ನು ಪಂಜೆ ಪ್ರಕಟಿಸಿದ್ದರು.

ಮುದ್ದಣ ಉಡುಪಿ ಬಳಿಯವನು. ಪಂಜೆಯವರು ಮುದ್ದಣನನ್ನು ಬಲ್ಲವರು. ಅವರು "ಮೈಸೂರಿನ ಬಿ. ವೆಂಕಟಾಚಾರ್ಯರ ಒಂದೆರಡು ಕಾದಂಬರಿಗಳು ಉಡುಪಿಯಲ್ಲಿ ನುಸುಳಿಕೊಂಡಿದ್ದರೂ ಅವು, ಅತಿ ಭಕ್ತಿಯಿಂ ಬಿಡದೋದಿ ಕೇಳ್ವ ಸಜ್ಜನರಿಗಿಷ್ಟಾರ್ಥಮಂ ಕುಡುವ ಪುಣ್ಯಕಥೆಗಳಂತೆ ಜನಪ್ರೀತವಾಗಿರಲಿಲ್ಲ" ಎನ್ನುತ್ತಾರೆ.

ಪಾಂಡಿತ್ಯದ ದೃಷ್ಟಿಯಿಂದ ಸಮಕಾಲೀನರಲ್ಲಿ ಅಗ್ರಗಣ್ಯನಾಗಿದ್ದ ಮುದ್ದಣನು ಸಮಾಕಾಲೀನತೆಯಲ್ಲಿ ಹಿಂದೆ ಬಿದ್ದಿರಲಿಲ್ಲ. ಅವನು ತಮಿಳು, ಮಲೆಯಾಳಗಳಲ್ಲದೆ ಸಂಸ್ಕೃತ ಮತ್ತು

ಇಂಗ್ಲೀಷನ್ನು ಸ್ವಲ್ಪ ಮಟ್ಟಿಗಾದರೂ ಕಲಿತು, ೧೮೯೪ರಲ್ಲಷ್ಟೇ ಪ್ರಕಟವಾದ ಕಿಟೆಲ್ ಕೋಶವನ್ನು ಇಟ್ಟು ಅಭ್ಯಾಸಮಾಡುತ್ತಿದ್ದನೆಂದೂ, ಪಳಲಿ ಸುಬ್ಬರಾಯರಂತಹ ಅಧ್ಯಾಪಕ-ವಿದ್ವಾಂಸರ ಜೊತೆಗೆ ತನ್ನ ವಿಚಾರಗಳನ್ನು ವಿನಿಮಯಿಸುತ್ತಿದ್ದನೆಂದೂ, ಅವನ ಕುರಿತು ಅಧ್ಯಯನ ಮಾಡಿದ ಹಾಗೂ ಬಲ್ಲ, ಹಿರಿಯರು ಹೇಳುತ್ತಾರೆ. ಮುದ್ದಣನು 'ಜೋಗುಳ' ಎಂಬ ಪದದ ವ್ಯುತ್ಪತ್ತಿಯ ಕುರಿತು ಬರೆದ ಜೋ ಜೋ ಎಂಬ ಲೇಖನ ಸುವಾಸಿನಿ ಪತ್ರಿಕೆಯ ಡಿಸೆಂಬರ್ ೧೯೦೦ರ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಇದರಲ್ಲಿ ಮುದ್ದಣ ಜೋ ಎಂಬುದು ತುಳು ಭಾಷೆಯ 'ಜೋಕುಳು' (ಮಕ್ಕಳು) ಎಂಬ ಪದದ ಪ್ರಕೃತಿಯೆಂದು 'ಕುಳು' ಎಂಬ ಪದ ಕರ್ನಾಟಕದಲ್ಲಿ ಬಹುತ್ವವನ್ನು ಹೇಳುವ 'ಕಳ್'(ಗಳ್) ಎಂಬ ಪ್ರತ್ಯಯಕ್ಕೆ ಸರಿಬರುತ್ತದೆಂದೂ ಸಮರ್ಥವಾಗಿ ವಾದಿಸಿದ್ದಾನೆ. ತುಳುವಿನಲ್ಲಿ ಪ್ರಯೋಗವಾಗುವ ಜೋಕುಳು ಪದದ 'ಜೋ' ಎಂಬುದು 'ಕೂಸು' ಎಂಬಂತೆ ಅರ್ಥವನ್ನು ಹೊಂದಿದೆಯೆಂದೂ, ತುಳು ಪದಗಳಾದ ಅಣ್ಜೋವು (ಗಂಡುಮಗು) ಪೊಣ್ಜೋವ್ (ಹೆಣ್ಣುಮಗು) ಪದಗಳ ನಿಷ್ಪತ್ತಿಯನ್ನು ಆನ್ ಗಂಡು; ಜೋವು ಮಗು, ಪೊಣ್ ಹೆಣ್ಣು, ಜೋವು ಮಗು ಎಂಬಂತೆ ವಿಭಜಿಸಿ, ಸಾಧಿಸಿದನು. ಮುದ್ದಣನು ತನ್ನ 'ಜೋ ಜೋ' ಲೇಖನದಲ್ಲಿ 'ಈ ಜೋ ಶಬ್ದಕ್ಕೆ ಬೇರೆ ಶಬ್ದಗಳೊಡನೆತ್ತಲಾದರೂ ನಂಟಿರುವುದೋ ಎಂದು ಕನ್ನಡ ನುಡಿಗಳಲ್ಲಿ ಹಲವನ್ನು ನೋಡಿದೆನು. ಆದರೇನು? ನೋಡಿದರೆ ಒಂದೇ ಒಂದಾದರೂ ಅದರ ನಂಟುತನವನ್ನು ತೋರ್ಪಡಿಸಲಿಲ್ಲ. ಈ ರೀತಿಯಾಗಿ ನನ್ನಾಸೆ ಬಯಲಾದುದನ್ನು ಕಂಡು, ಕನ್ನಡ ನುಡಿಗಳ ಗೊಡವೆ ಬಿಟ್ಟು ಕನ್ನಡದೊಡಹುಟ್ಟುಗಳಾದ ಬೇರೆ ಮಾತಗಳನ್ನಾದರೂ ಕೇಳಿ ನೋಡುವೆನೆಂದು ಎಣಿಸಿದೆನು.' ಎನ್ನುತ್ತಾನೆ. ಇಲ್ಲಿ ಬರುವ 'ಕನ್ನಡದೊಡಹುಟ್ಟುಗಳಾದ' ಎಂಬ ಪದಗಳಿಂದ ಅವನಿಗೆ ಇತರ ದ್ರಾವಿಡ ಭಾಷೆಗಳ ಕುರಿತೂ ಪಾಂಡಿತ್ಯವಲ್ಲದಿದ್ದರೂ ಪರಿಚಯವಂತೂ ಇರಲೇಬೇಕೆನ್ನಿಸುತ್ತದೆ. ಅಂದರೆ ಸಮಕಾಲೀನ ಭಾಷಾ/ಸಾಹಿತ್ಯ ಪ್ರಯೋಗಗಳ ಆಗುಹೋಗುಗಳನ್ನು ಮುದ್ದಣ ಬಲ್ಲವನಾಗಿದ್ದ ಮಾತ್ರವಲ್ಲ, ಅದರ ಒಳಹೊರಗುಗಳಲ್ಲಿ ಸುತ್ತಿದ್ದ ಎಂಬುದು ಅರಿವಿಗೆ ಬರುತ್ತದೆ. (ಮುದ್ದಣನ ಎಡಗೈಯಲ್ಲಿ N.L.N. ಎಂದು ಹಚ್ಚೆಯಿತ್ತೆಂದು ಗೋವಿಂದ ಪೈಗಳು ನೆನಪಿಸುತ್ತಾರೆ. ಈ ಅಂಶ ಸಂಸ್ಕೃತಿ ವಿಮರ್ಶಕರು ಗಮನಿಸಬಹುದಾದ್ದು).

ಮುದ್ದಣನಿಗಿದ್ದ ಪ್ರತಿಭೆಗೆ, ಪರಂಪರೆಗೆ ಅವನ ಕೊಡುಗೆ ವಿಶಿಷ್ಟದ್ದಾಗಿರಬೇಕಾಗಿತ್ತು. 'ರತ್ನಾವತೀ ಕಲ್ಯಾಣ'.'ಕುಮಾರ ವಿಜಯ', ಯಕ್ಷಗಾನ ಪ್ರಸಂಗಳು, ಜನರಾಡುವ ಹಾಡುವ ಭಾಷೆ-ಮಾಧ್ಯಮದಲ್ಲಿದ್ದು, ಸಾಮಾಜಿಕ ಸಂಪರ್ಕವನ್ನು ಸಾಧಿಸುವ-ಇಲ್ಲವೇ ಸಾಧ್ಯವಾಗಿಸುವ ಕೊಂಡಿಯಾಗಿದ್ದವು. ಇಂದಿಗೂ ಯಕ್ಷಗಾನ ಪ್ರಸಂಗ ಪದ್ಯಗಳನ್ನು ಅರ್ಥೈಸಲು ಯಾವ ಅಕಡೆಮಿಕ್ ಶಿಕ್ಷಣವೂ ಬೇಕಾಗಿಲ್ಲ. ಅವು ಉಪಮೆ ಉತ್ಪ್ರೇಕ್ಷೆ, ರೂಪಕ ಇತ್ಯಾದಿ ಅಲಂಕಾರಗಳನ್ನು ಹೊಂದಿದ್ದು ಕತೆಯ ಬೆಳವಣಿಗೆಯನ್ನು ಕಲಾತ್ಮಕವಾಗಿ ನಿರೂಪಿಸುತ್ತವೆ. ಈ ದೃಷ್ಟಿಯಿಂದ ಮುದ್ದಣ ಕೃತ ಪ್ರಸಂಗಗಳು ಉತ್ತಮ ಕೃತಿಗಳು. ಯಕ್ಷಗಾನಕ್ಕೆ ಅವಶ್ಯವಿರುವ ಜನಮನಾಕರ್ಷಕ ರಸಪುಷ್ಟಿಯ ಮನರಂಜನೆಯ ಅಂಶಗಳೂ. ಶೃಂಗಾರ-ವೀರ-ಕರುಣ-ರಸ

ವರ್ಣನೆಯಗಳೂ ಅಲ್ಲಿವೆ. ಹೀಗೆ ಜನರಿಗೆ ಹತ್ತಿರವಾಗಬೇಕು, ಹತ್ತಿರವಿರಬೇಕು ಎಂಬ ಆಶಯ ಮುದ್ದಣನ ಈ ಕೃತಿಗಳಲ್ಲಿ ಕಾಣಿಸುತ್ತವೆ. ಈ ವಾದವನ್ನು ಗಟ್ಟಿಗೊಳಿಸುವ ಇನ್ನೂ ಒಂದು ಅಂಶವೆಂದರೆ, ಅನೇಕ ಪದ್ಯಗಳ ಮಟ್ಟುಗಳನ್ನು ಹಿಂದಿನ ಕವಿ ಕೃತ ಯಕ್ಷಗಾನ ಪ್ರಸಂಗಗಳ ಜನಪ್ರಿಯ ಪದ್ಯಗಳಿಗೆ ಹೋಲಿಸಿ ಬರೆದು ಸೂಚನೆಯನ್ನು ನೀಡಲಾಗಿದೆ. ಈ ಅಂಶವನ್ನು ಪ್ರೊ. ಜಿ. ವೆಂಕಟಸುಬ್ಬಯ್ಯನವರು ಗುರುತಿಸಿದ್ದಾರೆ. ಉದಾ: ಪಾರ್ತಿಸುಬ್ಬನ(?) ಅತಿಕಾಯ ಕಾಳಗದ 'ಖಳರಾಯ ಲಾಲಿಸೈ ಬಿನ್ನಪವ' ಎಂಬ ಹಾಡಿನ ಮಟ್ಟನ್ನು ಅನುಸರಿಸುವ 'ಲಾಲಿಸೈ ಭದ್ರಸೇನದೊರೆಯೇ..'ಎಂಬ ಮುಖಾರಿ ರಾಗ ಏಕತಾಳದ ಹಾಡಿನ ಮೊದಲಲ್ಲಿ (ಧಾಟಿ: ಖಳರಾಯಾ ಲಾಲಿಸೈ ಬಿನ್ನಪವ)' ಎಂದು ಬರೆದಿದೆ. ಇದೊಂದು ಜನಪ್ರಿಯ ಸೋಗೂ ಹೌದು.

ಪಂಜೆಯವರ ಹಾಗೆ ಇಂಗ್ಲೀಷ್ ಭಾಷೆಯ ಸಂಪರ್ಕವನ್ನು ಮುದ್ದಣ ಹೊದಿರಲೇ ಇಲ್ಲವೆಂದು (ವಾದಕ್ಕಾಗಿ) ಭಾವಿಸಿದ್ದರೂ, ಜಾನಪದ ಮತ್ತು ಶಿಷ್ಟ ಬೆರೆಸಿಹೋದ ಯಕ್ಷಗಾನ ಪ್ರಸಂಗ ಕರ್ತೃವಾದ ಮುದ್ದಣ, 'ಜೋ ಜೋ' ಎಂಬ ಪ್ರಬಂಧ ಬರೆದ ಮುದ್ದಣ, ಕಿಟ್ಟೆಲ್ ಕೋಶದ ನಿರಂತರ ಸಂಪರ್ಕ ಪಡೆದ ಮುದ್ದಣ (ಗೋದಾವರಿ ಎಂಬ ಅಪೂರ್ಣ ಕಾದಂಬರಿಯನ್ನು ಬರೆದನೆಂದು ಹೇಳುತ್ತಾರೆ. ನಾನು ಅದನ್ನು ಓದಿಲ್ಲ) ಕೃತಿಗಳಾದ 'ಶ್ರೀರಾಮ ಪಟ್ಟಾಭಿಷೇಕಂ' 'ಅದ್ಭುತ ರಾಮಾಯಣಂ' ಮತ್ತು 'ರಾಮಾಶ್ವಮೇಧಂ' ಬರೆದನೆಂದರೆ ನಂಬು ವುದೂ ಕಷ್ಟ. ಯಾವ ಮಹಾಲಕ್ಷ್ಮಿಯೆಂಬವಳು ಅದನ್ನು ಬರೆದಳೆಂದೂ ಅದನ್ನು ತಾನು ಸಂಪಾದಿಸಿದೆನೆಂದೂ ಮುದ್ದಣ ಹೇಳಿಕೊಂಡಿದ್ದು ನಿಜವಾಗಿದ್ದಿದ್ದರೆ, ಬಹುಶಃ ಅವನು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮುಖ್ಯನಾಗುತ್ತಿರಲಿಲ್ಲ. ಬರಿಯ ಎರಡು ಯಕ್ಷಗಾನ ಪ್ರಸಂಗ ಗಳಾಗಿದ್ದಿದ್ದರೆ ಮುದ್ದಣ 'also ran' ವರ್ಗಕ್ಕೆ ಸೇರುತ್ತಿದ್ದ. ಆದರೆ ಈ ಮೂರೂ ಕೃತಿಗಳು ಅವನನ್ನು ಒಬ್ಬ ಪಾಂಡಿತ್ಯಪೂರ್ಣ ಕವಿಯನ್ನಾಗಿಸಿದುವು. ಪರಂಪರೆಯ ಬೆಟ್ಟ ಅವನ ಪ್ರತಿಭೆಗೆ ನೆರವಾಗಿ ಹೊಸ ಪ್ರಯೋಗಗಳನ್ನು ಮಾಡುವ ದಿಕ್ಕಿನಲ್ಲಿ ಉತ್ತೇಜಿಸುವ ಬದಲು ಬಾಯ್ದೆರೆದು ನುಂಗಿಬಿಟ್ಟಿತು. ಇಲ್ಲಿ ಬರುವ ತೊಡಕೆಂದರೆ, ಯಾವೊಬ್ಬ ಬರಹಗಾರ ತಾನು ಯಾವ ಛಂದಸ್ಸು, ನಿಯಮ, ಶೈಲಿ -ಈ ಹಂದರದೊಳಗೆ ಬರೆಯಲಿಚ್ಛಿಸುತ್ತಾನೋ, ಅವನು ಆ ಪ್ರಕಾರದ ಆಗಾಗಲೇ ಪ್ರತಿಷ್ಠೆಗೊಂಡ ದಿಗ್ಗಜಗಳ ನಡುವೆ ಸ್ಪರ್ಧಿಸಬೇಕಾಗುತ್ತದೆ. ಮುದ್ದಣನನ್ನು ಗಾಢವಾಗಿ ಪ್ರಭಾವಿಸಿದ ಹಳೆಯ ಕವಿಗಳು ನಿರೂಪಿಸುತ್ತಿದ್ದ ಅದರಲ್ಲೂ ಲಕ್ಷ್ಮೀಶನನ್ನು ಹೋಲುವ ಶೈಲಿಯಿಂದ, ಅವನು ಹೊರಬರಲು ಸಾಧ್ಯವಾಗಲಿಲ್ಲ. 'ಶಬ್ದಮಣಿದರ್ಪಣ' ದಂತಹ ವ್ಯಾಕರಣ ಗ್ರಂಥಗಳ ಸದಾ ಸಖ್ಯದಿಂದಾಗಿ ಮುದ್ದಣನಿಗೆ ಸಾಮಾನ್ಯ ಸಂಗತಿಗಳನ್ನು ಅಸಾಮಾನ್ಯವೆಂಬಂತೆ ವರ್ಣಿಸುವ ರೂಢಿಯಾಯಿತೆಂದು ಕಾಣಿಸುತ್ತದೆ. ಮುದ್ದಣನ 'ಶ್ರೀರಾಮ ಪಟ್ಟಭಿಷೇಕಂ'ನಲ್ಲಿ ಶ್ಲೇಷಾಲಂಕಾರದ ಅನೇಕ ಪದ್ಯಗಳಿವೆ: ಕೆಲವು ಅನಗತ್ಯವಾಗಿ ಶ್ಲೇಷೆಗಳಿಂದ ಕಂಗೆಡಿಸುವಂಥದ್ದಾಗಿವೆ. (ನೋಡಿ: ನಾಂದೀ ಸಂಧಿ). ಹಾಗೇ ದಡವನ್ನು ಮೀರಿ ಬರುತ್ತಿರುವ ಸಮುದ್ರದ ವರ್ಣನೆ/ವಿವರಣೆಯು, ಪಾರಂಪರಿಕ ಸಮುದ್ರ ವೈಭವವಾಗಿದೆಯೇ ಹೊರತು,

ಸಮುದ್ರಕ್ಕೆ ಸಮೀಪವಾದ ಉಡುಪಿಯ ಬಳಿಯ ನಂದಳಿಕೆಯ ಮುದ್ದಣನು ನೋಡಿ ಆನಂದಿಸಿ ತನ್ನ ಅನುಭವಕ್ಕೆ ಕೊಟ್ಟ ಕಾವ್ಯವಾಗಿಲ್ಲ(ಈ ಅಂಶವನ್ನು ವಿಮರ್ಶಕರೊಬ್ಬರು ಗುರುತಿಸಿದ್ದಾರೆಂದು ಓದಿದ್ದೇನೆ. ಆಕರ ನೆನಪಿಲ್ಲ). ಆದ್ದರಿಂದ ಏನೇ ಹೇಳಿದರೂ ಮುದ್ದಣನ ಅನುಭವನಿಷ್ಠೆಗಿಂತ ಪಾಂಡಿತ್ಯ ಹೆಚ್ಚು ಮೆರೆದಿದೆಯೆಂಬುದಕ್ಕೆ ಎರಡು ಮಾತಿಲ್ಲ.

ಇನ್ನೂ ಒಂದು ಮಾತು ಹೇಳುವುದಾದರೆ, ಮುದ್ದಣ ಬರೆದ ಈ ಮೂರೂ ಕಾವ್ಯಗಳು ರಾಮಾಯಣದ ಕತೆಗಳೇ. ಪುರಾಣಕತೆಗಳಾದ್ದರಿಂದ ಕವಿಗೆ ಬೇಕಾದ ಸ್ವಾತಂತ್ರ್ಯವಿರುತ್ತದೆ. ಇವು ಅನುವಾದಗಳೂ ಅಲ್ಲ, ಸ್ವಂತ ರಚನೆಗಳೂ ಅಲ್ಲ ಎಂಬ ಬಗೆಯವು. ಭಾಷೆಯನ್ನು ಸನ್ನಿವೇಶಗಳಿಗೆ ತಕ್ಕಂತೆ ಉಪಯೋಗಿಸುವ ಪ್ರತಿಭೆ ಇದ್ದಾಗಲೂ ಮುದ್ದಣ ಅಲ್ಲಿ-ಇಲ್ಲಿ ಅಪವಾದಗಳಂತಿರುವ ಉದಾಹರಣೆಗಳನ್ನು ಬಿಟ್ಟರೆ, ಅಷ್ಟಾದಶ ವರ್ಣನೆಗಳನ್ನು ಅನುಸರಿಸುತ್ತಾನೆ. ಅದ್ಭುತ ರಾಮಾಯಣದ ಕತೆ ಶುದ್ಧ ಕಪ್ಪು-ಬಿಳುಪು ಒಳಿತು-ಕೆಡುಕುಗಳ ನಡುವಣ ಕೆದಕಾಟವಲ್ಲ. ಅಲ್ಲಿ ಅನ್ಯೈಕ್ಯತೆಯಿದೆ: 'ರಾಮಾಶ್ವಮೇಧ'ದಲ್ಲಿ ಮುದ್ದಣ ಲಕ್ಷ್ಮೀಶ ಕವಿಯ ಕಥಾ ಚೌಕಟ್ಟಿನೊಳಗೆ ಬೇಕಾಬಿಟ್ಟಿ ವಿಹರಿಸಿದ್ದಾನೆ. (ನಾನು ಉಪಯೋಗಿಸಿದ ಪದ ಉಡಾಫೆಯದ್ದೆನಿಸಿದರೂ ಅಲ್ಲಿ ವಾಸ್ತವ ಸ್ಥಿತಿ ಗೋಚರವಾಗುವುದಾದರೆ ಚರ್ಚಿಸಬಹುದು) ಕೆಲವು ಕಡೆ ಲಕ್ಷ್ಮೀಶನ ಉಪಮೆಗಳನ್ನೇ ಬಳಸಿಕೊಂಡಿದ್ದಾನೆ. ಕೆಲವು ಕಡೆ ನಾದಲೋಲುಪತೆಯ ಆಕರ್ಷಣೆಯೊಂದಿಗೆ ತನ್ನ ಸ್ವಂತಿಕೆಯ ಉಪಯೋಗಗಳನ್ನು ಮಿಂಚಿಸಿ ಮರೆಸಿದ್ದಾನೆ. (ಸೀತೆ ಮೂರ್ಛಿತಳಾಗುವ ಸನ್ನಿವೇಶದ ಪದ್ಯವನ್ನು ಗಮನಿಸಿ) ವಿಮರ್ಶಕರು ಗುರುತಿಸಿದಂತೆ 'ಕುಮಾರವಿಜಯ'ದೊಳಗಿನ ಯಮಕಗಳನ್ನೂ, ಶಾಂತಪ್ರಾಸಗಳನ್ನು ಲಕ್ಷಿಸಿದರೆ, ಲಕ್ಷ್ಮೀಶನ ಜೈಮಿನಿಭಾರತವು ಅವನಿಗೆ ಮುಖೋದ್ಗತವಾಗಿರಬಹುದೆಂಬ ಹಾಗೆ ತೋರುತ್ತದೆ. ಈ ಅಭಿಪ್ರಾಯವು 'ರಾಮಪಟ್ಟಾಭಿಷೇಕ'ವನ್ನೂ 'ರಾಮಾಶ್ವಮೇಧ'ವನ್ನು ಓದುತ್ತಲೇ ಇನ್ನೂ ಬಲಗೊಳ್ಳುತ್ತದೆ.

'ರಾಮಾಶ್ವಮೇಧ'ಕ್ಕೆ ಚಿತ್ರ ಸಾಮಾನ್ಯವೇ ಚೌಕಟ್ಟು ಸುವರ್ಣದ್ದೇ ಎಂಬ ಕುರಿತು ಕನ್ನಡ ವಿಮರ್ಶಾ ಜಗತ್ತು ಸಾಕಷ್ಟು ಚರ್ಚಿಸಿದೆ. ಈಚೆಗೆ ಮುದ್ದಣ ಮತ್ತು ಅವನ ಕಾಲದ ಸಾಹಿತ್ಯದ ಕುರಿತು ಗಂಭೀರವಾದ ಚರ್ಚೆಯಾಗುತ್ತಿಲ್ಲ. ಶತಮಾನದ ಸಾಹಿತ್ಯದ ಕುರಿತು ಮಾತನಾಡುವವರೂ ಆರಂಭದ ಹೆಜ್ಜೆಗಳನ್ನು ಹಾರುವ ಯತ್ನದಲ್ಲೇ ಇರುತ್ತಾರೆ. ಅಕಸ್ಮಾತ್ ಹೇಳಬೇಕಾದರೂ ಅವಸರವಸರವಾಗಿ ಪ್ರಾಸ್ತಾವಿಕವೆಂಬಂತೆ ಹೇಳಿ ನವ್ಯಕ್ಕೆ ಬಂದು ಬಿಡುತ್ತಾರೆ. ಅರುಣೋದಯವನ್ನು ನೆನಪಿಸದೆ ದಿನದ ಲೆಕ್ಕಾಚಾರ ಹಾಕುವವರಿಗೆ ಸಮಯದ ಸೌಂದರ್ಯ ಹೇಗೆ ಅರ್ಥವಾದೀತು?

ಮುದ್ದಣ-ಮನೋರಮೆಯರ ಸಂಭಾಷಣಾ ವಿಧಾನದಲ್ಲಿ ಹೊಸ ಚೌಕಟ್ಟು ಕಾಣಿಸುತ್ತದೆಯಾದರೂ, ಅದು ಒಂದು ಹೊಸ ಹೊರನೋಟವಾಗುತ್ತದೆಯೇ ಹೊರತು ಕಥಾವಸ್ತುವಿನ [illegible] ಬದಲಾಯಿಸಲಾರದು. ಈ ಶೈಲಿಯು ಆಗಲೇ ಕನ್ನಡಕ್ಕೆ ಅನುವಾದಗೊಂಡಿದ್ದ

ಬಂಕಿಮಚಂದ್ರರ 'ವಿಷವೃಕ್ಷ'ದಲ್ಲೂ ಇತ್ತೆಂದು ಪಂಜೆಯವರು ಗುರುತಿಸಿದ್ದರು. ಆದರೆ ಗೋವಿಂದ ಪೈಗಳು ಬಂಕಿಮಚಂದ್ರರು ಮುದ್ದಣನನ್ನು ಪ್ರಭಾವಿಸಿದರೆಂಬುದನ್ನು ಅಲ್ಲಗಳೆದು, ನಿಜಸತಿಗೆ ನಾಗವರ್ಮ ಪೇಳ್ದ 'ಛಂದೋಬುಧಿ'ಯ ಸ್ಫುರಣೆಯಿರಬಾರದೇಕೆಂದು ಸಂಶಯಿಸುತ್ತಾರೆ. ಸ್ತ್ರೀಪರವಾದ ವಾದವಿದೆಯೆನ್ನುವವರು ಜೈಮಿನಿ ಭಾರತದ ಪುಟಗಳನ್ನು ತೆರೆಯುವುದು ಒಳ್ಳೆಯದು. ಪಂಜೆಯವರು ಮಾತ್ರವಲ್ಲ, ನಂತರದ ಅನೇಕ ವಿಮರ್ಶಕರು ಮುದ್ದಣನ ಛಂದೋಲೋಪವನ್ನು ಗುರ್ತಿಸಿದ್ದರು. ಕಾವ್ಯದ ಅನೌಚಿತ್ಯ ವರ್ಣನೆಗಳನ್ನು ಅನೇಕ ವಿದ್ವಾಂಸರು ಗುರುತಿಸಿದ್ದಾರಾದರೂ, ಅವರ ವಿನಯ 'ಈ ಗುಣಗಳನ್ನು ಹೇಳುವುದರಿಂದ ಮುದ್ದಣನ ಶ್ರೇಷ್ಠತೆಗೆ ಕುಂದಾಗಲಾರದು' ಎಂಬ ಜಾಗ್ರತೆಯ ಮಾತುಗಳನ್ನಾಡಿಸಿ ಪಾರುಮಾಡಿದೆ. ಸಪ್ತಾಕ್ಷರೀ ಮಂತ್ರದಂತಹ ಅನನ್ಯ ಪ್ರತಿಮೆಗಳ ಮುಖಾಂತರ ಮುದ್ದಣ ಸಾಧಿಸಿದ್ದಾದರೂ ಏನನ್ನು? ಅವನ ಅಪೂರ್ವ ಪ್ರತಿಭೆ ಹಳಗನ್ನಡದ ನೇಯ್ಗೆಯಲ್ಲಿ ಸವಕಲಾದದ್ದನ್ನು ಮುದ್ದಣ 'ಹಳೆಯ ಕಥೆಯನ್ನು ಹೊಸ ಆಯದಲ್ಲಿ ಕಟ್ಟಿ, ಇತ್ತ ಹೊಸ ಶೈಲಿಯೂ ಅಲ್ಲ, ಅತ್ತ ಹಳೆಯ ಶೈಲಿಯೂ ಅಲ್ಲ, ಇವೆರಡರ ನಡುವಣ ಸರಣಿಯನ್ನು ಒದಗಿಸಿಕೊಳ್ಳಬೇಕಾಯಿತು.

ಮುದ್ದಣನಿಗೆ ಅಗೌರವವಾದದ್ದನ್ನು ಹೇಳಿದ್ದೇನೆಂದು ಅವನ ವ್ಯಕ್ತಿನಿಷ್ಠ ಅಭಿಮಾನಿಗಳು ತಿಳಿಯಬಾರದು. ನನಗೆ ಹೇಳಬೇಕಾದ್ದೆಂದರೆ, ಅದು ೧೯-೨೦ನೇ ಶತಮಾನದ ಸಂಧಿ ಸಂದರ್ಭದಲ್ಲಿ ಮುದ್ದಣ ಮತ್ತು ಪಂಜೆ ಎರಡು ಲಕ್ಷಣಗಳನ್ನು ಪ್ರತಿಪಾದಿಸಿದರು ಎಂಬುದನ್ನು. ಮುದ್ದಣ ಈ ಕಾಲದಲ್ಲಿ ನಿಂತು ಹಿಂದೆ ನೋಡಿದ. ಅಲ್ಲಿ ಅಸಂಖ್ಯ ಕನ್ನಡ ಸಾಹಿತ್ಯವಿತ್ತು. ತನ್ನ ನೆರಳಿನ ಗಾತ್ರಕ್ಕೆ ಬೆರಗಾಗಿ ಮುದ್ದಣ ಅಂಥದ್ದೇ ಬರಹಕ್ಕೆ ತನ್ನ ಸಮಕಾಲೀನ ಅನುಭವಗಳನ್ನು ಬಲಿಗೊಟ್ಟು 'ಹೊಸತನ್ನು ಹಳೆಯದಾಗಿಯೂ, ಹಳೆಯದನ್ನು ಹೊಸದಾಗಿಯೂ ಮಾಡುವ ಮಾಟಕಾರಿಕೆ'ಯನ್ನು ತೋರಿದ. 'ಪ್ರಾಚೀನ ಸಾಹಿತ್ಯಕ್ಕೆ ನಮ್ಮೆಲ್ಲರ ವತಿಯಿಂದ ಕೊನೆಯ ನಮಸ್ಕಾರ ಹೇಳುವುದಕ್ಕೆ' ಮುದ್ದಣ ಹಳಗನ್ನಡ ಕಾವ್ಯ ಬರೆದ ಎಂದು ನನಗನಿಸುವುದಿಲ್ಲ. ಬದಲಿಗೆ ಪೂರ್ವಸೂರಿಗಳ ಪರವಾಗಿ ನಮಗೆ ನಮಸ್ಕಾರ ಹೇಳಿ ಮರೆಯಾದ. ಅವನನ್ನು ನೆನಪಿಸಬೇಕಾದ್ದು ಅವನು ಆಧುನಿಕತೆಯ ನೀರು ಸಿಗುವ ಮೊದಲು ಅಗೆದು ತೆಗೆದ ಕೊನೆಯ ಮಣ್ಣಿನ ಪದರವಾಗಿ; ನೀರಿನ ಸೆಲೆಯ ತೇವವಾಗಿ ಅಲ್ಲ.

ಇದಕ್ಕೆ ಭಿನ್ನವಾಗಿ ಪಂಜೆ ಮತ್ತು ಪಂಜೆ ಪ್ರತಿನಿಧಿಸಿದ ಹಾದಿಯ ಅನೇಕ ಹೊಸಗನ್ನಡದ ಹರಿಕಾರರು ಮುದ್ದಣ ನಿಂತಲ್ಲೇ ನಿಂತರು ತಮ್ಮ ಪ್ರತಿಭೆಯನ್ನು ಭವಿಷ್ಯಕ್ಕೆ ಧಾರೆಯೆರೆದರು. ಅವರು ಸಿಂಹಾವಲೋಕನ ಮಾಡಿದರೇನೋ ನಿಜ; ಅದು ಮುದ್ದಣನಂತೆ ಹಿಂದೆ ನಡೆಯುವುದಕ್ಕಲ್ಲ; ತಮ್ಮ ನೆರಳಿನ ಗಾತ್ರಕ್ಕೆ ಬೆರಗಾಗುವುದಕ್ಕೂ ಅಲ್ಲ. ಮುಂದೆ ಆಧುನಿಕತೆಯ ಸೂರ್ಯ ಮೂಡತ್ತಿದ್ದನಲ್ಲ; ಆ ಬೆಳಕನ್ನು ಹಿಡಿಯುವುದಕ್ಕೆ. ಆ ಬೆಳಕಿನಲ್ಲಿ ಅವರಿಗೆ ಪಾಶ್ಚಾತ್ಯ ಪ್ರಭಾವ, ದೇಶಾಭಿಮಾನ, ಸಾಮಾಜಿಕ ವಿಷಮತೆ, ವಿಷಣ್ಣತೆ ಇವೆಲ್ಲಾ ಕಂಡವು. ನಿಧಾನಕ್ಕಾದರೂ ಭವಿಷ್ಯದತ್ತ ಹೆಜ್ಜೆ ಹಾಕಿದರು. ಪ್ರಾಚೀನ ಸಾಹಿತ್ಯಕ್ಕೆ ವಿದಾಯ ಹೇಳಿದರು.

ಮುದ್ದಣ ಹಳತು-ಹೊಸತನ್ನು ಬೆಸೆಯುವ ಕೊಂಡಿ ಎಂದು ಈ ಅರ್ಥದಲ್ಲೇ ಹೇಳಬೇಕು: ಅವನನ್ನು ಸಕಲ ಗೌರವಗಳೊಂದಿಗೂ ಪ್ರಾಚೀನನೆಂದೇ ಕಾಣಬೇಕು; ಆಧುನಿಕನೆಂದಲ್ಲ. ಏಕೆಂದರೆ ಈ ನೆಲದ ವಾಸ್ತವವನ್ನು ಅವನು ಕಾಣಬಹುದಿತ್ತಾದರೂ ಆ ಸಂದರ್ಭವನ್ನು ಅವನು ಕೈಚೆಲ್ಲಿ ವ್ಯರ್ಥವಾಗಿಸಿದ. ಉಳಿದವರು ಈ ಕಾರ್ಯವನ್ನು ಕೈಗೆತ್ತಿಕೊಂಡರೆಂದೇ ನವೋದಯವಾಯಿತು. ಒಂದು ಶತಮಾನದ ಬೆಳವಣಿಗೆಯಾಯಿತು. ಈ ದೃಷ್ಟಿಯಿಂದ ಮುದ್ದಣನಿಗಿಂತಲೂ ಪಂಜೆಯವರೇ ಹೆಚ್ಚು ಮಹತ್ವದ ಲೇಖಕರೇನೋ'? ಆಧುನಿಕ ಕನ್ನಡ ಸಾಹಿತ್ಯದ ತೆಂಕಣಗಾಳಿಯ ಅನೇಕ ಪ್ರಸಿದ್ಧ ಅಲೆಗಳಲ್ಲಿ ಮುದ್ದಣ, ಪಂಜೆ, ಗೋವಿಂದ ಪೈ, ಮುಳಿಯ, ಕಡೆಂಗೋಡ್ಲು, ಕಾರಂತ ಪ್ರಮುಖರು. ಯಾರು ಹೆಚ್ಚು ಯಾರು ಕಮ್ಮಿಯ ಪ್ರಶ್ನೆಯಲ್ಲ. ಬೆಳೆಯಾಗುವ ಮಳೆ ಯಾವ ನಕ್ಷತ್ರದ್ದು ಎಂಬುದನ್ನು ಈ ನೆಲದ ಉಳುಮೆ ಮಾಡುವವನು ಸದಾ ಯೋಚಿಸುತ್ತಾನೆ.

**ಟಿಪ್ಪಣಿಗಳು**

೧. ಕೆ.ಡಿ.ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯದರ್ಶನ, ದ್ವಿತೀಯ ಮುದ್ರಣ, ೧೯೮೩, ವಿಶ್ವಕನ್ನಡ ಸಮ್ಮೇಳನ, ಪುಟ ೨೧

೨. ಅದೇ ಪುಟ ೬೩

೩. ಮುದ್ದಣನು ಕಾವ್ಯತ್ರಯಗಳ ಕರ್ತೃ ಎಂಬ ಬಗ್ಗೆ ಕೂಡಾ ಸಂಶಯವನ್ನು ವ್ಯಕ್ತಪಡಿಸಿದ್ದರು. (ನೋಡಿ: ಮುದ್ದಣ ಬದುಕು-ಬರೆಹದ ಹಿನ್ನುಡಿ, ಪ್ರೊ. ಎಂ. ರಾಜಗೋಪಾಲಾಚಾರ್ಯ, ಪ್ರ: ಮುದ್ದಣ ಸ್ಮಾರಕ ಮಿತ್ರ ಮಂಡಳಿ, ೧೯೯೨)

# ಕನಕನ ಕಿಂಡಿ ಮತ್ತು ವಿಠಲ ಪರಂಪರೆ

● ನೀಲಗಂಗಯ್ಯ ಪೂಜಾರ

ಉಡುಪಿಯ ಶ್ರೀಕೃಷ್ಣನದೆಂದು ಹೇಳಲಾಗುವ ಶಿಲಾವಿಗ್ರಹ ಮತ್ತು ಆ ದೇವ ಮಂದಿರದ ಗೋಡೆಯಲ್ಲಿರುವ ಕಿಂಡಿಯ ಹಿಂದೆ ನಿಗೂಢ ಇತಿಹಾಸವಡಗಿದ್ದರೂ ಯಾರೂ ಅದನ್ನು ಸಂಶೋಧನೆ ಹಾಗು ವಿಶೇಷ ಅಧ್ಯಯನಗಳ ಮೂಲಕ ಬಯಲುಗೊಳಿಸದೆ, ಕಿಂಡಿಯೊಂದನ್ನೇ ಮುಂದೆ ಇಟ್ಟುಕೊಂಡು ಕಟಕಿ-ಉಪಹಾಸಗಳಲ್ಲಿ ತೊಡಗುತ್ತಿರುವ ವಿದ್ಯಮಾನಗಳನ್ನು ಆಗಾಗ ಪತ್ರಿಕೆಗಳಲ್ಲಿ ನೋಡುತ್ತಿರುತ್ತೇವೆ. ಇತ್ತೀಚೆಗೆ ನಿಡುಮಾಮಿಡಿ ಪೀಠಸ್ಥ ಜಗದ್ಗುರುಗಳಾಗಿರುವ ಶ್ರಿ ವೀರಭದ್ರ ಚನ್ನಮಲ್ಲ ಸ್ವಾಮಿಗಳ ಒಂದು ಮಾತನ್ನು ಮುಂದಿಟ್ಟುಕೊಂಡು ಪ್ರೊ. ಬರಗೂರು ರಾಮಚಂದ್ರಪ್ಪ, ಪ್ರೊ. ಚಂ. ಪಾ.ರಂತಹ ನಾಮಾಂಕಿತ ಸಾಹಿತಿಗಳ ಒಂದು ಗುಂಪು, ಉಡುಪಿಯ ಶ್ರೀ ಕೃಷ್ಣದೇವ ವಿಗ್ರಹದ ಹದಿನಾರು ವರ್ಷಗಳಿಗೊಮ್ಮೆ ಒದಗಿಬರುವ ಪೂಜಾಧಿಕಾರದ ಹಕ್ಕನ್ನು ತಮ್ಮ ಜೀವಿತಾವಧಿಯಲ್ಲಿ ನಾಲ್ಕನೇ ಬಾರಿಗೆ ಪಡೆಯಲಿರುವ ಪೂಜ್ಯ ವಿಶ್ವೇಶ್ವರ ತೀರ್ಥ ಸ್ವಾಮೀಜಿಯವರನ್ನು ಆ ಕಿಂಡಿಯ ಬಗ್ಗೆ 'ಮುಕ್ತ ಹಾಗು ವಸ್ತುನಿಷ್ಠ ವಾಗ್ವಾದ'ಕ್ಕೆ ಅಹ್ವಾನಿಸಿದರು.[1] ಅಂಥದೊಂದು ವಸ್ತುನಿಷ್ಠ ವಾಗ್ವಾದಕ್ಕೆ ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಪತ್ರಿಕೆಯು ವೇದಿಕೆಯನ್ನು ತನ್ನ ಜನಮನ ವಿಭಾಗದಲ್ಲಿ ಕಲ್ಪಿಸಿಕೊಟ್ಟಿತಾದರೂ ಅದು ಸಂಶೋಧನಾತ್ಮಕ ಪ್ರಗಲ್ಭ ಅಧ್ಯಯನ ಪೂರ್ಣ ಲೇಖನಗಳಿಗೆ ತನ್ನ ಪುಟಗಳನ್ನು ಮುಕ್ತಗೊಳಿಸಿ ಕೊಡಲಿಲ್ಲ. ಅದು ಒಂದೆರಡು ಲಘು ಸವಾಲ್-ಜವಾಬ್ ತರಾವರಿಯ ಪತ್ರಗಳನ್ನು ಪ್ರಕಟಿಸಿ ವಾಗ್ವಾದಕ್ಕೆ ಸಮಾಪ್ತಿಯನ್ನು ಹೇಳಿತು. ಸತ್ಯವು ಹೆಡೆಬಿಚ್ಚಿ ಆಡುವುದನ್ನು ನೋಡುವುದು ಉಭಯತರಿಗೂ ಬೇಕಾಗಿರಲಿಲ್ಲವೇನೋ!

ವಿಶ್ವೇಶ್ವರ ತೀರ್ಥ ಸ್ವಾಮೀಜಿಯವರು ದೇವಮಂದಿರ ಮತ್ತು ದೇವತಾ ವಿಗ್ರಹಗಳ ವಿಷಯವು ತರ್ಕ, ಪುರಾವೆ, ಆಧಾರಗಳಿಗೆ ನಿಲುಕದಷ್ಟು ದೂರವಿರುವ ಶ್ರದ್ಧೆ, ಪರಂಪರೆ, ಆಚರಣೆಗಳಿಗೆ ಸಂಬಂಧಿಸಿದ್ದಾಗಿದ್ದು ಆ ಕಿಂಡಿಯು ಕನಕರು ಈಗ ಕಿಂಡಿ ಇರುವ ಜಾಗೆಯಲ್ಲಿ ನಿಂತು ಪ್ರಾರ್ಥನೆ ಮಾಡುತ್ತಿದ್ದಾಗ ಶ್ರೀಕೃಷ್ಣನ ಶಿಲಾವಿಗ್ರಹವು ಅವರಿಗಾಗಿ ಮುಖತಿರುಗಿಸಿ

ಗರ್ಭಗೃಹದ ಹಿಂಬದಿಯ ಗೋಡೆ ಒಡೆದು ದರ್ಶನ ನೀಡಿದಾಗ ಉಂಟಾಯಿತೆಂದು ಹೇಳುತ್ತಾರೆ.[೨] ಶ್ರೀಗಳ ಈ ವಾದವು ಮುಕ್ತ ಹಾಗು ವಸ್ತುನಿಷ್ಠ ವಾಗ್ವಾದಕ್ಕೆ ಅಡ್ಡಲಾಗಿ ಕಲ್ಲುಗೋಡೆಯನ್ನು ನಿಲ್ಲಿಸುವಂಥದಾಗಿದ್ದು ಅದನ್ನೊಡೆದು ವಾಗ್ವಾದಕ್ಕೆ ಬರಗೂರು ರಾಮಚಂದ್ರಪ್ಪನವರಂಥವರು ತಾವೇ ದಾರಿ ಮಾಡಿಕೊಳ್ಳಬೇಕಾಗಿತ್ತು. ಆದರೆ ಅಂಥ ಕೆಲಸಕ್ಕಾಗಿ ಅವರ ಬಳಿಯಲ್ಲಿಯೇ ಸಾಮಗ್ರಿ ಇಲ್ಲವೆಂದು ತೋರುತ್ತದೆ. ಈ ಹಿಂದೆ ನಾನೊಮ್ಮೆ ಚಂದ್ರಶೇಖರ ಪಾಟೀಲರ ಸಂಕ್ರಮಣದಲ್ಲಿ[೩] ಅನಂತಮೂರ್ತಿ, ಕನಕದಾಸರು ಮತ್ತು ಬಾಳೆಹಣ್ಣಿನ ಮಾಧ್ವ ದಂತಪುರಾಣವೆಂಬ ಶೀರ್ಷಿಕೆಯ ಅಡಿಯಲ್ಲಿ ಈ ಕಿಂಡಿಯನ್ನು ಕುರಿತು ಪ್ರಾಸಂಗಿಕವಾಗಿ ಒಂದೆರಡು ಮಾತು ಬರೆದಿದ್ದೆ. ಬರಹಗಾರರೆಂದು ಒಮ್ಮೆ ದೀಕ್ಷೆ ಪಡೆದು ಬರಹಗಾರ ಆಶ್ರಮಸ್ಥರಾದರೆ ಮುಗಿದೇ ಹೋಯಿತು; ಮತ್ತೆ ಓದುವ ಅಗತ್ಯವೇ ಇಲ್ಲವೆಂದು ನಂಬಿಕೆಗೆ ಒಳಗಾಗಿರುವ ನಮ್ಮ ಲೇಖಕರಾರು ನಾನಲ್ಲಿ ಉಪಸ್ಥಿತಗೊಳಿಸಿದ ಅಂಶಗಳ ಮೇಲೆ ಸಂವಾದವನ್ನು ಬೆಳೆಸುವ ಗೋಜಿಗೆ ಹೋಗಲಿಲ್ಲ. ಹಾಗೇನಾದರು ಆಗಿದ್ದರೆ ಇಷ್ಟೊತ್ತಿಗೆ ಕನಕನ ಕಿಂಡಿಯ ಬಗ್ಗೆ ನಿಖರವಾಗಿ ನಂಬಬಲ್ಲ ಐತಿಹಾಸಿಕ ಸಾಮಗ್ರಿ ದೊರೆಯಬಹುದಾಗಿತ್ತು. ನಾನಲ್ಲಿ ಹೇಳಿದ್ದೆ: 'ಈ ಕಿಂಡಿ ರಚಿತವಾದಾಗ ಕನಕದಾಸರೂ ಇರಲಿಲ್ಲ-ವ್ಯಾಸರಾಯರು ಇರಲಿಲ್ಲ'[೪]ವೆಂದು. ಅದರಲ್ಲಿ ನಾನು ಉಡುಪಿಯ ಅಷ್ಟಮಠಗಳ ಸ್ವಾಮಿಗಳನ್ನಷ್ಟೇ ಅಲ್ಲ, ಇಡೀ ಮಾಧ್ವಸಂಪ್ರದಾಯ ಸಮೂಹವನ್ನೇ ಕೆಣಕಿದ್ದೆ. ಪಾಂಚರಾತ್ರ ಶಬ್ದದ ವ್ಯುತ್ಪತ್ತಿಯ ಬಗ್ಗೆ ಒಂದು ಅಡಿಟಿಪ್ಪಣಿ ಬರೆಯುತ್ತ: "ಯಾಮುನರು ಪಾಂಚಾರಾತ್ರ ಸಿದ್ಧಾಂತವು ಬ್ರಹ್ಮ ಸೂತ್ರಗಳು ಖಂಡಿಸಿ ಬೀಸಾಕಿದ ಶಿವಾಗಮಗಳಲ್ಲಿ ಸೇರಿಲ್ಲವೆಂದು ಹೇಳಿ ಅದು ವೇದಗ್ರಾಹ್ಯ ವೆಂದು ಸಿದ್ಧಾಂತಪಡಿಸಿದರು. ಸಿದ್ಧಾಂತವೊಂದರ ಗತಿ ಇಲ್ಲದ ಮಾಧ್ವಯತಿಗಳು ಉಡುಪಿಯ ಶ್ರೀಕೃಷ್ಣನ ನಿತ್ಯಪೂಜೆಗೆ ಶ್ರೀವೈಷ್ಣವದ ಪಾಂಚರಾತ್ರ ವಿಧಾನಗಳನ್ನು ಅನುಸರಿಸುತ್ತಾರೆ" ಎಂದು ಬರೆದಿದ್ದೆ. ಕನಕನ ಕಿಂಡಿಯ ಬಗ್ಗೆ ವಸ್ತುನಿಷ್ಠ ವಾಗ್ವಾದಕ್ಕೆ ಪ್ರಚೋದನೆಯನ್ನೀಯುವ ಸಂದರ್ಭವಿದ್ದಾಗ ಪ್ರಚೋದನೆಗೊಳ್ಳದ ಸಾಹಿತಿಗಳು ಈಗ ಅನಿಮಿತ್ತವಾಗಿ ಪ್ರಚೋದನೆ ಗೊಂಡಿದ್ದನ್ನು ಕಂಡು ವಿಶ್ವೇಶ್ವರತೀರ್ಥ ಶ್ರೀಗಳು ಅವರ ಸವಾಲನ್ನು ತಿರಸ್ಕರಿಸಿ ಅದನ್ನು ಕೇವಲ ದುರುದ್ದೇಶಪೂರ್ಣವಾದ, ಬೇಜವಾಬ್ದಾರಿ ಹೇಳಿಕೆಯೆಂದು[೫] ಶ್ರೀ ಕರೆದಿದ್ದಾರೆ. ಮುಂದುವರಿಯುತ್ತ ಅವರು ಉಳಿದ ಮಹಾಪುರುಷರ ಪ್ರಚಲಿತ ಪವಾಡಗಳ ಬಗ್ಗೆ ತುಟಿ ಎತ್ತದೆ ದಲಿತ ಮಹಾಸಂತ ಕನಕರ ಪವಾಡದಲ್ಲಿ ಮಾತ್ರ ಈ ಪ್ರಶ್ನೆ ವಿಮರ್ಶೆ ಮಾಡುವದರ ಉದ್ದೇಶ ಏನು?[೬] ಎಂದು ಆಕ್ಷೇಪಿಸಿದ್ದಾರೆ. ಹಾಗೆ ನೋಡಿದರೆ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರ ನಿಡುಮಾಮಿಡಿ ಪೀಠದ ಪರಂಪರೆಯಲ್ಲಿಯೂ ಸಾಕಷ್ಟು ಪವಾಡಗಳು ಪ್ರಚಲಿತದಲ್ಲಿವೆ. ಆ ಪರಂಪರೆಯಲ್ಲಿ ಆರನೆಯವರಾಗಿದ್ದ ಚಂದ್ರಗುಂಡ ಶಿವಾಚಾರ್ಯರು ಹೈಹಯವಂಶದ ಚೋಲಭೂಪಾಳನ ಉಪವನದಲ್ಲಿದ್ದ ಚಂದ್ರಮೌಳೇಶ್ವರ ಮಂದಿರಲ್ಲಿ ಒಂದು ಮಧ್ಯಾಹ್ನ ಲಿಂಗಪೂಜೆಯಲ್ಲಿ ನಿರತರಾಗಿದ್ದಾಗ ನೈವೇದ್ಯಕ್ಕಾಗಿ ಭಕ್ಷ್ಯಪದಾರ್ಥವೇನೂ ಇಲ್ಲದ್ದಕ್ಕಾಗಿ ಮಂದಿರದ ಮುಂದಿದ್ದ ತೆಂಗಿನಮರವು ತಾನಾಗಿಯೇ ಅವರು ಪೂಜಿಸುತ್ತಿದ್ದ

ಲಿಂಗದ ಮೇಲೆ ಎರಗಿ (ಅದು ಇಂದು ಲಿಂಗಾಯತರು ಧರಿಸುವ ಇಷ್ಟಲಿಂಗವಾಗಿರದೆ ಸ್ಥಳದಿಂದ ಸ್ಥಳಕ್ಕೆ ಒಯ್ಯಬಲ್ಲ ಮತ್ತು ಗದ್ದುಗೆಯ ಮೇಲಿಟ್ಟು ಪೂಜಿಸುವ ಈಶ್ವರಲಿಂಗವಾಗಿರಬೇಕೆಂದು ತೋರುತ್ತದೆ) ಎಳೆನೀರು, ಎಳೆಕೊಬ್ಬರಿಯನ್ನು ನೀಡಿತಂತೆ.[-] ಈ ಚಂದ್ರಗುಂಡರಿಂದ ವೀರಭದ್ರಚೆನ್ನಮಲ್ಲ ಸ್ವಾಮಿಗಳದು ೩ಿ೧ನೇ ತಲೆಮಾರು. ತೆಂಗಿನ ಗಿಡದ ಈ ಪವಾಡಕ್ಕೆ ಇನ್ನೊಂದು ಆವೃತ್ತಿಯೂ ಉಂಟು. ಚನ್ನಬಸವ ಪುರಾಣದ ವಿರೂಪಾಕ್ಷ ಪಂಡಿತನ ಮೇರೆಗೆ "ನಿಡುಮಾಮಿಡಿಯ ಕರಿಬಸವನ್ನೈತರುತೆ । ನುಡಿದು ತೆಂಗಿನ ಮರನ್ ಭಿಕ್ಷಮಂ ಬೇಡಲತಿ । ಕಡುಬಾಗಿನಿಂದು ಫಲಗಳ ನೀಡಿ ಬಳಿಕಲಾ ಮರನೆಂದಿನಂತೆಸೆವುದು ॥ ನಿಡುಮಾಮಿಡಿ ಪೀಠ ಪರಂಪರೆಯಲ್ಲಿ ಈವರೆಗೆ ಒಟ್ಟು ೨೩ ಜನ ಕರಿಬಸವರಾಜೇಂದ್ರ ಹೆಸರಿನ ಸ್ವಾಮಿಗಳಾಗಿ ಹೋಗಿದ್ದು, ವಿರೂಪಾಕ್ಷ ಪಂಡಿತನು ಹಂಪಿಯಲ್ಲಿ ಉದ್ದಾನ ವೀರಭದ್ರದೇವ ಮೂರ್ತಿಯನ್ನು ಸ್ಥಾಪಿಸಿದ ೧೧ನೇ ಕರಿಬಸವ ಶಿವಾಚಾರ್ಯ ಮಹಾಸ್ವಾಮಿಗಳನ್ನು ಕುರಿತು ಈ ಪವಾಡವನ್ನು ಸೃಷ್ಟಿಸಿರಬಹುದೆಂದು ತೊರುತ್ತದೆ. ಈಗಿನ ಕೊಪ್ಪಳ ಜಿಲ್ಲೆಯ ಕುಷ್ಟಗಿಯಲ್ಲಿ ಅವರು ಸಮಾಧಿಸ್ಥರಾದರೆಂದು ಅಖ್ಯಾಯಿಕೆಯುಂಟು. ಇದರ ಹೊರತೂ ತೆಂಗಿನ ಗಿಡದ ಈ ಪವಾಡವು ವೀರಭದ್ರ ಚನ್ನಮಲ್ಲಸ್ವಾಮಿಗಳ ನಿಡುಮಾಮಿಡಿ ಪೀಠದ ಆಧಿಪತ್ಯದ ಗೂಳೂರಿನ ಮಠದ ಶಿಲಾಸ್ತಂಭದಲ್ಲಿ ಶಿಲ್ಪಚಿತ್ರಣಗೊಂಡಿರುತ್ತದೆ. ಆದರೆ ಇಲ್ಲಿ ಚಂದ್ರಗುಂಡರು ಶಿವಪೂಜಾನಿರತ ರಾಗಿರದೆ ತೆಂಗಿನ ಗಿಡದ ಬುಡದಲ್ಲಿ ನಿಂತುಕೊಂಡು ಕೈಯೊಡ್ಡಿ ಭಿಕ್ಷೆ ಕೇಳುವಂತೆಯೂ ತೆಂಗಿನಕಾಯಿಯೊಂದು ಅವರ ಪಾದಗಳ ಬಳಿಯಲ್ಲಿ ಬಿದ್ದುಕೊಂಡಿರುವಂತೆಯೂ ಚಿತ್ರಿತರಾಗಿರುತ್ತಾರೆ. ವಿಶ್ವೇಶ್ವರ ತೀರ್ಥ ಸ್ವಾಮಿಗಳಿಗೆ ಕನಕನಕಂಡಿಯು ಅವರ ಧಾರ್ಮಿಕ ಶ್ರದ್ಧೆಯ ವಿಷಯವಾಗಿರಬಹುದು. ಅದಕ್ಕಾಗಿ ಅವರೊಂದಿಗೆ ವಸ್ತುನಿಷ್ಠ ವಾಗ್ವಾದ ನಿರರ್ಥಕ ವಾಗಬಲ್ಲದು. ಆದರೆ ಪವಾಡಗಳ ಬಗ್ಗೆ ವಸ್ತುನಿಷ್ಠ ಚರ್ಚೆಗೆ ಸಿದ್ಧವಿರುವ ವೀರಭದ್ರ ಚನ್ನಮಲ್ಲಸ್ವಾಮಿಗಳು ತಮ್ಮ ಮಠದ ಸುತ್ತ ಹೆಣೆದುಕೊಂಡಿರುವ ಪವಾಡಗಳನ್ನು ಮುಕ್ತ ಚರ್ಚೆಗೆ ತೆರೆದಿಡುವದನ್ನು ಬಿಟ್ಟು ಆ ಬಗ್ಗೆ ತಾಟಸ್ಥ್ಯ ತಾಳಿರುವದೇಕೆ ಎಂಬ ಪ್ರಶ್ನೆ ಉಳಿದು ಕೊಂಡುಬಿಡುತ್ತದೆ.

### ಉಡುಪಿಯಲ್ಲಿರುವ ಪ್ರತಿಮೆಯು ಶ್ರೀ ಕೃಷ್ಣನದಲ್ಲವೇ ಅಲ್ಲ

ಬ್ರಾಹ್ಮಣೀ ಮೂಲವುಳ್ಳ ಪ್ರತ್ಯೇಕತೆ, ನಿಗೂಢತೆ, ಮಾನವ ವಿರೋಧಿ ಧಾರ್ಮಿಕ ಪ್ರಮೇಯ ಗಳು, ಅವಾಸ್ತವ ಪವಾಡಗಳ ಮೊತ್ತವಾಗಿರುವ ಮಾಧ್ವ ಪರಂಪರೆಯ ಉಡುಪಿಯ ದೇವ ಮಂದಿರದಲ್ಲಿ, ಪೂಜೆಗೊಳ್ಳುತ್ತಿರುವ ದೇವ ಪ್ರತಿಮೆಯ ಬಗ್ಗೆ ಅವಾಸ್ತವ ನಿಗೂಢತೆಯನ್ನು ಕಾಪಾಡಿಕೊಂಡು ಬರಲಾಗಿದೆ. ವಿಗ್ರಹದಲ್ಲಿ ಆಧೇಯ ಶಕ್ತಿಯರೂಪದಲ್ಲಿ ದೇವತಾ ಸಾನ್ನಿಧ್ಯವು ಪ್ರಸ್ಥಾಪಿತಗೊಂಡಿರುತ್ತದೆಂಬ ಮಾಧ್ವಪಂಥೀಯರ ಮೂರ್ತಿಪೂಜೆಯ ಶ್ರದ್ಧಾಮೂಲವನ್ನು ಇತರರು ಪ್ರಶ್ನಿಸಬಾರದು. ಆದರೆ ಆ ಪ್ರತಿಮೆ ಎಂತಹದು, ಅದರಲ್ಲಿ ಪ್ರಸ್ಥಾಪಿತಗೊಂಡ ದೇವತೆಯು ಯಾರು ಎಂಬದನ್ನು ಸರಿಯಾಗಿ ವಿವರಿಸದೆ ಅಲ್ಲಿಯೂ ದ್ವಿವಿಧತೆಯನ್ನು ಮುಂದುವರಿಸಿಕೊಂಡು ಬರಲಾಗುತ್ತಿದೆ. ಇದೇ ಅರ್ಥವಾ ನವಾಗಿದೆ. ಅಲ್ಲಿ ಮೂರ್ತಗೊಂಡ

ವಿಗ್ರಹವು ದ್ವಾರಕೆಯನ್ನಾಳಿದ ಯದುವಂಶದಲ್ಲಿ ಜನಿಸಿದ ಕೃಷ್ಣನದಾಗಿರದೆ ಬೌಧಾಯನ ಧರ್ಮಸೂತ್ರದ ಮೂಲಕ ಆರ್ಯರ ದೇವಾತಾ ಸಮೂಹಕ್ಕೆ ಪರಿಚಿತಗೊಂಡ ದಾಮೋದರನ ದಾಗಿದ್ದು ಅದರಲ್ಲಿ ಮಧ್ವಾಚಾರ್ಯರು ಪ್ರಸ್ತಾಪಿಸಿದ ದೇವಸಾನ್ನಿಧ್ಯವು ವಿಠ್ಠಲನದಾಗಿರಬೇಕೆಂದು ನಿರ್ಧಾರಕ್ಕೆ ಬರಲು ಕಾರಣಗಳಿವೆ.

ಮೊದಲನೆಯದಾಗಿ ಉಡುಪಿಯಲ್ಲಿರುವ ಆ ವಿಗ್ರಹವನ್ನು ಮಧ್ವಾಚಾರ್ಯರು ವಿನ್ಯಾಸಗೊಳಿಸಿ ಶಿಲೆಯಲ್ಲಿ ಕೆತ್ತಿಸಿ ಸಿದ್ಧಗೊಳಿಸಿರುವುದಿಲ್ಲ; ಅದು ಅವರಿಂದ ಆಕಸ್ಮಿಕವಾಗಿ ಸಂಪಾದಿತ ವಿಗ್ರಹವಾಗಿರುತ್ತದೆ. ಅದನ್ನು ಸಮುದ್ರಗರ್ಭದಲ್ಲಿ ಎಂದೋ ಮುಳುಗಿ ಹೋಗಿದ್ದ ದ್ವಾರಕೆಯ ಅವಶೇಷಗಳಿಂದ ಎತ್ತಿ ತರಲಾಗಿದೆಯೆಂದು ಮಾಧ್ವಪ್ರಪಂಚದ ಸಾರ್ವತ್ರಿಕ ನಂಬುಗೆಯಾಗಿದೆ. ದ್ವಾರಕೆಯು ಯಾದವ ಸಾತ್ವತರ ಅಂತರ್ಯುದ್ಧದಲ್ಲಿ ಉಧ್ವಸ್ತಗೊಂಡು ಸಮುದ್ರದ ಅಲೆಗಳಲ್ಲಿ ಲೀನ ಹೊಂದಿದಾಗ ಶ್ರೀಕೃಷ್ಣನಿನ್ನೂ ಅದಕ್ಕೆ ಸಾಕ್ಷಿಯಾಗಿ ಜೀವಸಮೇತ ಈ ಭೂಮಿಯ ಮೇಲಿದ್ದ. ಆತನು ತಾನಿನ್ನೂ ಜೀವಂತ ಮಾನವನಾಗಿರುವಾಗಲೇ ತನ್ನ ವಿಗ್ರಹವನ್ನು ಕೆತ್ತಿಸಿಕೊಂಡು ದೇವನಾಗಿರಲಿಕ್ಕೆ ಇಚ್ಛಿಸಿರಲಿಕ್ಕಿಲ್ಲ. ಆ ಕಲ್ಪನೆಯೇ ಅಸಂಬದ್ಧ. ಮೇಲಾಗಿ ಉಡುಪಿಯಲ್ಲಿ ಕಡಗೋಲು ಕೃಷ್ಣದೆಂದು ಹೇಳಲಾಗುತ್ತಿರುವ ವಿಗ್ರಹವು ಮಹಾಭಾರತ, ಭಾಗವತ ಮಹಾಪುರಾಣವೇ ಮೊದಲಾದ ವೈಷ್ಣವ ಪುರಾಣಗಳಲ್ಲಿ ವರ್ಣಿಸ ಲಾಗಿರುವ ಗೋಪಾಲಕ ಕೃಷ್ಣನ ಆಕೃತಿ-ಭಾವಭಂಗಿಗಳಿಗೆ ಅನುರೂಪವಾಗಿರುವುದಿಲ್ಲ. ಪೂಜೆಯ ಅಲಂಕಾರಗಳೇನೂ ಇಲ್ಲದ ಬತ್ತಲೆ ಶಿಲ್ಪವಿಗ್ರಹದ ಭಾವಚಿತ್ರವನ್ನು ನಾನು ನೋಡಿದ್ದೇನೆ. ಸುಮಾರು ೨.೫ ಮೀಟರಿನಷ್ಟು ಎತ್ತರವಿರಬಹುದಾದ ಆ ವಿಗ್ರಹದ ಕೈಯಲ್ಲಿರು ವುದು ಕಡಗೋಲಾಗಿರದೆ ದನಗಾಹಿಗಳು ಕೈಯಲ್ಲಿ ಹಿಡಿದಿರುವ ಅಳೆತ್ತರದ ಬಡಿಗೆಯಾಗಿರು ತ್ತದೆ. ಮುಂಗೈ, ತೋಳು, ಕೊರಳೂ, ಕಿವಿಗಳಲ್ಲಿ, ಏನೊಂದೂ ಆಭರಣಗಳಿರುವುದಿಲ್ಲ. ತಲೆಗೆ ಒಂದು ಸುತ್ತು ಬಿಗಿದ ವಸ್ತ್ರವಿದ್ದು, ಕೌಪೀನು ನಡುವಿಗೆ ಬಿಗಿದುಕೊಂಡ ಹುಲ್ಲಿನ ಎಳೆಗಳಿಗೆ ಮಡಚಿಕೊಂಡಂತಿದ್ದು ಅದರ ಚುಂಗು ನಡುವಿನಿಂದ ಇಳಿಬಿದ್ದಂತಿದೆ. ಇನ್ನೊಂದು ಕೈಯಲ್ಲಿಯ ಹಗ್ಗದ ಸುರಳಿಯು ಟೊಂಕ-ತೊಡೆಗಳನ್ನು ಬಳಸಿಕೊಂಡಂತೆ ಕಾಣುತ್ತದೆ. ನಿಷ್ಣಾತ ವೈದಿಕ ಸಾಹಿತ್ಯ ಸಂಶೋಧಕರಾದ ದಿನೇಶ್ ಚಂದ್ರ ಸರ್ಕಾರರವರು ಬೌಧಾಯನ ಧರ್ಮಸೂತ್ರವನ್ನನುಸರಿಸಿ ವರ್ಣಿಸಿರುವ ದಾಮೋದರ (ಹೊಟ್ಟೆಯ ಮೇಲೆ ಗೋಧಿಯ ಹುಲ್ಲನ್ನು ಧರಿಸಿದವ)ನ ಆಕೃತಿಯನ್ನು ಈ ವಿಗ್ರಹವು ಹೋಲುತ್ತದೆ.[೬]

ಎರಡನೆಯದಾಗಿ ಸ್ವತಃ ಮಧ್ವಾಚಾರ್ಯರೇ ಈ ದೇವವಿಗ್ರಹವನ್ನು ಶ್ರೀಕೃಷ್ಣನೆಂದು ಕರೆದಿರಲಿಕ್ಕಿಲ್ಲವೆಂದು ಅನುಮಾನಿಸಕಲಿಕ್ಕೆ ಕಾರಣವಿದೆ. ಮಾಧ್ವಪರಿಭಾಷೆಯಲ್ಲಿ ಕೃಷ್ಣ ಯಾರು? ತಮ್ಮ ತತ್ವಸಂಖ್ಯಾನದಲ್ಲಿ ಅವರು 'ಸ್ವತಂತ್ರೋ ಭಗವಾನ್ ವಿಷ್ಣುಃ' ಎಂದು ಹೇಳಿದ್ದಾರೆ. ವಿಷ್ಣುಹರಿಯು ಸ್ವತಂತ್ರ-ಸ್ವಯಂಪೂರ್ಣ; ಆತನಲ್ಲಿ ಕೊರತೆ-ದೋಷ ಏನೊಂದು ಇಲ್ಲ. ಲಕ್ಷ್ಮಿ ಹರಿಯ ಶಕ್ತಿಯಾದರೂ ಆತನಿಗಿಂತ ಭಿನ್ನಳಾಗಿದ್ದಾಳೆ. - ಆತನ ಭಿನ್ನತನ್ಮಾತ್ರಾಧೀನೆ. ಪ್ರಾಣದೇವರು ಅಂದರೆ ವಾಯು ದೇವನು ಹರಿಯ ಪ್ರತಿಬಿಂಬ. ಗರುಡ, ಪ್ರದ್ಯುಮ್ನ, ಅನಿರುದ್ಧ

ಇವರು ಪ್ರತಿಬಿಂಬದ ಪ್ರತಿಬಿಂಬಗಳು. ಆದರೆ ಕೃಷ್ಣನ ಪಾಡು ಕೃಷ್ಣನಿಗೇ ಗೊತ್ತು. ಅದನ್ನಾತ ಅರ್ಜುನನಿದಿರು ಹೀಗೆ ತೋಡಿಕೊಳ್ಳುತ್ತಾನೆ: 'ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಂ ಅಬುದ್ಧಯಃ।(ಬುದ್ಧಿಗೇಡಿಗಳಾದ ಮಾನವರು ನನ್ನನ್ನು ಅವ್ಯಕ್ತ ಅವತಾರವಂತನೆಂದು ತಿಳಿಯದೆ ಸಾಮಾನ್ಯ ಜೀವ ಹೊತ್ತ ಮಾನವನೆಂದೇ ಪರಿಭಾವಿಸಿದ್ದಾರೆ) ಪರಂ ಭಾವಂ ಅಜಾನಂತೋ ಮಮ ಅವ್ಯಯಂ ಅನುತ್ತಮಂ॥(ನನ್ನ ಅವ್ಯಯತ್ವ, ನನ್ನ ಸರ್ವಶ್ರೇಷ್ಠತೆ, ನನ್ನ ಪರಾತ್ಪರತೆಯ ಸ್ವರೂಪವನ್ನು ಅವರು ಗ್ರಹಿಸಲಾರರು)-ಭಗವದ್ಗೀತೆ ಅಧ್ಯಾಯ೭, ಶ್ಲೋಕ ೨೪, ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥ ಅದೇ ಗ್ರಂಥದ ಅಧ್ಯಾಯ೧೮ ಶ್ಲೋಕದಲ್ಲಿ ಕಾಳಜಿ ಬೇಡವೆಂದು ಧೈರ್ಯ ಹೇಳಿದ ಪರಮಾತ್ಮನ ಅವತಾರಿ ಶ್ರಿಕೃಷ್ಣನು ಅದರ ಮುಂದಿನ ಶ್ಲೋಕದಲ್ಲಿಯೇ ಅಂದರೆ ೬೭ನೇ ಶ್ಲೋಕದಲ್ಲಿ, 'ಇದಂ ನ ಕರಾಚನ ವಾಚ್ಯಂಯೋ ಮಾಂ ಅಭ್ಯಸೂಯತಿ' (ನನ್ನ ಬಗ್ಗೆ ದುರಾಕ್ಷೇಪ ಮಾಡುವವನಿಗೆ ಇದನ್ನೆಂದೂ ಹೇಳಬೇಡ) ಎಂದು ಕಿವಿಮಾತು ಹೇಳುತ್ತಾನೆ. ಮಧ್ವಾಚಾರ್ಯರು ಇಂಥ ಕೃಷ್ಣನನ್ನು ಸ್ವಯಂ ಪರಿಪೂರ್ಣ ದೇವನೆಂದು ಉಡುಪಿ ಮಠದ ಅಧಿದೈವವಾಗಿ ನಿಯಾಮಕಗೊಳಿಸಿರುವ ಸಾಧ್ಯತೆಗಳು ಬಹು ಕಡಿಮೆ. ದಾಸಕೂಟದ ಮಹಾಸ್ಥಾಪಕರೆಂದು ಕರೆಯಲಾಗುವ ಶ್ರೀಪಾದರಾಯ ಸ್ವಾಮಿಗಳು ತಮ್ಮ ವಿದ್ವತ್ ಪ್ರಖರತೆಯಿಂದ ಭಕ್ತಿಭಾವ ಸೂಸುವ ಸುಂದರ ಹಾಡುಗಳನ್ನು ರಚಿಸಿದ್ದು ಅವುಗಳಿಗೆ ಕವಿಮುದ್ರಿಕೆಯಾಗಿ 'ರಂಗವಿಠಲ'ನೆಂಬ ದೈವನನ್ನು ನೆನೆಸಿಕೊಂಡಿದ್ದಾರೆ. ಬಹಳ ದೂರ ಹೋಗಬೇಕಿಲ್ಲ. ಶ್ರೀ ಬನ್ನಂಜೆ ಎಂಬವರು ಉಡುಪಿಯ ಪೇಜಾವರ ಮಠದಲ್ಲಿ ದೊರೆತ ತಾಡವಾಲಯ ಗ್ರಂಥವೊಂದನ್ನು ಪರಿಶೋಧಿಸಿ ಆ ಮಠದ ಪರಂಪರೆಯಲ್ಲಿ ಆಗಿಹೋದ ೨೫ ಜನ ಯತಿಗಳ ಹೆಸರುಗಳನ್ನು ಅವರವರ ಪ್ರಶಸ್ತಿ ಪ್ರಶಂಸೆ ಸಮೇತ ಸಂಪಾದಿಸಿ ೧೭-೧-೨೦೦೦ ದಿನಾಂಕದ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಿದ್ದನ್ನು ಲಕ್ಷಾವಧಿ ಜನ ಓದುಗರು ಓದಿದ್ದಾರೆ. ಈ ಮಠದ ಸ್ಥಾಪಕರಾದ ಅಧೋಕ್ಷಜ ಮುನಿಗಳನ್ನೇ 'ವಿಠ್ಠಲ ಪೂಜಕಂ' ಎಂಬ ಅಭಿಧಾನದಿಂದ ಪ್ರಶಂಸಿಸಲಾಗಿದೆ. ಅದರಂತೆಯೇ ಆ ಮಠ ಪರಂಪರೆಯಲ್ಲಿ ೨ನೆಯವರಾದ ಕಮಲಾಕ್ಷರು, ೬ನೆಯವರಾದ ವಿಜಯಧ್ವಜರು, ೧೪ನೆಯವರಾದ ವಿಶ್ವಪ್ರಜ್ಞರು, ೧೫ನೆಯವರಾದ ವಿಜಯತೀರ್ಥರು, ೧೯ನೆಯವರಾದ ವಿದ್ಯಾರಾಜರು, ೨೫ನೆಯ ವಿಶ್ವಬೋಧರು "ವಿಠ್ಠಲ ಪೂಜಕ"ರೆಂದು ಸ್ವಸ್ತಿಗೆ ಅರ್ಹರಾಗಿದ್ದಾರೆ. ೯ನೆಯವರಾಪ ದಾಮೋದರ ಯತಿಗಳು ವಿಶೇಷವಾಗಿ ದಾಮೋದರ ಪದಾಂಬೋಜ ಧ್ಯಾನಧೂತರೆಂದು ಸ್ತುತಿಸಲ್ಪಟ್ಟಿದ್ದಾರೆ. ತೀರ ಅಪರೂಪಕ್ಕೆಂಬಂತೆ ೫ನೆಯವರಾದ ಮಹೇಂದ್ರಯೋಗಿಯವರನ್ನು ಮಾತ್ರ ಮಹೇಂದ್ರಾವರಜಂ ಕೃಷ್ಣಂ ಪೂಜಯಂತಂ ಸುಭಕ್ತಿತಃ ಯೆಂದು ವರ್ಣಿಸಲಾಗಿದೆ. ಇಲ್ಲಿ ವ್ಯಾಖ್ಯಾನಿಸಲ್ಪಟ್ಟ ಒಬ್ಬನೇ ಒಬ್ಬ ಕೃಷ್ಣನೂ ಸಹ ಮಹೇಂದ್ರಾ ಪರಜ ಕೃಷ್ಣ ಹೊರತು ಕಡಗೋಲು ಕೃಷ್ಣನಲ್ಲ. ವಿಠ್ಠಲ ಶಬ್ದದ ವ್ಯುತ್ಪತ್ತಿ ಏನಿದೆಯೋ ಏನೋ; ಅದರ ಧಾರಣತ್ವದ ಲಕ್ಷಣ, ಗುಣವೈಶಿಷ್ಟ್ಯಗಳ ಬಗ್ಗೆಯೂ ಹೆಚ್ಚು ಮಾಹಿತಿಯು

ದೊರೆಯುತ್ತಿರುವುದಿಲ್ಲ. ಇಲ್ಲಿ ನೋಡಲಾಗಿ ಅದಕ್ಕೂ ದಾಮೋದರ ಶಬ್ದಕ್ಕೂ ಎಲ್ಲಿಯದೋ-ಎಂಥದೋ ಜ್ಞಾತಿಸಂಬಂಧವಿದ್ದ ಹಾಗಿದೆ. ಮಧ್ವಾಚಾರ್ಯರು ಬೌಧಾಯನ ಧರ್ಮಸೂತ್ರದಲ್ಲಿ ವರ್ಣಿತನಾದ ದಾಮೋದರನನ್ನು ತಮ್ಮ ಹರಿಯೊಂದಿಗೆ ಸಮೀಕರಿಸಿಕೊಂಡಿದ್ದರೋ ಏನೋ? ಯಾರಾದರೂ ಆ ಸಂಶೋಧನೆಯ ಆಳಕ್ಕಿಳಿಯಬೇಕು. ಕೃಷ್ಣನು ಮಾತ್ರ ಮಾಧ್ವರಿಗೆ ಅಪ್ರಸ್ತುತನಾಗಿಯೇ ಉಳಿಯುತ್ತಾನೆ. ಅದು ನಿಸ್ಸಂಶಯ.

ಶಂ.ಬಾ ಜೋಶಿಯವರು 'ಪಂಢರಿ ವಿಠಲನು ವಿಜಯನಗರಿಗೆ ಬಂದದು' ಎಂಬ ತಮ್ಮದೊಂದು ಸಂಶೋಧನ ಲೇಖನದಲ್ಲಿ ಪಾಂಡುರಂಗ(ಶಿವ)ನೂ, ವಿಷ್ಣುವೂ ಸಾಮರಸ್ಯ ಹೊಂದಿ ವಿಠ್ಠಲ ಸ್ವರೂಪವನ್ನು ತಾಳಿರಬೇಕೆಂದು ಊಹಿಸುತ್ತಾರೆ.[೧೦] ಅದೇ ಲೇಖದಲ್ಲಿ ಇನ್ನೊಂದು ಸಂದರ್ಭದಲ್ಲಿ ಅವರು "ವಿಜಯನಗರದ ರಾಜರಲ್ಲಿ ವಿಠ್ಠಲಭಕ್ತಿಗೆ ಆರಂಭವಾದುದು ಕೃಷ್ಣರಾಯನಿಂದಲೆ ಅಲ್ಲ, ಇವರ ತಂದೆಯ ಕಾಲಕ್ಕೇ ಶ್ರೀ ವಿಠ್ಠಲನು ಶ್ರೀ ವಿರೂಪಾಕ್ಷ ದೇವರೊಡನೆ ರಾಜಮಾರ್ಯಾದೆಗಳನ್ನು ಸ್ವೀಕರಿಸುತ್ತಿದ್ದನೆಂದೂ ಶ್ರೀ ವ್ಯಾಸರಾಯರು ವಿಜಯನಗರಿಯಲ್ಲಿ ಪ್ರವೇಶಿಸಿದ ಕಾಲಕ್ಕೆ ವಿಠ್ಠಲನ ಪ್ರಭೆಯು ಪಟ್ಟಣದಲ್ಲೆಲ್ಲ ಹರಡಿಕೊಂಡಿತೆಂದೂ ವರ್ಣನೆಗಳಿವೆ."[೧೧] ಶಂ.ಬಾ. ರವರು ಈ ವರ್ಣನೆಗೆ ಬಿ. ವೆಂಕೋಬರಾವ್‌ರವರ ವ್ಯಾಸರಾಯ ಚರಿತೆಯ ಆಧಾರ ತೋರಿಸುತ್ತಾರೆ. ದಾಸಕೂಟ-ವ್ಯಾಸಕೂಟಗಳೆಂಬ ಮಾಧ್ವಸಂತ-ಸಮುದಾಯಗಳಿಗೆ ನಿರ್ದೇಶಕರಂತಿದ್ದ ವ್ಯಾಸರಾಯರ ನೇರ ನಿರ್ದೇಶಕತ್ವದಲ್ಲಿಯೇ ಹಂಪಿಯಲ್ಲಿ ವಿಜಯ ವಿಠ್ಠಲನಿಗಾಗಿ ವೈಭವೋಪೇತವಾದ ದೇವಮಂದಿರ ಹಾಗೂ ಕಲ್ಲಿನ ರಥದ ನಿರ್ಮಾಣಕಾರ್ಯವನ್ನು ಕೃಷ್ಣದೇವರಾಯನು ಕೈಕೊಂಡದ್ದುನ್ನು ವಿಜಯನಗರ ರಾಜರ ಇತಿಹಾಸವು ದಾಖಲಿಸುತ್ತದೆ. ವ್ಯಾಸರಾಯರು ವಿಠ್ಠಲನ ಆರಾಧಕರೇ ಆಗಿದ್ದರೆಂಬುದಕ್ಕೆ ಬೇರೆ ಆಧಾರವೇನು ಬೇಕು? ಉಡುಪಿಯ ಮಂದಿರದಲ್ಲಿರುವ ಮೂರ್ತಿಯು ವಿಠ್ಠಲನಿಗೆ ಸಂಬಂಧಿಸಿದ ದೇವತಾವಿಗ್ರಹವಾಗಿರಬೇಕೆಂದು ಪ್ರಸಕ್ತಿಯಿಂದ ಸಂದೇಹಗಳು ಮೂಡುತ್ತವೆ.

**ಉಡುಪಿಯ ದೇವ ಮಂದಿರದ ಹಿಂಭಾಗದ ಗೋಡೆಯಲ್ಲುಂಟಾದ ಕಿಂಡಿಯ ವೃತ್ತಾಂತ**

ವ್ಯಾಸಕೂಟ-ದಾಸಕೂಟಗಳು ವಿಜೃಂಭಿಸಿದ್ದು ಹಂಪಿಯ ನೆಲದಲ್ಲಿ, ವಿಠ್ಠಲನ ಸನ್ನಿಧಿಯಲ್ಲಿ. ಕನಕದಾಸರು ತಮ್ಮ ಮೋಹದ ತರಂಗಿಣಿಗೆ ದ್ವಾರಕೆಯನ್ನು ಕಲ್ಪಿಸಿಕೊಂಡದ್ದು ವಿಜಯನಗರವನ್ನು ಕಣ್ಮುಂದೆ ಇಟ್ಟುಕೊಂಡೇ ಉಡುಪಿ ಆ ಯಾವ ಕೂಟಸ್ಥ ಸಂತರ ಮಾತು ಮನಸ್ಸುಗಳಲ್ಲಿ ಇರಲೇ ಇಲ್ಲ. ಆಗ ಅದರ ಹೆಸರು ಶಿವಳ್ಳಿಯಾಗಿತ್ತು. ಶಿವಳ್ಳಿ ಶೈವ ಪ್ರಾಬಲ್ಯದ ನಾಡಾಗಿತ್ತು. ಡಾ. ಕೆ.ವಿ. ರಮೇಶ್‌ರ ಶೋಧನೆಗಳ ಮೇರೆಗೆ ಹೇಳುವದಾದರೆ: If the number of temples is taken as an indicator, it is apparent that the wealth and the numbers of Shaivites was greater than those of any other faith in South Canara during the Vijayanagar period right until the empire's fall ...And for the period under question, only a few temples are heard of dedicated to vishnu, krishna..[೧೨] ನಾನೆಲ್ಲೊ ಓದಿದ್ದೆ.

ಈಗದರ ಬರಿ ನೆನಪಷ್ಟೇ ನನ್ನಲ್ಲಿದೆ. ಆ ಪುಸ್ತಕದ ಹೆಸರು, ಅದರ ಟಿಪ್ಪಣಿಗಳನ್ನು ಕಳೆದು ಕೊಂಡಿದ್ದೇನೆ. ಅದರ ಸಾರಾಂಶವನ್ನು ಹಿಂದೊಂದು ಪ್ರಸಂಗದಲ್ಲಿ ಹೀಗೆಂದು ಹೇಳಿಕೊಂಡಿದ್ದೆ: "ಪಶ್ಚಿಮಾಭಿಮುಖವಾಗಿದ್ದ ಒಂದು ಅಮುಖ್ಯ ದೇವಾಲಯಕ್ಕೆ ಮುಂದೊಂದು ದಿನ ಪ್ರಾಮುಖ್ಯತೆ ಒದಗಿ ಬಂದಾಗ ದೇವಾಲಯದ ಆಧಿಪತ್ಯ ನಡೆಸುತ್ತಿದ್ದವರಿಗೆ ಅದರ ಪ್ರಾಮುಖ್ಯಕ್ಕೆ ತಕ್ಕಂತೆ ಪೂರ್ವಾಭಿಮುಖವಾಗಿ ಮುಖ್ಯದ್ವಾರವನ್ನು ರಚಿಸಿ ದೇವಾಲಯವನ್ನು ಪುನರ್‍ರಚಿಸಬೇಕಾಗಿತ್ತು. ದೇವಾಲಯವೇನೋ ಸಿದ್ಧವಾಯಿತು. ಆದರೆ ದೇವ ಮೂರ್ತಿ ಪೂರ್ವಕ್ಕೆ ಮುಖ ತಿರುಗಿಸಿ ನಿಲ್ಲಲಾರದು. ಮಾಡಬೇಕೇನು? ಮೂರ್ತಿಯ ಮುಖದರ್ಶನಕ್ಕಾಗಿ ಕಿಂಡಿಯನ್ನು ಬಿಡಲಾಯಿತು".[೧೩] ಈ ಕಿಂಡಿ ಹೇಗಾಯಿತೆಂಬದನ್ನು ಊಹಿಸಿಕೊಳ್ಳಲು ಸಹಾಯಕವಾಗುವಂತೆ ಒಂದು ಶಾಸನವೂ ಉಡುಪಿಯ ಇಂದಿನ ಶ್ರೀಕೃಷ್ಣ ದೇವಾಲಯದಲ್ಲಿ ಇದೆಯೆಂದು ಡಾ. ಕೆ.ವಿ. ರಮೇಶ್ ಹೇಳುತ್ತಾರೆ (South Indian Inscriptions ಸಂಪುಟ೭, ಶಾಸನಸಂಖ್ಯೆ೨೯೬). ಈ ಶಾಸನವು ಕ್ರಿ.ಶ ೧೪೩೬ ಮಾರ್ಚ್ ೨೪ರದ್ದು. "ವಿಜಯನಗರದ ಸಾಮ್ರಾಟನಾಗಿದ್ದ ಎರಡನೆಯ ದೇವರಾಯನ ಆಧಿಪತ್ಯದಡಿಯಲ್ಲಿ ಆಡಳಿತವನ್ನು ನಿರ್ವಹಿಸುತ್ತಿದ್ದ ರಾಜ ಪ್ರತಿನಿಧಿ ಸಿಂಗಣ ದಣ್ಣಾಯಕನ ಮೇಲ್ವಿಚಾರಣೆಯಲ್ಲಿ ಬಾರಕೂರು ಪ್ರಾಂತವನ್ನಾಳುತ್ತಿದ್ದ ಅಣ್ಣಪ್ಪ ಒಡೆಯನು ಶಾ.ಶಕವರ್ಷದ ೧೩೫೭ ಆನಂದ ಸಂವತ್ಸರದಲ್ಲಿ ಶಿವಳ್ಳಿ ಗ್ರಾಮವನ್ನು (ಅಂದರೆ ಉಡುಪಿ ಹಾಗು ಸುತ್ತಲಿನ ಪ್ರದೇಶ) ವಶಪಡಿಸಿಕೊಂಡು ಅದನ್ನು ಹಾಳುಗೈದನು. ಆ ಹಾವಳಿಯ ಸನ್ನಿವೇಶದಲ್ಲಿ ಶ್ರೀಕೃಷ್ಣ ದೇವಾಲಯದ ಉಸ್ತುವಾರಿ ಕೆಟ್ಟುಹೋಗಿ ದೇವತಾ ಮೂರ್ತಿಯನ್ನು ಕಿತ್ತೊಗೆಯಲಾಗಿತ್ತು. ಆ ನಂತರ ಹತ್ತುಕೇರಿಯ ಕಟ್ಟಲೆಯ ಹಿರಿಯರು ದೂರಿಕೊಂಡಿದ್ದರ ಪರಿಣಾಮವಾಗಿ ದೇವರಾಯ ಭೂಪತಿಯ ಆಜ್ಞಾನುಸಾರ ಪರಿಹಾರವನ್ನು ಒದಗಿಸಿಕೊಟ್ಟು ಸಿಂಗರಸನೆಂಬ ರಾಜ್ಯಾಧಿಕಾರಿಯು ದೇವಸ್ಥಾನಕ್ಕೆ ದತ್ತಿ ಉಂಬಳಿಗಳನ್ನು ಬಿಟ್ಟುಕೊಟ್ಟನು".[೧೪] ಈ ಘಟನೆಗೂ ಕನಕದಾಸ ವ್ಯಾಸರಾಯ ಸ್ವಾಮಿಗಳಿಗೂ ಏನಿಲ್ಲೆಂದರು ಒಂದು ಶತಮಾನದ ಅಂತರವಿದೆ. ಅನುಕೂಲಕ್ಕೆ ತಕ್ಕಂತೆ ಒಮ್ಮೆ ನವಗ್ರಹ ಕಿಂಡಿಯೆಂದು ಮಾಧ್ವಮಡಿವಂತರೆದರು, ಮತ್ತೊಮ್ಮೆ ಸಾಹಿತ್ಯ ಸಂದರ್ಭದಲ್ಲಿ ಕನಕನ ಕಿಂಡಿಯೆಂದು ಕರೆಯುವ ಈ ಕಿಂಡಿ ಹುಟ್ಟಿಕೊಂಡದ್ದೇ ಕ್ರಿ.ಶ ೧೪೩೬ರ ಅಣ್ಣಪ್ಪ ಒಡೆಯನ ದಾಳಿಯ ನಂತರದ ದೇವಾಲಯದ ಪುನರ್‍ರಚನೆಯ ಕಾಲಕ್ಕೆ.

ಹೀಗೆ ತಿರುಮಲೆಯ ತಾತಾಚಾರ್ಯರಿಂದ ಶ್ರಿವೈಷ್ಣವದ ದೀಕ್ಷೆ ಪಡೆದು ಅದರ ಅಹೋಬಲ ಪಂಥದ ದಾಸರಾಗಿ "ಶ್ರೀ ಮದ್ಗುರುರಾಯದುರಿತ ವಿಜೇಯ। ದುಷ್ಕಾಮ ವಿಚ್ಛೇದನಾತ್ಮದ। ತಾಮಸ ಗುಣನಾಶ। ಸಾತ್ವಿಕೋಲ್ಲಾಸ। ಶ್ರೀರಾಮಾನುಜ ಮುನಿ ಶರಣು॥ ಅರ್ಕನೊಳನೊಳ ನಾಟವೆ ತಮಕೆ। ತಾರ್ಕ್ಷ್ಯನ ಕೂಡೆ ಕಾರ್ಕೋಟಕ ಮೇಳವಿಪುದೆ। ತರ್ಕಕೆ ರಾಮಾನುಜರೊಳು ವಾದಿಸಂ। ಪರ್ಕ ನಿಲ್ಬುದೆ ನಿಲ್ಲಲರಿಯದು॥ ಈ ರೀತಿ ಪೆಂಪುವಡೆದ ಸದ್ಗುರುಕರ। ವಾರಿ ಜೋದ್ಭವ ಶಿಷ್ಯಜನರ। ಪೇರಿಸಿ ಚತುರ್ವಿಧ ಫಲವೀವ। ತಾತಾಚಾರಿಯಡಿಗೆ ವಂದಿಸುವೆ॥"[೧೫] ಹೀಗೆ ಭಜಿಸುವ ಕನಕದಾಸರು ಮಾಧ್ವಯತಿ ವ್ಯಾಸರಾಯ ಸ್ವಾಮಿಗಳ ಸೇವೆಗೈದು ಅವರ

ಕೃಪೆ ಪಡೆದು ಜ್ಞಾನಿಗಳಾದರೆಂಬ ಮಾತಾಗಲಿ, ಕನಕರ ದಾಸಸಿದ್ಧಿಗೆ ವ್ಯಾಸಕೃಪೆಯೇ ಕಾರಣವೆಂಬ ಸಂಗತಿಯಾಗಲಿ ಮಾಧ್ವ ಸಮುದಾಯದಲ್ಲಿ ಪ್ರಾಚುರ್ಯ ಪಡೆದ ದಂತಕತೆಯಷ್ಟೇ. ಬ್ರಾಹ್ಮಣ ಜಗತ್ತಿಗೆಂದೇ ಸಂಸ್ಕೃತದಲ್ಲಿ ಸಮೃದ್ಧ ಪಂಥೀಯ ಸಾಹಿತ್ಯವನ್ನು ಸೃಷ್ಟಿಸಿ ಅದನ್ನೇ ಮೆದ್ದು, ಅದರದೇ ತೇಗು ಬಿಡುತ್ತಿರುವ ಮಾಧ್ವಸಂಪ್ರದಾಯದೊಂದಿಗೂ ಉಡುಪಿಯ ಶ್ರೀಕೃಷ್ಣನೊಂದಿಗೂ ಕನಕರಂಥ ಉದಾರ ಪಂಥೀಯ ಕವಿಗಳಿಗೆ ಯಾವ ಸಂಬಂಧವಿರಲೂ ಸಾಧ್ಯವಿಲ್ಲ. ಇಲ್ಲಿಯ ನನ್ನ ತೀರ್ಮಾನಗಳೇ ಅಂತಿಮವಾದವುಗಳೆಂದು ನಾನು ಭಾವಿಸಿರುವದಿಲ್ಲ. ಈ ವಿಷಯದಲ್ಲಿ ಸಂಶೋಧನೆ, ಅಧ್ಯಯನಗಳಿಗೆ ವಿಪುಲ ಅವಕಾಶಗಳಿವೆ.

## ಟಿಪ್ಪಣೆಗಳು

೧. ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ, ದಿನಪತ್ರಿಕೆಯ ದಿನಾಂಕ ೪-೧೨-೧೯೯೮ರ ಸಂಚಿಕೆಯ ಜನಮನ ವಿಭಾಗ

೨. ಅದೇ ಪತ್ರಿಕೆಯ ೬-೧೨-೧೯೯೮ರ ಸಂಚಿಕೆಯ ಪುಟ ೪

೩. ಸಂಕ್ರಮಣ ಮಾಸಪತ್ರಿಕೆಯ ೧೯೯೮ರ ಜೂನ್-ಜುಲೈ ಸಂಯುಕ್ತ ಸಂಚಿಕೆ ಪುಟಗಳು ೩೩-೪೧

೪. ಅದೇ ಪತ್ರಿಕೆ-ಸಂಚಿಕೆ-ಪುಟ ೪೦

೫. ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ ೬-೧೨-೧೯೯೮ರ ಸಂಚಿಕೆ ಪುಟ ೪

೬. ಅದೇ ಪತ್ರಿಕೆ, ಅದೇ ಸಂಚಿಕೆ, ಅದೇ ಪುಟ

೭. ತೆಲುಗು ಪುಲ್ಲಕವಿ(ಕ್ರಿ.ಶ.೧೮೦೦) ವಿರಚಿತ-ಶ್ರೀ ಶೈಲಪಂಡಿತಾರಾಧ್ಯ ಚರಿತ್ರಮು-ಆಶ್ವಾಸನ ೨ ಪದ್ಯ ೯೭

೮. ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ-ಕಾಂಡ ೫ ಸಂಧಿ ೧೦ ಪದ್ಯ ೫೨

೯. ಯುಗಯಾತ್ರೀ ಭಾರತೀಯ ಸಂಸ್ಕೃತಿ-ನಾಲ್ಕನೆಯ ಸಂಪುಟ(೧೯೮೮) ಪ್ರ: ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ. ಪುಟ ೮೪

೧೦. ಅರುಣೋದಯ, ಬೆಳಗಾವಿ-ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವ ಸಂಚಿಕೆ-೧೯೩೬ ಪುಟ ೧೧೯

೧೧. ಅದೇ ಪುಟ ೧೨೧

೧೨. A History of south Kanara by Dr. K.V. Ramesh(from earliest times to the fall of Vijayanagara) page 300 pub: Karnataka University, Dharwad (1970)

೧೩. ಸಂಕ್ರಮಣ-೧೯೮೮ ಜೂನ್-ಜುಲೈ ಸಂಯುಕ್ತ ಸಂಚಿಕೆ-ಪುಟ ೪೦

೧೪. A History of South Kanara (from earliest times to the fall of Vijayanagara, pub: Karnataka University, Dharwad (1970) page.172

೧೫. ಕನಕದಾಸರ ಮೋಹನ ತರಂಗಿಣಿ. ಸಂ: ಡಾ. ಆರ್. ಸಿ. ಹಿರೇಮಠ ಪ್ರ: ಕ.ವಿ.ವಿ. ಧಾರವಾಡ: ಕನ್ನಡ ಅಧ್ಯಯನ ಪೀಠ. ಪೀಠಿಕಾಸಂಧಿ ಪದ್ಯ ೨ ಮತ್ತು ೩

## ಎಂಎನ್ ಶ್ರೀನಿವಾಸ್: ಕನಸುಗಳಿಲ್ಲದ ಸಮಾಜಶಾಸ್ತ್ರಜ್ಞ?

● ಸಿ.ಜಿ. ಲಕ್ಷ್ಮೀಪತಿ

ಸಮಾಜಶಾಸ್ತ್ರದ ಉಗಮ ಅನೇಕ ಸಾಮಾಜಿಕ ಅಗತ್ಯಗಳೊಂದಿಗೆ ತಳಕು ಹಾಕಿಕೊಂಡಿದೆ. ೧೮-೧೯ನೇ ಶತಮಾನಗಳಲ್ಲಿ ಯೂರೋಪ್ ಖಂಡವು ಎದುರಿಸಿದ ರಾಜಕೀಯ, ಸಾಮಾಜಿಕ, ಆರ್ಥಿಕ ತಲ್ಲಣಗಳಿಗೆ ಪ್ರತಿಕ್ರಿಯೆ ಎಂಬಂತೆ ಸಮಾಜಶಾಸ್ತ್ರವು ಅಸ್ತಿತ್ವಕ್ಕೆ ಬಂದಿತು. ಊಳಿಗಮಾನ್ಯ ಸಮಾಜವು ನಾಶದ ಅಂಚಿನಲ್ಲಿತ್ತು. ಬಂಡವಾಳಶಾಹಿ ಸಮಾಜವು ಮೊಳಕೆಯೊಡೆಯತೊಡಗಿದಂತೆ, ಆಗಿನ ಸಮಾಜವು ಈ ಹೊಸ ಬದಲಾವಣೆ, ಅದರಿಂದ ಉದ್ಭವಿಸಿದ ವೈರುಧ್ಯಗಳನ್ನು ಅರ್ಥೈಸಿಕೊಳ್ಳಲು ಹೊಸ ಬೌದ್ಧಿಕ ಪ್ರಯೋಗಗಳನ್ನು ಆರಂಭಿಸಿತು. ಅದರ ಫಲವಾಗಿ ಈ ವಿಜ್ಞಾನವು ಜನಿಸಿತು.

ಕೈಗಾರಿಕಾ ಕ್ರಾಂತಿಯು ಸುಂಟರಗಾಳಿಯಂತೆ ಬೀಸತೊಡಗಿದ ಬಂಡವಾಳವಾದದ ಅಲೆ ಗ್ರಾಮೀಣ ರೈತಾಪಿಯನ್ನು, ಕುಶಲಕರ್ಮಿಗಳನ್ನು ನಾಶಮಾಡಿತು ಇಲ್ಲವೇ ಒಕ್ಕಲೆಬ್ಬಿಸಿತು. ಫ್ರಾನ್ಸಿನಲ್ಲಿ ನೇಯ್ಗೆಯವರು, ಇಂಗ್ಲೆಂಡಿನಲ್ಲಿ ರೈತರು ಚಳುವಳಿ ಪ್ರಾರಂಭಿಸಿದರು. ಫ್ರಾನ್ಸಿನ ಕ್ರಾಂತಿಯ ಬಿಸಿ, ಹೊಸ ಸಾಮಾಜಿಕ ವರ್ಗಗಳು ಅಸ್ತಿತ್ವಕ್ಕೆ ಬರುತ್ತಿರುವ ಸಂಕೇತವಾಗಿತ್ತು. ಸಮಕಾಲೀನ ಸಮಾಜದ ಆಗು ಹೋಗಗಳ ವಿವರಣೆಗೆ ಆಗ ಪ್ರಚಲಿತದಲ್ಲಿದ್ದ ಅಮೂರ್ತವಾದ ಆಧ್ಯಾತ್ಮಿಕ ಜ್ಞಾನವು ಸಾಲದೇ ಹೋಯಿತು. ವಿವಿಧ ರೂಪದ ಸಾಮಾಜಿಕ ಚಿಂತನೆಗಳು ಕಂಡುಬಂದವು. ವಾಸ್ತವಿಕವಾದ ವೈಜ್ಞಾನಿಕ ವಿವರಣೆಯನ್ನು ನೀಡಲು ಪ್ರಯತ್ನಿಸಿದವು. ಆಗ ಪ್ರಮುಖವಾಗಿ ಕಂಡುಬಂದ ಪಂಥಗಳು ನಾಲ್ಕು. ಸಾಂಪ್ರದಾಯಿಕ, ಉದಾರವಾದಿ, ಕಾಲ್ಪನಿಕ ಸಮಾಜವಾದಗಳು ಮತ್ತು ಮಾರ್ಕ್ಸ್‌ವಾದ.

ಈ ಪ್ರತಿಯೊಂದು ಪಂಥವೂ ತಮ್ಮ ವರ್ಗದ, ಸಮೂಹದ ವೈಯಕ್ತಿಕ ಹಿತಾಸಕ್ತಿಗಳಿಗೆ ಅನುಗುಣವಾಗಿ ಸಮಾಜದ ಇತಿಹಾಸ, ವರ್ತಮಾನ, ಮತ್ತು ಭವಿಷ್ಯವನ್ನು ವ್ಯಾಖ್ಯಾನಿಸ ತೊಡಗಿದವು. ಯೂರೋಪಿನ ವಸಾಹತು ರಾಷ್ಟ್ರಗಳಲ್ಲಿನ ಹೊಸದಾಗಿ ತಲೆಯೆತ್ತಿದ ಸಾಮಾಜಿಕ ಚಿಂತಕರು, ಸಮಾಜ ವಿಜ್ಞಾನಿಗಳು ಈ ಪಂಥಗಳ ವಿವಿಧ ಮಾದರಿಗಳ ಪ್ರಭಾವಕ್ಕೆ ಎಂದೂ

ಬಿಡಿಸಿಕೊಳ್ಳಲಾಗದ ರೀತಿಯಲ್ಲಿ ಒಳಗಾಗಿಬಿಟ್ಟರು. ಇದಕ್ಕೆ ಭಾರತೀಯ ಸಮಾಜಶಾಸ್ತ್ರಜ್ಞರು ಹೊರತಾಗಿರಲಿಲ್ಲ.

ಈ ಪಂಥಗಳು ಸಂರಚನಾತ್ಮಕ ಕಾರ್ಯಾತ್ಮಕ ವಿಧಾನ, ಘರ್ಷಣಾತ್ಮಕ ದೃಷ್ಟಿಕೋನ, ಫಿನಮಿನಾಲಜಿ, ಎಥ್ನೊಮೆಥಡಾಲಜಿ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತಿದ್ದರೂ ಕೂಡ ಮೇಲಿನ ನಾಲ್ಕು ಪಂಥಗಳ ವಿವಿಧ ಶಾಖೆಗಳಷ್ಟೆ. ಭಾರತದ ಬಹುತೇಕ ಸಮಾಜಶಾಸ್ತ್ರಜ್ಞರು ಸಾಂಪ್ರದಾಯಿಕ ಮತ್ತು ಉದಾರವಾದಿ ಪಂಥಕ್ಕೆ ಸೇರಿದವರು. ಅದರಲ್ಲಿ ಎಂ.ಎನ್. ಶ್ರೀನಿವಾಸ್ ಕೂಡ ಒಬ್ಬರು.

ಎಂ.ಎನ್. ಶ್ರೀನಿವಾಸರು ಭಾರತೀಯ ಸಮಾಜಶಾಸ್ತ್ರಜ್ಞರ ಸಾಲಿನಲ್ಲಿ ಪ್ರಮುಖ ಸ್ಥಾನಗಳಿಸಿದ್ದಾರೆ. ಜಿ.ಎಸ್. ಘುರ್ರೆ, ಕೆ.ಎಂ. ಕಪಾಡಿಯ, ಅರ್.ಕೆ. ಮುಖರ್ಜಿ, ಡಿ.ಪಿ. ಮುಖರ್ಜಿ, ಇರಾವತಿ ಕರ್ವೆಯವರು ಭಾರತೀಯ ಸಮಾಜದ ಅಧ್ಯಯನಕ್ಕೆ ಆಕರ ಗ್ರಂಥ ಗಳನ್ನಾಗಿ ವೇದ ಉಪನಿಷತ್ತು, ರಾಮಾಯಣ, ಮಹಾಭಾರತಗಳ ಅಭ್ಯಾಸದಲ್ಲಿ ತೊಡಗಿದ್ದರು. ಅವುಗಳನ್ನಾಧರಿಸಿ ಭಾರತೀಯ ಸಮಾಜದ ಜಾತಿ, ಕುಟುಂಬ, ಗ್ರಾಮಗಳನ್ನು ವಿಶ್ಲೇಷಿಸು ತ್ತಿದ್ದರು. ಅವರಿಗೆ ಕ್ಷೇತ್ರಾಧ್ಯಯನವು ಸಂಶೋಧನಾ ಕಾರ್ಯದ ಒಂದು ಅಂಗವಾಗಿತ್ತೇ ವಿನಃ ಅದು ಸೈದ್ಧಾಂತಿಕ ಪರಿಕಲ್ಪನೆಗಳನ್ನು ರೂಪಿಸುವ ಮತ್ತು ಅದರ ಆಧಾರದ ಮೇಲೆಯೇ ಸಾಮಾಜಿಕ ವಿದ್ಯಮಾನಗಳಿಗೆ ವೈಜ್ಞಾನಿಕ ವಿವರಣೆಯನ್ನು ನೀಡುವ ಮಟ್ಟಕ್ಕೆ ಬೆಳೆದಿರಲಿಲ್ಲ. ಅಂತಹ ಸಂದರ್ಭದಲ್ಲಿ ಶ್ರೀನಿವಾಸರು ತಮ್ಮ ಕ್ಷೇತ್ರಾಧ್ಯಯನ ಕಾರ್ಯಗಳಿಂದ ಭಾರತೀಯ ಸಮಾಜಶಾಸ್ತ್ರಕ್ಕೆ ಭದ್ರವಾದ ಅಡಿಪಾಯ ಹಾಕಿದರು. ಕಠಿಣವಾದ ಸಮಾಜ ಶಾಸ್ತ್ರೀಯ ಪರಿಭಾಷೆಯಿಂದ ಸಮಾಜಶಾಸ್ತ್ರವನ್ನು ಮುಕ್ತಗೊಳಿಸಿ ಅತ್ಯಂತ ಸರಳ ಶೈಲಿಯಲ್ಲಿ ಕೃತಿಗಳನ್ನು ರಚಿಸಿದರು. ಅವರ ಸಮಾಜಶಾಸ್ತ್ರೀಯ ಕೃತಿಗಳಲ್ಲಿ ಕಂಡುಬರುವ ಸರಳ ಇಂಗ್ಲೀಷ್ ಗದ್ಯ, ಭಾಷೆಯ ಮೇಲಿನ ಅಪೂರ್ವ ಹಿಡಿತ, ಸಾಮಾನ್ಯ ಓದುಗನಿಗೂ ಅರ್ಥವಾಗುವ ಪದಗಳ ಬಳಕೆ ಸಮಾಜಶಾಸ್ತ್ರವನ್ನು ಜನಪ್ರಿಯಗೊಳಿಸಿದವು.

ಸಾಮಾನ್ಯವಾಗಿ ಸಮಾಜ ವಿಜ್ಞಾನಗಳಲ್ಲಿ, ಅದರಲ್ಲೂ ಮಾನವಶಾಸ್ತ್ರ ಮತ್ತು ಸಮಾಜ ಶಾಸ್ತ್ರದಲ್ಲಿ ಸಾಹಿತ್ಯಕ ಶೈಲಿಯ ಲವಲವಿಕೆಯ ಸ್ವರೂಪದ ಓದುಗನನ್ನು ಮೊದಲಿಂದಲೂ ಕೊನೆಯತನಕ ಹಿಡಿದಿಡುವ ಬರಹದ ಶೈಲಿಯನ್ನು ರೂಪಿಸಿಕೊಂಡವರು ಸಿಗುವುದು ಬಹಳ ಅಪರೂಪ. ಆದರೆ ಎಂ.ಎನ್. ಶ್ರೀನಿವಾಸರ 'ನೆನಪಿಸಿಕೊಂಡ ಹಳ್ಳಿ' (Remembered village) ಈ ಮಾತಿಗೆ ಅಪವಾದ. ಆದುದರಿಂದಲೇ ರಾಜ್ಯಶಾಸ್ತ್ರಜ್ಞರು ಸಂದರ್ಭಕ್ಕನುಗುಣ ವಾಗಿ ಶ್ರೀನಿವಾಸರ ಸಂಸ್ಕೃತಾನುಕರಣ, ಪಾಶ್ಚಾತ್ಯಾನುಕರಣ, ಪ್ರಬಲಜಾತಿ ವೋಟು ಬ್ಯಾಂಕು ಮೊದಲಾದ ಪರಿಕಲ್ಪನೆಗಳನ್ನು ಬಳಸುತ್ತಾರೆ. ಈ ಎಲ್ಲಾ ಕಾರಣಗಳಿಂದ ಎಂ.ಎನ್. ಶ್ರೀನಿವಾಸರು ಇತರ ಭಾರತೀಯ ಸಮಾಜಶಾಸ್ತ್ರಜ್ಞರಿಗಿಂತ ಹೆಚ್ಚು ಜನಪ್ರಿಯರಾಗಿದ್ದಾರೆ. ಸಮಾಜಶಾಸ್ತ್ರದ ವಿದ್ಯಾರ್ಥಿಗಳು ಮತ್ತು ಸಂಶೋಧಕರಿಂದ ಅವರ ಕೃತಿಗಳು ಗಾಢ ಅಧ್ಯಯನವನ್ನು ಬೇಡುತ್ತವೆ.

ಎಂ.ಎನ್. ಶ್ರೀನಿವಾಸರು ಅಂತರರಾಷ್ಟ್ರೀಯ ಮಟ್ಟದ ಖ್ಯಾತಿ ಗಳಿಸಿದ್ದರೂ ಸಹ ಅವರನ್ನು ಕರ್ನಾಟಕದ ಸಮಾಜಶಾಸ್ತ್ರಜ್ಞರು ಎಂದು ಕರೆಯುವುದು ಅವರ ವ್ಯಕ್ತಿತ್ವವನ್ನು ಸೀಮಿತಗೊಳಿಸಿ ದಂತಾಗುವುದಿಲ್ಲ. ಬದಲಾಗಿ ಅವರ ಪಾಂಡಿತ್ಯದ ಮೂಲಸೆಲೆಯನ್ನು ಗುರುತಿಸಿದಂತಾಗುತ್ತದೆ. ಎಂ.ಎನ್. ಶ್ರೀನಿವಾಸರು ಆಂಧ್ರ, ಉತ್ತರಭಾರತ, ಇಂಗ್ಲೆಂಡ್ ಮೊದಲಾದ ಕಡೆಯಲೆಲ್ಲಾ ಸಂಶೋಧನೆ ಮಾಡಿದರೂ ಸಹ ಅವರ ಪ್ರಮುಖ ಸೈದ್ಧಾಂತಿಕ ಪರಿಕಲ್ಪನೆಗಳು ಕರ್ನಾಟಕದಲ್ಲಿನ ಹಳ್ಳಿಗಳನ್ನು ಅಧ್ಯಯನ ಮಾಡಿದಾಗ ರೂಪುಗೊಂಡವು.

೧೯೧೬ರಲ್ಲಿ ಮೈಸೂರಿನಲ್ಲಿ ಜನಿಸಿದ ಶ್ರೀನಿವಾಸರ ಬಾಲ್ಯ, ಬೆಳವಣಿಗೆ ಮತ್ತು ಶಿಕ್ಷಣವನ್ನು ತಿಳಿದುಕೊಳ್ಳುವುದು ಅತ್ಯವಶ್ಯಕ. ಅದನ್ನು ಗ್ರಹಿಸದೇ ಹೋದರೆ ಅವರ ಕೃತಿಗಳ ಆಶಯವನ್ನು ಗುರುತಿಸುವುದು ಕಷ್ಟವಾಗುತ್ತದೆ. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಎಂ.ಎನ್. ಶ್ರೀನಿವಾಸರು ತಂದೆ ತಾಯಿಗಳ ಮುದ್ದಿನ ಆರೈಕೆಯಲ್ಲಿ ಬೆಳೆದವರು. ಬ್ರಾಹ್ಮಣ ಕುಟುಂಬದ ಸಾಂಪ್ರದಾಯಿಕ ಸಾಮಾಜೀಕರಣ, ಸಾಮಾಜಿಕ ಸಂಪರ್ಕದ ಇತಿಮಿತಿಗಳಿಗೆ ಅನುಗುಣವಾಗಿ Protective Child ಆಗಿದ್ದರು. ಅವರ ಮನೆಯಿಂದ ಕೆಲವೇ ದೂರದಲ್ಲಿದ್ದ ಕುರುಬರ ಜೀವನ ಶೈಲಿಯನ್ನು ನೋಡಿ ಆಶ್ಚರ್ಯಪಡುತ್ತಿದ್ದರೆಂದರೆ ಎಂ.ಎನ್.ಶ್ರೀನಿವಾಸರು ಎಷ್ಟರ ಮಟ್ಟಿಗೆ ತಮ್ಮ ಬಾಲ್ಯದಲ್ಲಿ ಸಾಮಾಜಿಕ ಜೀವನಕ್ಕೆ ತೆರೆದುಕೊಂಡಿದ್ದರೆಂದು ತಿಳಿಯುತ್ತದೆ.

ಅವರ ಶಿಕ್ಷಣದ ಕಾಲದಲ್ಲಿ ಮೈಸೂರು ಅರಸರ ಆಡಳಿತದಲ್ಲಿತ್ತು. ಊಳಿಗಮಾನ್ಯ ಮೌಲ್ಯಗಳು ಪ್ರಧಾನವಾಗಿದ್ದವು. ಸ್ವಾತಂತ್ರ್ಯ ಹೋರಾಟ, ಹಿಂದುಳಿದ ಜಾತಿಗಳ ಚಳುವಳಿ, ಗಾಂಧಿಯುಗ, ಅಂಬೇಡ್ಕರರ ವಿಚಾರಧಾರೆ ಎಂ.ಎನ್. ಶ್ರೀನಿವಾಸರ ಗಮನ ಸೆಳೆದಿದ್ದವು. ವಿಶ್ವ ಹಿಂದು ಪರಿಷತ್, ರಾಷ್ಟ್ರೀಯ ಸ್ವಯಂ ಸೇವಕ ಸಂಘಗಳ ವಿಚಾರ ಪ್ರಣಾಲಿಯ ಪ್ರಭಾವವು ಅವರ ಮೇಲೆ ಸಾಕಷ್ಟಿತ್ತು. ವಿಚಾರಗಳಿಗೂ ಈ ಎಲ್ಲಾ ಘಟನೆಗಳಿಗೂ ಎಂ.ಎನ್. ಶ್ರೀನಿವಾಸರು ಪ್ರತಿಕ್ರಿಯಿಸಿದ್ದಾರೆ.

೧೯೯೯ರ ಡಿಸೆಂಬರ್‌ನಲ್ಲಿ ಮರಣ ಹೊಂದಿದ ಎಂ.ಎನ್. ಶ್ರೀನಿವಾಸರು ೫೦ವರ್ಷಗಳ ಕಾಲ ಭಾರತೀಯ ಸಮಾಜದ ಹಲವು ಮಜಲುಗಳನ್ನು, ಘಟನಾವಳಿಗಳನ್ನು, ಚಳುವಳಿಗಳನ್ನು ಕಂಡಿದ್ದಾರೆ. ವಿದೇಶಗಳಲ್ಲಿ, ಅಧ್ಯಯನ ಮಾಡಿ ವಿವಿಧ ಸಮಾಜಗಳ ವ್ಯಾಪಕ ಅನುಭವ ಗಳಿಸಿದ್ದಾರೆ. ಅವರ ಮ್ಯಾರೇಜ್ ಅಂಡ್ ಫ್ಯಾಮಿಲಿ, ರಿಲಿಜನ್ ಅಂಡ್ ಸೊಸೈಟಿ ಆಮಾಂಗ್ ದಿ ಕೂರ್ಗ್ಸ್ ಆಫ್ ಸೌತ್ ಇಂಡಿಯಾ, ಕ್ಯಾಸ್ಟ್ ಇನ್ ಮಾಡರ್ನ್ ಇಂಡಿಯಾ, ಸೋಷಿಯಲ್ ಚೇಂಜ್ ಇನ್ ಮಾಡರ್ನ್ ಇಂಡಿಯಾ, ರಿಮೆಂಬರ್ಡ್ ವಿಲೇಜ್ ಹೀಗೆ ಎಲ್ಲಾ ಕೃತಿ ಗಳಲ್ಲಿಯೂ ಅವರ ಬಾಲ್ಯ, ಶಿಕ್ಷಣ, ಬದುಕಿದ್ದ ಸಂದರ್ಭ ಎಲ್ಲವೂ ಪ್ರತಿಬಿಂಬಿತವಾಗಿದೆ.

ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ರ್‍ಯಾಡ್‌ಕ್ಲಿಫ್ ಬ್ರೌನ್‌ರ ಪ್ರಭಾವಕ್ಕೆ ಒಳಗಾದರು. ಮೊದಲ ಪೀಳಿಗೆಯ ಬಹುತೇಕ ಸಮಾಜಶಾಸ್ತ್ರಜ್ಞರಂತೆ ಎಂ.ಎನ್. ಶ್ರೀನಿವಾಸರು ಇಂಗ್ಲೀಷಿನಲ್ಲಿಯೇ ತಮ್ಮ ಕೃತಿಗಳನ್ನು ರಚಿಸಿದರು. ಅವರಿಗೆ ಮಾರ್ಗದರ್ಶನ ನೀಡಿದ,

ಸಂಪರ್ಕಕ್ಕೆ ಬಂದ ಬ್ರಿಟಿಷ್ ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರಿಗೆ ಭಾರತೀಯ ಸಮಾಜದ ವಿವರಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ತಿಳಿಸಲು ಅಪಾರ ಪ್ರಯತ್ನಪಟ್ಟರು. ಇದರಲ್ಲಿ ಅವರು ಯಶಸ್ವಿಯಾದರು ಕೂಡ. ಅವರ ಈ ಪ್ರಯತ್ನ ಇಲ್ಲಿಯ ಜನ ಜೀವನವನ್ನು ಮತ್ತೊಬ್ಬರಿಗೆ ಭಾಷಾಂತರ ಮಾಡುವ ದುಭಾಷಿಯಂತಿತ್ತು. ಹಿಂದೂ ಧರ್ಮದ ವೈದಿಕ ಸಂಪ್ರದಾಯದಲ್ಲಿ ಭಿನ್ನಾಭಿಪ್ರಾಯವಿಲ್ಲದ ನಂಬಿಕೆಯನ್ನು ಹೊಂದಿದ್ದ ಎಂ.ಎನ್. ಶ್ರೀನಿವಾಸರು ತಮ್ಮ ಸೈದ್ಧಾಂತಿಕ ಪರಿಕಲ್ಪನೆಗಳಲ್ಲಿ ಅದನ್ನು ಸಾಕಷ್ಟು ಬಲಪಡಿಸಿದರು. ಈ ಎಲ್ಲಾ ಹಿನ್ನೆಲೆಯಲ್ಲಿ ಎಂ.ಎನ್.ಶ್ರೀನಿವಾಸರನ್ನು ಅಧ್ಯಯನ ಮಾಡಿದಾಗ ಮಾತ್ರ ಅವರನ್ನು ಅವರ ಕೃತಿಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಕೇವಲ ಅವರ ಕೃತಿಗಳನ್ನು ಓದುವುದರಿಂದ ಹೊರಡುವ ಅರ್ಥ ಬಹಳ ಸೀಮಿತವೂ, ಏಕಪಕ್ಷೀಯವೂ ಆಗಿಬಿಡುವ ಅಪಾಯವಿದೆ.

ಶ್ರೀನಿವಾಸರ ಅಧ್ಯಯನದ ವ್ಯಾಪ್ತಿ ವಿಶಾಲವಾದುದು. ಅದು ಸುಮಾರು ೫೦ ವರ್ಷಗಳ ಕಾಲದ ದೀರ್ಘ ಸಮಾಜಶಾಸ್ತ್ರೀಯ ಪಯಣ. ಭಾರತೀಯ ವಿವಾಹ, ಕುಟುಂಬ, ಗ್ರಾಮ, ಹಿಂದೂ ಧರ್ಮ, ಬುಡಕಟ್ಟು ಜಾತಿ ಹೀಗೆ ಯಾವುದನ್ನೂ ಬಿಡದೆ ಎಲ್ಲವನ್ನೂ ಪರಿಶೀಲಿಸುತ್ತಾ, ವಿಶ್ಲೇಷಿಸುತ್ತಾ ಸಾಗಿದ ಸಾಮಾಜಿಕ-ಮಾನವಶಾಸ್ತ್ರಜ್ಞನ ದಣಿವರಿಯದ ಪ್ರಯತ್ನ. ಆದರೂ ಕೂಡ ಅವರ ಎಲ್ಲಾ ಅಧ್ಯಯನಗಳಲ್ಲಿ ಒಂದು ಏಕಸೂತ್ರ ಕಂಡುಬರುತ್ತದೆ. ಈ ಏಕಸೂತ್ರ ಅಥವಾ ಬೀಜರೂಪದಲ್ಲಿರುವ ಪರಿಕಲ್ಪನೆಯೆಂದರೆ ಬಾರತೀಯ ಸಾಮಾಜದ ಪರಿವರ್ತನೆ ಯನ್ನು ಕುರಿತದ್ದು. ಆದ್ದರಿಂದ ಸಮಾಜಶಾಸ್ತ್ರದ ವಿದ್ಯಾರ್ಥಿಯೊಬ್ಬ ಯಾವುದೇ ಹಿಂಜರಿಕೆ ಯಿಲ್ಲದೆ ಸಾಮಾಜಿಕ ಪರಿವರ್ತನೆಯನ್ನು ಕೇಂದ್ರ ಬಿಂದುವನ್ನಾಗಿಟ್ಟುಕೊಂಡು ಎಂ.ಎನ್. ಶ್ರೀನಿವಾಸರ ಕೃತಿಗಳನ್ನು ಪ್ರವೇಶಿಸಬಹುದು.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಅವರಿಗೆ ಹೆಸರನ್ನು ತಂದುಕೊಟ್ಟ ಸಂಸ್ಕೃತಾನುಕರಣೆ, ಪಾಶ್ಚಾತ್ಯಾನುಕರಣೆ, ಜಾತ್ಯತೀಕರಣ (Sanskritization, Westernization and Secularization) ಮತ್ತು ಗ್ರಾಮೀಣ ಐಕ್ಯತೆ ಪರಿಕಲ್ಪನೆಗಳನ್ನು ಚರ್ಚಿಸುವುದರ ಮೂಲಕ ಸಮಾಜಶಾಸ್ತ್ರಕ್ಕೆ ತನ್ಮೂಲಕ ಭಾರತೀಯ ಸಮಾಜಕ್ಕೆ ಶ್ರೀನಿವಾಸರು ನೀಡಿರುವ ಕಾಣ್ಕೆಯನ್ನು ಗ್ರಹಿಸಬಹುದು.

ಶ್ರೀನಿವಾಸರನ್ನು ಬಹಳ ಅಕೆಡೆಮಿಕ್ ಆಗಿ, ಸಮಾಜಶಾಸ್ತ್ರೀಯ ಪರಿಭಾಷೆಯಲ್ಲಿ ಕೂದಲು ಸೀಳಿ ನೋಡುವ ಕೆಲಸವನ್ನು ಈಗಾಗಲೇ ಅನೇಕ ಸಮಾಜಶಾಸ್ತ್ರಜ್ಞರು ಮಾಡಿದ್ದಾರೆ. ನನ್ನ ದೃಷ್ಟಿಯಲ್ಲಿ ಅವರನ್ನು ಈ ರೀತಿ ಅಧ್ಯಯನ ಮಾಡುವ ಬದಲು ನಮ್ಮ ಕರ್ನಾಟಕದಲ್ಲಿ ಆಗಿಹೋದ ಸಾಮಾಜಿಕ ಚಳುವಳಿಗಳು, ವಚನ ಸಾಹಿತ್ಯ, ಇತ್ತೀಚಿನ ಸಾಹಿತ್ಯಕ ಪರಂಪರೆಯ ಜೊತೆ ಇಟ್ಟು ಅಭ್ಯಾಸ ಮಾಡಿದರೆ ಶ್ರೀನಿವಾಸರ ಪರಿಕಲ್ಪನೆಗಳ ಬಗೆಗೆ ಮತ್ತಷ್ಟು ಒಳನೋಟಗಳನ್ನು ಬೀರಬಹುದಲ್ಲದೆ ವಸ್ತುನಿಷ್ಠ ವಿಮರ್ಶೆಯನ್ನು ಮಾಡಬಹುದು.

ಸಾಮಾಜಿಕ ಬದಲಾವಣೆ ಎಂಬುದು ವಿವಿಧ ಸಂದರ್ಭಗಳಲ್ಲಿ, ವಿವಿಧ ಪ್ರದೇಶಗಳಲ್ಲಿ, ವಿವಿಧ ವ್ಯಕ್ತಿಗಳ ಕೈಯಲ್ಲಿ ತನ್ನದೇ ಅರ್ಥವನ್ನು ಪಡೆದುಕೊಳ್ಳುತ್ತದೆ. ಬದಲಾವಣೆಯ ವೇಗವೂ ಕಾಲದಿಂದ ಕಾಲಕ್ಕೆ ಬದಲಾಗುತ್ತಿರುತ್ತದೆ. ಅಮೆರಿಕ ಸಂಯುಕ್ತ ಸಂಸ್ಥಾನದಂತಹ ರಾಷ್ಟ್ರಗಳಲ್ಲಿ ಸಾಮಾಜಿಕ ಬದಲಾವಣೆಯೆಂಬುದು ಅಲ್ಲಿನ ಸಾಮಾಜಿಕ ರಚನೆಗಳೂ ಮತ್ತು ಅವುಗಳ ಘಟಕದಲ್ಲಿ ಕಂಡುಬರುವ ವ್ಯತ್ಯಾಸವಾದರೆ, ಭಾರತದಂತಹ ರಾಷ್ಟ್ರಗಳಲ್ಲಿ ಭೂ ಸಂಬಂಧಗಳಲ್ಲಿ, ಜಾತೀಯ ಸ್ಥಾನಮಾನಗಳಲ್ಲಿ ಉಂಟಾಗುವ ವ್ಯತ್ಯಾಸವಾಗಿರುತ್ತದೆ. ಆದುದರಿಂದ ಬದಲಾವಣೆಯೆಂಬುದಕ್ಕೆ ನಿರ್ದಿಷ್ಟವಾದ, ಸಾರ್ವತ್ರಿಕವಾದ ಅರ್ಥವೊಂದನ್ನು ನೀಡಲು ಸಾಧ್ಯವಾಗುವುದಿಲ್ಲ. ಸದ್ಯಕ್ಕೆ ಬದಲಾವಣೆಯ ನಿರ್ವಚನಗಳನ್ನು ಬದಿಗಿಟ್ಟು ಕರ್ನಾಟಕದ ಸಂದರ್ಭದಲ್ಲಿ ಸಾಮಾಜಿಕ ಬದಲಾವಣೆಯ ಬಗ್ಗೆ ಕರ್ನಾಟಕದ ಸಾಮಾಜಿಕ ಚಿಂತನ ಪರಂಪರೆಯಲ್ಲಿ ನೀಡಿರುವ ಅರ್ಥಗಳನ್ನು ನೋಡಬಹುದು.

ಸಾಮಾಜಿಕ ಬದಲಾವಣೆಯನ್ನು ಕುರಿತು ಶ್ರೀನಿವಾಸರು ಸಮಾಜಶಾಸ್ತ್ರೀಯ ಚೌಕಟ್ಟಿನಲ್ಲಿ ವಿವರಿಸಿದ್ದರಾದರೂ, ಕರ್ನಾಟಕದ ಮಟ್ಟಿಗೆ ಈ ಪರಿಕಲ್ಪನೆ ನಿರಂತರ ಮಂಥನಕ್ಕೊಳಪಟ್ಟಿದೆ. ವಚನ ಚಳುವಳಿ ಕರ್ನಾಟಕದ ಸಾಮಾಜಿಕ ಬದಲಾವಣೆಯ ಮೇಲೆ ಬರೆದ ಭಾಷ್ಯದಂತಿದೆ. ಅಲ್ಲಮ, ಬಸವ, ಅಕ್ಕ, ಆಯ್ದಕ್ಕಿ ಮಾರಯ್ಯ, ಅಂಬಿಗರ ಚೌಡಯ್ಯ ಮೊದಲಾದ ನೂರಾರು ವಚನ ಚಳುವಳಿಯ ನೇತಾರರು, ಅನುಯಾಯಿಗಳು ವ್ಯಕ್ತಿಗಳಾಗಿ ಬದಲಾವಣೆಗೊಳಪಟ್ಟವರು. ಜಾತಿ, ಲಿಂಗ, ಧರ್ಮದ ಹಂಗನ್ನು ತೊರೆದು ಹೊಸ ಸಮಾಜದ ಹುಟ್ಟಿಗೆ ಶ್ರಮಿಸಿದವರು. ಬದಲಾವಣೆಯನ್ನು ಆ ವೈಯಕ್ತಿಕ ಬದುಕಿನ ಪ್ರಯೋಗಕ್ಕೆ ಆಹ್ವಾನಿಸಿಕೊಂಡವರು. ಇದರಿಂದ ವಚನಗಳಲ್ಲಿ ಸಾಮಾಜಿಕ ಬದಲಾವಣೆಯೆಂಬುದು ತರ್ಕ ಘರ್ಷಣೆಗೊಳಮಾಡಿ ಸಮಗ್ರವಾಗಿ ನಿರ್ವಚಿಸಲ್ಪಡುತ್ತದೆ. "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬ ಧ್ಯೇಯ ವಾಕ್ಯವನ್ನು ಹೊರಡಿಸುತ್ತದೆ. ಇಲ್ಲಿ ಬದಲಾವಣೆಯೇ ಬದುಕು. ಆ ಬದುಕಿನಿಂದ ಹೊರಡುವ ವಿವರಣೆ ಯಾದುದರಿಂದ ಅದು ಸಂಶೋಧನೆಯಿಂದ ಹೊರಡುವ ಶುಷ್ಕ ವ್ಯಾಖ್ಯೆಯಂತಿರುವುದಿಲ್ಲ. ಭಕ್ತಿ ಪಂಥ, ದಾಸ ಪಂಥ, ಸೂಫಿ ಪರಂಪರೆಗೆ ತಳಹದಿಯಾಗಿದ್ದು ಧಾರ್ಮಿಕ ಬಂಡಾಯ. ಈ ಆಧ್ಯಾತ್ಮಿಕ ಪರಿಭಾಷೆ ಇಲ್ಲಿ ಬದಲಾವಣೆಯ ಕುರಿತು ಕುತೂಹಲ, ವಿನಯ, ಪ್ರತಿಭಟನೆಯ ಕೆಚ್ಚು, ಮೋಹ ಎಲ್ಲವೂ ಇದೆ. ಅದಕ್ಕೆ ಸಾಕ್ಷಿಯೆಂಬಂತೆ ಶಿಶುನಾಳ ಶರೀಫರ ಸಾಲಿಯ ನೋಡಿದಿಯಾ ಗಿರಣಿ ವಿಸ್ತಾರ ನೋಡಮ್ಮ ಪದಗಳನ್ನು ನೋಡಬಹುದು.

ಕರ್ನಾಟಕದ ಐತಿಹಾಸಿಕ ಹಿನ್ನೆಲೆಯಲ್ಲಿ ನೋಡಬಹುದಾದರೆ ಶ್ರೀನಿವಾಸರ ಸಂಸ್ಕೃತಾನು ಕರಣ ಎಂಬುದು ತೀರಾ ಇತ್ತೀಚಿನ ಕಲ್ಪನೆಯಲ್ಲ. ಸಮಾಜಶಾಸ್ತ್ರೀಯವಾಗಿ ಅದೊಂದು ಮಹತ್ವದ ಸಿದ್ಧಾಂತವಾಗಿರಬಹುದು. ಶ್ರೀನಿವಾಸರು ಇದನ್ನು ೧೯೫೨ರಲ್ಲಿ ತಮ್ಮ ಕೃತಿಯಾದ ದಕ್ಷಿಣ ಭಾರತದ ಕೊಡವರಲ್ಲಿ ಧರ್ಮ ಮತ್ತು ಸಮಾಜದಲ್ಲಿ ಮಂಡಿಸುವ ವೇಳೆಗೆ ನೂರಾರು ಬಾರಿ ಈ ಪರಿಕಲ್ಪನೆ ಬೇರೆ ಬೇರೆ ರೂಪಗಳಲ್ಲಿ ಸಾಹಿತ್ಯಕ ಪ್ರತಿಮೆಗಳಲ್ಲಿ ಮಂಡಿಸಲ್ಪಟ್ಟಿತ್ತು.

ಅದನ್ನು ಸಂಶೋಧನೆ ಮಾಡಿ ವೈಜ್ಞಾನಿಕವಾಗಿ ನಿರ್ದಿಷ್ಟರೂಪದಲ್ಲಿ ಮಂಡಿಸಿದ ಕೀರ್ತಿ ಶ್ರೀನಿವಾಸರಿಗೆ ಹೋಗುತ್ತದೆ. ನಾವು ಈಗ ಸಂಸ್ಕೃತಾನುಕರಣ ಪರಿಕಲ್ಪನೆಯ ಪ್ರಸ್ತುತತೆ, ಇತಿಮಿತಿಗಳನ್ನು ಪರಿಶೀಲಿಸಬಹುದು.

ಶ್ರೀನಿವಾಸರ ಪ್ರಕಾರ ಸಂಸ್ಕೃತಾನುಕರಣವೆಂದರೆ ಸಸ್ಯಾಹಾರ ಮತ್ತು ಮದ್ಯಪಾನ ವರ್ಜನೆಯ ಮೂಲಕ ಒಂದೆರಡು ತಲೆಮಾರುಗಳಲ್ಲಿ ಜಾತಿಯ ಏಣಿ ಶ್ರೇಣಿಯಲ್ಲಿ ಮೇಲೇರಲು ಪ್ರಯತ್ನಿಸುವ ಕೆಳಜಾತಿಯವರ ಪ್ರವೃತ್ತಿ ಸಂಸ್ಕೃತಾನುಕರಣವೆನ್ನಿಸಿಕೊಳ್ಳುತ್ತದೆ. ಜೊತೆಗೆ ಕೆಳ ಹಿಂದೂ ಜಾತಿ ಅಥವಾ ಬುಡಕಟ್ಟು ಅಥವಾ ಇತರೇ ಸಮೂಹ, ಪದ್ಧತಿ, ಸಂಸ್ಕಾರ, ಭಾವನೆ, ಮತ್ತು ಜೀವನ ವಿಧಾನವನ್ನು ಉನ್ನತ ಜಾತಿಯ ಮತ್ತು ಆಗಾಗ "ದ್ವಿಜರ" ದಿಕ್ಕಿನಲ್ಲಿ ಬದಲಿಸಿಕೊಳ್ಳುವ ಪ್ರಕ್ರಿಯೆ ಸಂಸ್ಕೃತಾನುಕರಣ ಎಂದೆನಿಸಿಕೊಳ್ಳುತ್ತದೆ. ಹಾಗೆಯೇ ಮುಂದು ವರೆಯುತ್ತಾ ಶ್ರೀನಿವಾಸರು ಇದು ಕೇವಲ ಸ್ಥಾನಮಾನಗಳಲ್ಲಿ ಉಂಟಾಗುವ ಬದಲಾವಣೆಯೇ ಹೊರತು ರಚನಾತ್ಮಕ ಬದಲಾವಣೆಯಲ್ಲ ಎಂದು ಸ್ಪಷ್ಟಪಡಿಸುತ್ತಾರೆ. ಇದಕ್ಕೆ ಉದಾಹರಣೆಯಾಗಿ ವಿಶ್ವಕರ್ಮ ಜನಾಂಗ, ನಾಡಾರರು, ಕೊಡವರು, ಬನಿಯಾ ಹೀಗೆ ಅನೇಕ ಜಾತಿಗಳನ್ನು ನೀಡುತ್ತಾರೆ. ವಿವಿಧ ಜನಗಣತಿಯ ಸಂದರ್ಭಗಳಲ್ಲಿ ವಿಭಿನ್ನ ಜಾತಿಗಳು ತಮ್ಮ ಸ್ಥಾನಮಾನವನ್ನು ಬ್ರಾಹ್ಮಣ ಜಾತಿಯ ಜೊತೆ ಸಮೀಕರಿಸಿದ್ದನ್ನು ತಿಳಿಸಿದ್ದಾರೆ.

ಶ್ರೀನಿವಾಸರು ಉದಾಹರಿಸುವಂತೆ ದಕ್ಷಿಣ ಕರ್ನಾಟಕದಲ್ಲಿ ಮಾಂಸವನ್ನು ಮನೆಯೊಳಗೆ ಬೇಯಿಸುವುದಿಲ್ಲ. ಪ್ರತ್ಯೇಕವಾದ ಒಲೆಯಲ್ಲಿ ಹೊರಗಡೆ ಬೇಯಿಸಲಾಗುತ್ತದೆ. ಹೀಗೆ ಎಲ್ಲ ಮಟ್ಟದ ಸಂಸ್ಕೃತಾನುಕರಣವು ಕಂಡುಬರುವುದೆಂದು ತಿಳಿಸುತ್ತಾರೆ. ಹೀಗೆ ನೂರಾರು ಉದಾಹರಣೆಗಳನ್ನು ನೀಡುವ ಮೂಲಕ ತಮ್ಮ ಸಂಸ್ಕೃತಾನುಕರಣ ಪರಿಕಲ್ಪನೆಗೆ ಸಮರ್ಥನೆಯನ್ನೊದಗಿಸಿದ್ದಾರೆ. ಆಧುನಿಕ ಭಾರತದಲ್ಲಿ ಸಾಮಾಜಿಕ ಬದಲಾವಣೆ ಎಂಬ ಪುಸ್ತಕದಲ್ಲಿ ಸಂಸ್ಕೃತಾನುಕರಣದ ಎಲ್ಲ ಮಾದರಿ ವಿಧಾನಗಳನ್ನು ಪೂರಕ ದಾಖಲೆಗಳೊಂದಿಗೆ ಮಂಡಿಸಿದ್ದಾರೆ. ಇಂದಿಗೂ ಕೂಡ ಕೆಳಜಾತಿಗಳು ಬ್ರಾಹ್ಮಣರಂತೆ ಧಾರ್ಮಿಕ ಮಠಮಾನ್ಯಗಳನ್ನು ಸ್ಥಾಪಿಸಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಯಾವುದೇ ಮಠಮಾನ್ಯಗಳಿಲ್ಲದ ಗೊಲ್ಲರು ಕುರುಬರು ಮಾದಿಗ ಜನಾಂಗದವರು ನಾಯಕರು ತೀರಾ ಇತ್ತೀಚೆಗೆ ಮಠಗಳನ್ನು ಸ್ಥಾಪಿಸಿ ಕೊಂಡು ಅದಕ್ಕೆ ಮಠಾಧಿಪತಿಗಳನ್ನು ನೇಮಿಸಿಕೊಂಡಿದ್ದಾರೆ. ಕೆಳಜಾತಿಗಳ(ಶೂದ್ರರ) ವಿದ್ಯಾವಂತ ಮೇಲುವರ್ಗಗಳಲ್ಲಿ ವಿವಾಹಗಳು ಸಂಸ್ಕೃತ ಮಂತ್ರಗಳು ಪುರೋಹಿತರ ಮದ್ಯಸ್ಥಿಕೆ ಯಿಲ್ಲದೆ ನಡೆಯುವುದಿಲ್ಲ. ಬ್ರಾಹ್ಮಣದೇವರುಗಳನ್ನು ಸಂತರನ್ನು ಆರಾಧಿಸುವುದು ಪೂಜಿಸು ವುದು ಕಂಡುಬರುತ್ತದೆ. ಈ ಎಲ್ಲ ಕ್ರಿಯೆಗಳು ಶ್ರೀನಿವಾಸರ ಪ್ರಕಾರ ಕೆಳಜಾತಿಗಳ ಅಥವಾ ಆ ಬ್ರಾಹ್ಮಣ ಪ್ರಯತ್ನ ಎಂಬುದು ಶ್ರೀನಿವಾಸರ ವಾದವಾಗಿದೆ. ಈ ಸಿದ್ಧಾಂತವು ಇನ್ನಷ್ಟು ವಿಸ್ತೃತರೂಪದಲ್ಲಿದ್ದರೂ ಕೂಡ ಅದರ ಒಟ್ಟು ಅಂಶವು ಮೇಲುಜಾತಿಗಳನ್ನು ಮುಖ್ಯವಾಗಿ ಬ್ರಾಹ್ಮಣರನ್ನು ಕೆಳಜಾತಿಗಳನ್ನು ಮೇಲ್ಮುಖ ಚಲನೆ ಸಾಧಿಸಲು ಅನುಕರಿಸುತ್ತವೆ ಎಂಬು

ದಾಗಿದೆ. ಆದುದರಿಂದ ಈ ಅಂಶವನ್ನೇ ಮುಖ್ಯವಾಗಿಟ್ಟುಕೊಂಡು ಸಂಸ್ಕೃತಾನುಕರಣದ ಸಿದ್ಧಾಂತದ ಒಳ ಉದ್ದೇಶಗಳನ್ನು ಮಿತಿಗಳನ್ನು ಚರ್ಚಿಸಬಹುದಾಗಿದೆ.

ಸಂಸ್ಕೃತಾನುಕರಣವೆಂಬುದು ಒಂದು ನೈಜಕಲ್ಪನೆಯೇ? ಅಥವಾ ಕೇವಲ ಅನುಕರಣೆಯನ್ನೇ ಚಲನೆಯೆಂದು ನಂಬಿಸಲು ಪ್ರಯತ್ನಿಸಿದ ಅಕೆಡೆಮಿಕ್ ವಂಚನೆಯೇ? ಮೇಲುಜಾತಿಗಳ ಅನುಕರಣೆಯಿಂದ ಕೆಳಜಾತಿಗಳು ನಿಜವಾಗಿಯೂ ಸ್ಥಾನಮಾನವನ್ನು ಹೆಚ್ಚಿಸಿಕೊಂಡಿವೆಯೆ? ಶ್ರೀನಿವಾಸರು ಈ ಪರಿಕಲ್ಪನೆಯನ್ನು ಮಂಡಿಸುವುದರ ಮೂಲಕ ಭಾರತೀಯ ಸಾಮಾಜಿಕ ಚಿಂತನೆಯ ಹಳಿ ತಪ್ಪಿಸಿದ್ದಾರೆಯೇ? ಎಂಬ ಪ್ರಶ್ನೆಗಳನ್ನು ಮುಂದೆ ವಿಶ್ಲೇಷಿಸಬಹುದು.

ಸಂಸ್ಕೃತಾನುಕರಣ ಎಂಬುದು ಮೇಲ್ನೋಟಕ್ಕೆ ಸುಸಂಬದ್ಧವಾದ ಪರಿಕಲ್ಪನೆಯಾದರೂ ಅತ್ಯಂತ ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಸಾಮಾಜಿಕ ಪರಿವರ್ತನೆಯನ್ನು ಕುರಿತು ಬಹಳ ಜಾಣ್ಮೆಯಿಂದ, ಶ್ರೀನಿವಾಸರು ಕೆಳಜಾತಿಗಳನ್ನು ವಂಚಿಸಿರುವುದು ಸ್ಪಷ್ಟವಾಗಿದೆ.

ಏಕೆಂದರೆ ಹಿಂದೂಸಮಾಜವೆಂದು ಕರೆಯಲ್ಪಡುತ್ತಿರುವ ಜಾತಿಗಳು ತಮ್ಮೊಳಗೆ ಅಪಾರ ವ್ಯತ್ಯಾಸಗಳನ್ನು ಒಳಗೊಂಡಿವೆ. ಆದರೆ ಶ್ರೀನಿವಾಸರು ಇದನ್ನೆಲ್ಲವನ್ನೂ ಸಾರಾಸಗಟಾಗಿ ಕಡೆಗಣಿಸಿ ಕೇವಲ ಬ್ರಾಹ್ಮಣ ಧಾರ್ಮಿಕ ಮಾದರಿಗೆ ಒತ್ತು ನೀಡಿರುವುದು ಕಂಡುಬರುತ್ತದೆ. ಭಾರತೀಯ ಸಮಾಜದಲ್ಲಿ ವೈದಿಕ ಪರಂಪರೆಯ ಪ್ರಧಾನಧಾರೆಯನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲವಾದರೂ ಅದೊಂದೇ ಇತರ ಎಲ್ಲ ಜಾತಿಗಳ ಮಾದರಿ ಪರಂಪರೆಯೆಂಬಂತೆ ಬಿಂಬಿಸಿರುವುದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ ಹಾಗೇನಾದರೂ ಒಪ್ಪಿಕೊಂಡಲ್ಲಿ ಸಾವಿರಾರು ಇತರ ಪಾರಂಪರಿಕ ಧಾರೆಗಳನ್ನು ಉದ್ದೇಶಪೂರ್ವಕವಾಗಿ ಪಕ್ಕಕ್ಕೆ ಸರಿಸಿದಂತಾಗುತ್ತದೆ.

ಶ್ರೀನಿವಾಸರು ಈ ಕೆಲಸವನ್ನು ಬಹಳ ಯಶಸ್ವಿಯಾಗಿ ಮಾಡಿದ್ದಾರೆ. ಸಂಸ್ಕೃತಾನುಕರಣವು ಹುಸಿಕಲ್ಪನೆಯೆಂಬುದಕ್ಕೆ ಜಾತಿಯ ಸ್ವರೂಪವೇ ಸಾಕ್ಷಿಯೊದಗಿಸುತ್ತದೆ. ಜಾತಿ ಒಂದು ಮುಚ್ಚಿದ ವ್ಯವಸ್ಥೆ. ಜಾತಿ ಸದಸ್ಯತ್ವವು ಹುಟ್ಟಿನಿಂದ ನಿರ್ಧಾರವಾಗುತ್ತದೆಯೇ ಹೊರತು ಸಾಧನೆಯಿಂದಾಗಲಿ, ಅನುಕರಣೆಯಿಂದ ಕೆಳಜಾತಿಯ ವ್ಯಕ್ತಿ ಅಥವಾ ಸಮೂಹ ಉನ್ನತವಾದ ಸ್ಥಾನಮಾನ ಪಡೆಯುವಂತಿದ್ದರೆ ಶ್ರೀನಿವಾಸರೇ ಹೇಳುವಂತೆ ಜಾತಿಯು ಮತ್ತಷ್ಟು ಪ್ರಬಲವಾಗುತ್ತಿರುವುದಕ್ಕೆ ಕಾರಣವೇನು?

ಸಂಸ್ಕೃತಾನುಕರಣ ಕಲ್ಪನೆಯು ನಿಂತಲ್ಲಿಯೇ ತಿರುಗುವ ಚಕ್ರದಂತಿದೆ. ನದಿಗೆ ಎದುರಾಗಿ ಈಜುತ್ತಿರುವ ದುರ್ಬಲ ವ್ಯಕ್ತಿಯೊಬ್ಬನಿಗೆ ಈಜುತ್ತಿರುವ ಭ್ರಮೆ ಹುಟ್ಟಿಸಬಹುದೇ ಹೊರತು ನಿಜವಾಗಿಯೂ ಮುಂದೆ ಚಲಿಸುವುದಿಲ್ಲ. ತಾನು ಕೊಚ್ಚಿಹೋಗದಂತೆ ಕೈಕಾಲುಗಳನ್ನು ಆಡಿಸುತ್ತಿರುತ್ತಾನೆ. ಸಂಸ್ಕೃತಾನುಕರಣೆಯನ್ನು ಕುರಿತು ಚಿಂತಿಸುವಾಗಲೆಲ್ಲ ಇದೇ ಚಿತ್ರ ಕಣ್ಣಮುಂದೆ ಬಂದು ನಿಲ್ಲುತ್ತದೆ.

ಸಮಾಜಶಾಸ್ತ್ರಜ್ಞ ಈ.ಅರ್.ಲೀಚ್‌ರವರು ಶ್ರೀನಿವಾಸರ ಸಂಸ್ಕೃತಾನುಕರಣ ಪರಿಕಲ್ಪನೆಯನ್ನು ನಾವು ಅಲ್ಲಗಳೆಯಲು ಸಾಧ್ಯವಿಲ್ಲ, ಆದರೆ ಅದು ಸಂಪೂರ್ಣವಾಗಿ ಬ್ರಾಹ್ಮಣಕೇಂದ್ರಿತ

ವಾಗಿದೆ. ಅವರೇನಾದರೂ ಕೆಳಜಾತಿಯಾಗಿದ್ದರೆ ಅವರ ಪರಿಕಲ್ಪನೆ ಮತ್ತಷ್ಟು ಒಳನೋಟಗಳನ್ನು ಪಡೆದುಕೊಳ್ಳಲು ಸಾಧ್ಯವಿತ್ತು ಎಂದಿದ್ದಾರೆ.

ಮೊದಲೇ ಹೇಳಿದಂತೆ ಶ್ರೀನಿವಾಸರು ಸಾಂಪ್ರದಾಯಿಕ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವರಾದ್ದರಿಂದ ಸಹಜವಾಗಿಯೇ ಬ್ರಾಹ್ಮಣ ಜೀವನವಿಧಾನ ಅತ್ಯುತ್ತಮವೆಂಬ ಭ್ರಮೆಗೆ ಒಳಗಾಗಿದ್ದರು. ಈ ಅಂಧ ಭ್ರಮೆಯಿಂದ ಬದುಕಿರುವವರೆಗೂ ಅವರು ಹೊರಬರಲಿಲ್ಲವೆಂದು ಕಾಣುತ್ತದೆ. ಏಕೆಂದರೆ ಬ್ರಾಹ್ಮಣೇತರ ಜಾತಿಗಳು ಅಂದರೆ ಒಕ್ಕಲಿಗರು, ರೆಡ್ಡಿಗಳು, ಲಿಂಗಾಯತರು ಮೊದಲಾದವರು ಬ್ರಾಹ್ಮಣರು ಅನುಕರಿಸುವುದನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದ್ದಾರೆ. ಬ್ರಾಹ್ಮಣರು ಸಾಮಾಜಿಕ ಉನ್ನತ ಸ್ಥಾನಮಾನದಲ್ಲಿರುವುದರಿಂದ ಕೆಳಜಾತಿಗಳನ್ನು ಅನುಕರಿಸುವ ಅವಶ್ಯಕತೆ ಇರಲಿಲ್ಲ. ಅದರೂ ಚರ್ಮದ ಉದ್ಯೋಗಗಳನ್ನು ಮಾಡುವುದು, ಇತರ ಕೆಳಜಾತಿಗಳೊಡನೆ ನಿರಂತರ ಸ್ಪರ್ಶ, ಸಾಮಾಜಿಕ ಸಂಪರ್ಕ, ಮಾಂಸಾಹಾರ, ಮದ್ಯಪಾನ ಬ್ರಾಹ್ಮಣರಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಶ್ರೀಮಂತ ವರ್ಗಕ್ಕೆ ಸೇರಿದ ಬ್ರಾಹ್ಮಣ ಕುಟುಂಬಗಳು ಅತ್ಯಾಧುನಿಕವಾದ ಪಾಶ್ಚಿಮಾತ್ಯ ಹೋಟೇಲುಗಳಿಗೆ ಭೇಟಿ ನೀಡಿ ಸಾಮೂಹಿಕವಾಗಿ ಮದ್ಯಪಾನ ಮಾಡುವುದು, ಮಾಂಸಾಹಾರ ಸೇವಿಸುವುದು ಕಾಣಬಹುದಾಗಿದೆ.

ಇದನ್ನು ಸಮಾಜಶಾಸ್ತ್ರಜ್ಞರು desankritization ಅಪಸಂಸ್ಕೃತಾನುಕರಣವೆಂದು ಕರೆಯುತ್ತಾರೆ. ಇಲ್ಲಿ ಉದ್ಭವಿಸುವ ಪ್ರಶ್ನೆಯೆಂದರೆ ಬ್ರಾಹ್ಮಣರು ಉತ್ತಮ ಸ್ಥಾನಮಾನದಲ್ಲಿದ್ದರೂ ಕೂಡ ಶೂದ್ರ ಜೀವನಶೈಲಿಯನ್ನು ಏಕೆ ಅನುಸರಿಸುತ್ತಿದ್ದಾರೆಂಬುದು. ಇಲ್ಲಿ ಅನುಕರಣೆಗಿಂತ ಮುಖ್ಯವಾಗಿ ಕಂಡುಬರುವುದು ಆ ಕಾಲದಲ್ಲಾಗುವ ಸಾಮಾಜಿಕ, ಅರ್ಥಿಕ ಮತ್ತು ರಾಜಕೀಯ ಬದಲಾವಣೆಗಳು ವ್ಯಕ್ತಿಯ ನಡವಳಿಕೆಯನ್ನು ನಿಯಂತ್ರಿಸುತ್ತವೆಯೇ ಮತ್ತು ಈಗಾಗಲೇ ಅಸ್ತಿತ್ವದಲ್ಲಿರುವ ನಡವಳಿಕೆಯನ್ನು ಬದಲಾಯಿಸಿಕೊಳ್ಳಲು ಪ್ರೇರೇಪಿಸುತ್ತದೆ. ಕೆಳಜಾತಿಗಳು ಎಂದೂ ಪ್ರಜ್ಞಾಪೂರ್ವಕವಾಗಿ ತಮ್ಮ ಸ್ಥಾನಮಾನಗಳನ್ನು ಬದಲಾಯಿಸಿಕೊಳ್ಳುವ ಸಲುವಾಗಿ ಬ್ರಾಹ್ಮಣರನ್ನು ಅನುಕರಿಸಲಿಲ್ಲ ಬದಲಾಗಿ, ಬ್ರಾಹ್ಮಣರ ಧಾರ್ಮಿಕ ನಾಯಕತ್ವ ಮತ್ತು ಪರೋಕ್ಷ ರಾಜಕೀಯ ತಂತ್ರ, ಆರ್ಥಿಕ ಅವಕಾಶಗಳ ವಂಚನೆಯಿಂದ ತಪ್ಪಿಸಿಕೊಳ್ಳಲು ಹಿಂದೂಧರ್ಮದ ಜಾತಿಪದ್ಧತಿಯ ಏಣಿಶ್ರೇಣಿಯ ವಿರುದ್ಧ ಹೂಡಿದ ಪ್ರಾಥಮಿಕ ಹಂತದ ಬಂಡಾಯವೆನ್ನಬಹುದು. ಇಂತಹ ಬಂಡಾಯವನ್ನು ಅದರ ಎಲ್ಲಾ ಆಯಾಮಗಳನ್ನು ಗಮನಿಸದೆ ಕೇವಲ ಅನುಕರಣೆಯನ್ನುವುದು, ಈ ಅನುಕರಣನೆಯನ್ನು ಸಾಮಾಜಿಕ ಚಲನೆಯನ್ನವುದು ಚಾರಿತ್ರಿಕ ದ್ರೋಹವಾಗಿದೆ.

ಶ್ರೀನಿವಾಸರ ಪಾಶ್ಚಾತ್ಯನುಕರಣ ಎಂಬ ಪರಿಕಲ್ಪನೆ ಸುಮಾರು ೧೫೦-೨೦೦ ವರ್ಷಗಳ ಕಾಲ ಬ್ರಿಟಿಷರ ಆಳ್ವಿಕೆಯಿಂದ ಭಾರತದಲ್ಲಿ ಉಂಟಾದ ತಾಂತ್ರಿಕ ಮೌಲಿಕ ಬದಲಾವಣೆಗಳನ್ನು ವಿವರಿಸುತ್ತದೆ. ಬ್ರಿಟಿಷರು ಪರಿಚಯಿಸಿದ ಶಿಕ್ಷಣ, ಕಾನೂನಿನ ವ್ಯವಸ್ಥೆ, ಸಂಪರ್ಕವ್ಯವಸ್ಥೆ, ನಗರೀಕರಣ, ಕೈಗಾರೀಕರಣವನ್ನು ಶ್ರೀನಿವಾಸರವರು ವಿವರವಾಗಿ ಚರ್ಚಿಸುತ್ತಾರೆ. ಸಂಸ್ಕೃತಾನು

ಕರಣ ಕಲ್ಪನೆಯಷ್ಟು ವಿಸ್ತೃತವಾದ ಚರ್ಚೆಯನ್ನು, ಈ ಪರಿಕಲ್ಪನೆಯು ಬೇಡುವುದಿಲ್ಲ. ಏಕೆಂದರೆ ಬ್ರಿಟಿಷರ ಕಾಲಾವಧಿಯಲ್ಲಿ ಭಾರತದಲ್ಲಿ ಉಂಟಾದ ಬದಲಾವಣೆಗಳನ್ನು ಬ್ರಿಟಿಷರ ಪ್ರಭಾವದಿಂದ ಉಂಟಾದ ಬದಲಾವಣೆಗಳೆಂದು ಕರೆದು ಪಾಶ್ಚಾತ್ಯಾನುಕರಣ ಎಂಬ ಪರಿಕಲ್ಪನೆಯನ್ನು ಬಹಳ ಸಂಕುಚಿತಗೊಳಿಸಲಾಗಿದೆ. ಆ ಕಾಲದಲ್ಲಿ ಉಂಟಾದ ರಾಜಕೀಯ, ಆರ್ಥಿಕ ಸಂರಚನೆಯಲ್ಲಿನ ಬದಲಾವಣೆಗಳನ್ನು ಗ್ರಹಿಸಿದೆ ಕೇವಲ ಪ್ರಭಾವ (ಇನ್‌ಫ್ಲುಯೆನ್ಸ್) ಎಂದರೇನೆಂದು ಚರ್ಚಿಸಿದ ಈ ಪರಿಕಲ್ಪನೆಯು ಬಹಳ ಶಿಥಿಲವಾಗಿದೆ. ಆದುದರಿಂದ ಇದಕ್ಕಿಂತಲೂ ಮುಖ್ಯವಾದ ಶ್ರೀನಿವಾಸರ ಒಟ್ಟು ಸಮಾಜಶಾಸ್ತ್ರೀಯ ಧೋರಣೆ ಭಾರತೀಯ ಸಾಮಾಜಿಕ ಚಿಂತನೆಯಲ್ಲಿ ಅವರ ಬರಹಗಳ ಸಮಕಾಲಿನ ಪ್ರಸ್ತುತೆಯನ್ನು ಚರ್ಚಿಸುವ ದೃಷ್ಟಿಯಿಂದ ಅವರ ಜಾತ್ಯತೀಕರಣ ಗ್ರಾಮಿಣ ಐಕ್ಯತೆ, ತಮಿಳುನಾಡು ಮತ್ತು ಕರ್ನಾಟಕದಲ್ಲಿನ ಹಿಂದುಳಿದ ಜಾತಿಗಳ ಬಗೆಗಿನ ಅಭಿಪ್ರಾಯವನ್ನು ಚರ್ಚಿಸಬಹುದು.

ಶ್ರೀನಿವಾಸರ ಕ್ಷೇತ್ರಕಾರ್ಯ ಆಧಾರಿತ "ನೆನಪಿಸಿಕೊಂಡ ಗ್ರಾಮ" ಅವರಿಗೆ ಅಂತಾರಾಷ್ಟ್ರೀಯ ಖ್ಯಾತಿಯನ್ನು ತಂದುಕೊಟ್ಟಿತು. ಈ ಸಂಶೋಧನಾಕೃತಿಯು ಮಂಡ್ಯದ ಬಳಿಯ ಅರವಟ್ಟಿಗೆಕೊಪ್ಪಲಿನಲ್ಲಿ ನಡೆಸಿದ ಅಧ್ಯಯನದ ಫಲವಾಗಿದೆ. ಆ ಗ್ರಾಮಕ್ಕೆ ರಾಂಪುರ ಎಂಬ ಕಾಲ್ಪನಿಕ ಹೆಸರನ್ನು ನೀಡಲಾಗಿದೆ. ಈ ಗ್ರಾಮವನ್ನು ಅದ್ಯಯನ ಮಾಡುವುದರ ಮೂಲಕ ಶ್ರೀನಿವಾಸರು ಗ್ರಾಮಗಳ ಬಗೆಗಿದ್ದ ಅನೇಕ ಪೂರ್ವಗ್ರಹಗಳನ್ನು ತಪ್ಪುಕಲ್ಪನೆಗಳನ್ನು ಹೋಗಲಾಡಿಸಿದ್ದಾರೆ. ಸಂಸ್ಕೃತಾನುಕರಣ ಪರಿಕಲ್ಪನೆಯಲ್ಲಿದ್ದ ಕೆಲವು ಮಿತಿಗಳನ್ನು ಮೀರಲು ಪ್ರಯತ್ನಪಟ್ಟಿರುವುದು ಕಂಡುಬರುತ್ತದೆ. ತಮ್ಮ ಕ್ಷೇತ್ರಾಧ್ಯಯನದ ಮೂಲಕ ಪೂರ್ವಗ್ರಹಗಳನ್ನು ಸಾರಾಸಗಟಾಗಿ ತಿರಸ್ಕರಿಸಿದ್ದಾರೆ. ಗ್ರಾಮಗಳನ್ನು ಪೌರಾಣಿಕ ಮತ್ತು ಮೇಲುಜಾತಿಯ ದೃಷ್ಟಿಕೋನದ ಅಧ್ಯಯನಗಳನ್ನು ಕಟುವಾಗಿ ಟೀಕಿಸಿ, ಗ್ರಾಮಗಳಿಗೆ ಹೋಗಿ ನೇರವಾಗಿ ಜನಜೀವನದ ಅಭ್ಯಾಸ ಮಾಡಬೇಕೆಂದು ಕರೆ ನೀಡುತ್ತಾರೆ:

ನೆನಪಿಸಿಕೊಂಡ ಗ್ರಾಮ ಕೃತಿಯು ಶ್ರೀನಿವಾಸರ ವಸ್ತುನಿಷ್ಠತೆಯನ್ನು ಕೆಲವು ಕಡೆ ಪ್ರಶ್ನಾತೀತವಾಗಿ ಪ್ರತಿಪಾದಿಸುತ್ತದೆ. ಉದಾಹರಣೆಗೆ ಹಸು ಮತ್ತು ಹಸುವಿನ ಹಾಲಿನ ಬಗ್ಗೆ ಗ್ರಾಮೀಣ ಪ್ರದೇಶದಲ್ಲಿ ಹಿಂದೂಗಳಿಗೆ ಅತ್ಯಂತ ಶ್ರೇಷ್ಠವಾದ ಭಾವನೆಯಿದೆಯೆಂದು ಉತ್ಪ್ರೇಕ್ಷೆ ಮಾಡಲಾಗಿದೆ. ಅದನ್ನು ತಿರಸ್ಕರಿಸಿ ಗ್ರಾಮಗಳಲ್ಲಿ ಹಾಲು ಉತ್ಪಾದಕ ಪ್ರಾಣಿಯಾಗಿ ಎಮ್ಮೆಯ ಮಹತ್ವವನ್ನು ಗುರುತಿಸಿದ್ದಾರೆ. ಹಿಂದೂಗಳಲ್ಲಿ ಗೋವಧೆ ಇಲ್ಲ ಎಂಬುದನ್ನು ಇವರ ಸಂಶೋಧನೆಯು ಸುಳ್ಳೆಂದು ಸಾಬೀತುಪಡಿಸಿದೆ. ಏಕೆಂದರೆ ರಾಂಪುರದ ಜನರು ನಿರುಪಯುಕ್ತ ಹಸುಗಳನ್ನು ಕೊಲ್ಲಲ್ಪಡುತ್ತವೆಂದು ಗೊತ್ತಿದ್ದೂ ಮಾರುತ್ತಿದ್ದರು. ತಾಂತ್ರಿಕ ಬದಲಾವಣೆಗಳನ್ನು ಗ್ರಾಮೀಣ ಜನರು ತಿರಸ್ಕರಿಸುತ್ತಾರೆ ಎಂಬ ಪೂರ್ವಗ್ರಹವನ್ನು ಶ್ರೀನಿವಾಸ್ ಪ್ರಶ್ನಿಸುತ್ತಾರೆ. ಗ್ರಾಮಕ್ಕೆ ಬರುವ ಸೌಲಭ್ಯಗಳನ್ನು ಗ್ರಾಮದ ಸಾಮಾನ್ಯ ಜನರು ಸ್ವಾಗತಿಸುತ್ತಾರಾದರು, ಪಟ್ಟಭದ್ರ ಹಿತಾಸಕ್ತಿಗಳು ಅವುಗಳನ್ನು ಉಪಯೋಗಿಸಿಕೊಳ್ಳುತ್ತವೆ ಎಂಬುದನ್ನು ಗುರುತಿಸಿದ್ದಾರೆ.

ಈ ವಿಚಾರಗಳಲ್ಲಿ ಪ್ರಗತಿಪರವಾದ, ವಸ್ತುನಿಷ್ಠವಾದ ನಿಲುವುಗಳನ್ನು ಪ್ರಕಟಪಡಿಸುವ ಎಂ.ಎಸ್. ಶ್ರೀನಿವಾಸ್‌ರವರು ಗ್ರಾಮೀಣ ಜಾತಿಯ ಮತ್ತು ಭೂಸಂಬಂಧದ ವಿಷಯಗಳು ಬಂದಾಗ ಮಾತ್ರ ಏಕಪಕ್ಷೀಯವೂ ಸಾಂಪ್ರದಾಯಿಕವೂ ಆದ, ಮೇಲು ಜಾತಿಯ ಯಜಮಾನ್ಯವನ್ನು ಸಮರ್ಥಿಸುವ ಗ್ರಾಮೀಣ ಅಖಂಡತೆಯ ವಾದವನ್ನು ಮಂಡಿಸುತ್ತಾರೆ. ಇಂದಿಗೂ ಕೂಡ ಯಾವುದೇ ಪ್ರಬಲ ಜಾತಿಯ, ಮೇಲು ಜಾತಿಯ ವ್ಯಕ್ತಿ ಗ್ರಾಮೀಣ ಸೌಹಾರ್ದತೆಯ ಬಗೆಗೆ ವ್ಯಕ್ತಪಡಿಸುವ ಸಾಮಾನ್ಯ ಅಭಿಪ್ರಾಯವನ್ನು ಎಂ.ಎಸ್. ಶ್ರೀನಿವಾಸ್ ತಮ್ಮ ಅಸಮಾನ್ಯ ಸಂಶೋಧನಾ ಕೃತಿಯಲ್ಲಿ ವ್ಯಕ್ತಪಡಿಸುತ್ತಾರೆ.

ರಾಂಪುರ ಗ್ರಾಮವು ಅಖಂಡ ಐಕ್ಯತೆಯನ್ನು ಹೊಂದಿದೆ. ಅದು ಭೌಗೋಳಿಕ, ಧಾರ್ಮಿಕ ಸಾಮಾಜಿಕ ಐಕ್ಯತೆಯನ್ನು ಒಳಗೊಳ್ಳುತ್ತದೆ ಎಂದು ಬರೆಯುತ್ತಾ, ರಾಂಪುರ ಗ್ರಾಮದಲ್ಲಿನ ಜಾತಿಸಂಬಂಧಗಳನ್ನು ಮೇಲುಕೀಳುಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಎಂ.ಎನ್. ಶ್ರೀನಿವಾಸ್‌ರವರು ಐಕ್ಯತೆ ಎಂದು ಭಾವಿಸಿರುವ ಕ್ಷುಲ್ಲಕ ಮತ್ತು ಹಾಸ್ಯಾಸ್ಪದ ಉದಾಹರಣೆಗಳನ್ನು ನೀಡುತ್ತಾರೆ. ಅವು ಕೆಳಕಂಡಂತಿವೆ. ಸಾಂಕ್ರಾಮಿಕ ಮಲೇರಿಯಾ ರೋಗ ಬಂದಾಗ ಗ್ರಾಮದ ಜನರೆಲ್ಲಾ ಒಂದಾಗಿ ಊರನ್ನು ಖಾಲಿಮಾಡಿ ಮತ್ತೊಂದು ಪ್ರದೇಶದಲ್ಲಿ ನೆಲೆಸಿದ್ದು, ರಾಂಪುರದ ಕೆರೆಯಲ್ಲಿನ ಮೀನುಗಳ ಮೇಲಿನ ಹತೋಟಿಯನ್ನು ಸರ್ಕಾರ ತೆಗೆದುಕೊಂಡಿದ್ದನ್ನು ಗ್ರಾಮಸ್ಥರೆಲ್ಲಾ ಒಟ್ಟಾಗಿ ವಿರೋಧಿಸಿದ್ದು.

ಈ ಮೇಲ್ತೋರಿಕೆಯ ಹುಸಿ ಐಕ್ಯತೆಯನ್ನು ಪ್ರತಿಪಾದಿಸಲು ಉದ್ದಾಮ ಸಮಾಜಶಾಸ್ತ್ರಜ್ಞರಾದ ಶ್ರೀನಿವಾಸರು ಪ್ರಯತ್ನಪಟ್ಟಿರುವುದು ಆಶ್ಚರ್ಯಕರವಾಗಿದೆ. ಜಾತಿ ವ್ಯವಸ್ಥೆಯಲ್ಲಿನ ಅಸಮಾನತೆಯು ಕಣ್ಣಿಗೆ ರಾಚುವಂತಿದ್ದರೂ ಅದಕ್ಕೆ "ಸೌಹಾರ್ದತೆ ಮತ್ತು ಐಕ್ಯತೆ" ಎಂಬ ಸಿಹಿ ಲೇಪನವನ್ನು ಹಚ್ಚಿ ಕೈತೊಳೆದುಕೊಂಡಿರುವುದು ಸಮಾಜಶಾಸ್ತ್ರೀಯ ವಸ್ತುನಿಷ್ಠತೆಗೆ ಭಂಗ ತಂದಿದೆ. ಶ್ರೀನಿವಾಸರ ಈ ಮನೋಭಾವವು ಅವರ "ದಕ್ಷಿಣ ಭಾರತದ ಕೊಡವರಲ್ಲಿ ಧರ್ಮ ಮತ್ತು ಸಮಾಜ" ಎಂಬ ಕೃತಿಯಲ್ಲಿಯೇ ಕಂಡುಬರುತ್ತದೆ. ಕೊಡವ ಜನಾಂಗದವರು ಹೊಲೆಯ ಜನಾಂಗದವರನ್ನು ಗುಲಾಮರನ್ನಾಗಿ ಇಟ್ಟುಕೊಂಡಿರುವುದರಲ್ಲಿ ತಂದೆ ಮಗನ ಆತ್ಮೀಯತೆಯನ್ನು ಕಾಣುತ್ತಾರೆಯೇ ಹೊರತು ಅಸಮಾನತೆಯನ್ನು ಕಾಣುವುದಿಲ್ಲ. ಮಂಡ್ಯದ ಕಡೆ ಪ್ರಸಿದ್ಧವಾಗಿರುವ ಬಿಟ್ಟಿ ಚಾಕರಿಯನ್ನು ಹಳೆಮಗನ ಸಂಬಂಧವೆಂದು ವೈಭವೀಕರಿಸುತ್ತಾರೆ. ಮನು ಧರ್ಮಶಾಸ್ತ್ರದಲ್ಲಿ ಮನು ತೆರಿಗೆ ಕೊಡಲಾಗದವರು, ಬಡವರು, ಶ್ರೀಮಂತರಿಗೆ ಬಿಟ್ಟಿಚಾಕರಿ ಮಾಡಬೇಕೆಂದು ಹೇಳಿರುವುದನ್ನು ಎಂ.ಎನ್. ಶ್ರೀನಿವಾಸರು ಸಮಾಜಶಾಸ್ತ್ರೀಯ ಪರಿಭಾಷೆಯಲ್ಲಿ ವಿವರಿಸುತ್ತಾರಷ್ಟೆ.

ಎಂ.ಎನ್. ಶ್ರೀನಿವಾಸರ ನೆನಪಿಸಿಕೊಂಡ ಗ್ರಾಮ ತನ್ನ ಸರಳ ಸುಂದರ ಶೈಲಿಯಿಂದ ನೆನಪಿನಲ್ಲುಳಿದಿದ್ದರೂ ಹುಸಿ ಪರಿಕಲ್ಪನೆಗಳು, ಜಡಸಾಂಪ್ರದಾಯಿಕ ನಿಲುವುಗಳಿಂದ ಪರಿವರ್ತನೆಯ ಹಾದಿಯನ್ನು ಮುಳ್ಳು ಕಲ್ಲುಗಳಿಂದ ಮುಚ್ಚಿಬಿಡುತ್ತದೆ.

ಶ್ರೀನಿವಾಸರ ಈ ಸಂಶೋಧನಾ ಕೃತಿಯಲ್ಲಿ ಗ್ರಾಮದ ಸುಂದರ ಚಿತ್ರ ನೀಡುವುದಕ್ಕೆ ಪ್ರತಿಯಾಗಿ ಎಂ.ಎನ್. ಶ್ರೀನಿವಾಸರು ಈ ಸಂಶೋಧನೆಯನ್ನು ಕೈಗೊಂಡಿದ್ದ ಕಾಲದಲ್ಲಿಯೇ ಅಂಬೇಡ್ಕರರು ಹಳ್ಳಿಗಳ ಬಗ್ಗೆ ನೀಡಿರುವ ಅಭಿಪ್ರಾಯ ಕುತೂಹಲಕಾರಿಯಾಗಿದೆ. "ಹಳ್ಳಿಗಳು ಸಣ್ಣ ಆವೃತ ವಿಶ್ವಗಳು. ಸಂಕುಚಿತ ಮನೋಭಾವದ ಗುಂಡುಗಳು. ಜಾತೀಯತೆಯಿಂದ ತುಂಬಿರುವ ಅಜ್ಞಾನದ ಕೊಳಕು ಗುಂಡಿಗಳು".

ಆಧುನಿಕ ಭಾರತದಲ್ಲಿ ಸಾಮಾಜಿಕ ಬದಲಾವಣೆ ಕೃತಿಯ ಕೊನೆಯ ಎರಡು ಅಧ್ಯಾಯಗಳಲ್ಲಿನ ಅಭಿಪ್ರಾಯಗಳು ಅಕೆಡೆಮಿಕ್ ಪರಿಭಾಷೆಗೆ ಹೊರತಾದ ಶೈಲಿಯಲ್ಲಿ ಮಂಡಿಸಲ್ಪಟ್ಟಿದೆ. ಅದೇ ಕಾರಣಕ್ಕೆ ಗಮನ ಸೆಳೆಯುತ್ತವೆ. ಎಂ.ಎನ್ ಶ್ರೀನಿವಾಸರ ಈ ರೀತಿಯ ಬರಹಗಳ ಬಗ್ಗೆ ಅಮೇರಿಕಾದ 'ಟೈಮ್ಸ್ ಲಿಟರರಿ ಸಪ್ಲಿಮೆಂಟ್ ರಿವ್ಯೂವರ್'ನಲ್ಲಿ ಮೆಚ್ಚುಗೆ ವ್ಯಕ್ತಪಡಿಸಲಾಗಿದೆ.

ಜಾತ್ಯತೀಕರಣ ಮತ್ತು ತನ್ನದೇ ಸಮಾಜದ ಅಧ್ಯಯನ ಎಂಬ ಎರಡು ಅಧ್ಯಾಯಗಳಲ್ಲಿ ಎಂ.ಎನ್. ಶ್ರೀನಿವಾಸರು ಮೀಸಲಾತಿಯ ಬಗ್ಗೆ ವ್ಯಕ್ತಪಡಿಸುವ ಅಭಿಪ್ರಾಯ ಜಾತಿನಿಷ್ಠೆಯಿಂದ ಹೊರಟದ್ದಾಗಿದೆ. ತಮಿಳುನಾಡು ಮತ್ತು ಕರ್ನಾಟಕದಲ್ಲಿ ನಡೆದ ಬ್ರಾಹ್ಮಣ ವಿರೋಧಿ ಮತ್ತು ಹಿಂದುಳಿದ ಜಾತಿಗಳ ಆಂದೋಲನಗಳಿಂದ ತಮ್ಮ ಜಾತಿಯ(ಬ್ರಾಹ್ಮಣ) ಸ್ನೇಹಿತರು, ಬಂಧುಗಳಿಗೆ ನೋವಾಗಿದೆಯೆಂಬುದನ್ನು ದಾಖಲಿಸುತ್ತಾರೆ. ಮೀಸಲಾತಿಯಿಂದ ದಕ್ಷತೆ ಕಡಿಮೆಯಾಗಿದೆ ಎಂಬರ್ಥದಲ್ಲಿ ಬರೆಯುವ ಎಂ.ಎನ್. ಶ್ರೀನಿವಾಸರು ಕರ್ನಾಟಕದಲ್ಲಿ ಮೀಸಲಾತಿ ಬೆಳೆದು ಬಂದ ಬಗೆಯನ್ನು ಉದ್ದೇಶಪೂರ್ವಕವಾಗಿ ಮರೆಮಾಚಿದ್ದಾರೆ.

ಮೈಸೂರು ಸಂಸ್ಥಾನದಲ್ಲಿ ದಿವಾನರ ಹುದ್ದೆಗಳಿಗಾಗಿ ಸ್ಥಾನ ಮೀಸಲಿಡುವಂತೆ ಮೈಸೂರಿನ ಬ್ರಾಹ್ಮಣರು ಹೋರಾಡಿದ್ದು, ಆ ಮೂಲಕ ಮೀಸಲಾತಿಯನ್ನು ಪಡೆದದ್ದು, ಮೈಸೂರಿನ ಬ್ರಾಹ್ಮಣರಿಂದ ಸ್ಫೂರ್ತಿ ಪಡೆದ ಲಿಂಗಾಯತ, ಒಕ್ಕಲಿಗರು ಪ್ರಜಾ ಪ್ರತಿನಿಧಿ ಸಂಸ್ಥೆಗಳಲ್ಲಿ ಪ್ರಾತಿನಿಧ್ಯಕ್ಕೆ ಒತ್ತಾಯಿಸಿದ್ದು, ಈ ಪ್ರಬಲ ಜಾತಿಗಳ ವಿರುದ್ಧ ಹೊಲೆಯರು ಮಾದಿಗರಂತಹ ಜಾತಿಗಳನ್ನು ಬ್ರಾಹ್ಮಣರು ಎತ್ತಿಕಟ್ಟಿದ್ದು, ದೇಶದಲ್ಲೇ ಮೊದಲ ಬಾರಿಗೆ ಕರ್ನಾಟಕದಲ್ಲಿ ಮೀಸಲಾತಿ ವ್ಯವಸ್ಥೆ ಜಾರಿಗೆ ಬಂದ ಹಿನ್ನಲೆ. ಇಂತಹ ಐತಿಹಾಸಿಕ ಹಿನ್ನೆಲೆಯನ್ನು ಬದಿಗಿಟ್ಟು ಮೀಸಲಾತಿಯಿಂದ ಬ್ರಾಹ್ಮಣರಿಗೆ ತೊಂದರೆಯಾಗಿದೆಯೆಂಬಂತೆ ಬಿಂಬಿಸುತ್ತಾರೆ.

ಗ್ರಾಮಗಳ ಅಧ್ಯಯನದ ಮೂಲಕ ಭಾರತೀಯ ಸಮಾಜಕ್ಕೆ ಎಂ.ಎನ್. ಶ್ರೀನಿವಾಸರು ಕನ್ನಡಿ ಹಿಡಿಯುತ್ತಾರೆಂದು ಕೆಲವು ಸಮಾಜ ವಿಜ್ಞಾನಿಗಳು, ಸಾಹಿತಿಗಳು, ಪತ್ರಕರ್ತರು ಭಾವಿಸಿದ್ದಾರೆ. ಈ ರೀತಿಯ ಅಭಿಪ್ರಾಯಕ್ಕೆ ಎಂ.ಎನ್ ಶ್ರೀನಿವಾಸರ ಕೃತಿಗಳಲ್ಲಿ ಯಾವ ಪುರಾವೆಯೂ ಸಿಗುವುದಿಲ್ಲ. ಸಮಾಜಶಾಸ್ತ್ರದ ವಿದ್ಯಾರ್ಥಿಯಾಗಿ ಎಂ.ಎನ್. ಶ್ರೀನಿವಾಸರ ಸಮಗ್ರ ಬರಹಗಳನ್ನು ಅದ್ಯಯನ ಮಾಡಿದಾಗ ನನಗೆ ಅನ್ನಿಸಿದ್ದಿಷ್ಟು. ನಾಡಿನ ಗ್ರಾಮಗಳು, ಜಾತಿಗಳು, ಹಿಂದೂ ಧರ್ಮ, ಇವೇ ಮೊದಲಾದ ಪ್ರಮುಖ ಸಾಮಾಜಿಕ ಘಟಕಗಳ ಬಗ್ಗೆ

ಎಂ.ಎನ್. ಶ್ರೀನಿವಾಸರ ಗ್ರಹಿಕೆ ಮೇಲ್ಮಟ್ಟದ್ದು, ತೆಳುವಾದುದು ಆಗಿದೆ.

ಸಮಾಜವನ್ನು ಸರಿಯಾಗಿ ಅರ್ಥ ಮಾಡಿಕೊಂಡು, ಸಮಾಜದ ಬೆಳವಣಿಗೆಗೆ ಮಾರ್ಗದರ್ಶನ ನೀಡಬೇಕಾದ ಸಂದರ್ಭಗಳಲ್ಲಿ ಶ್ರೀನಿವಾಸರು ನಿರಾಶೆಯುಂಟುಮಾಡಿದ್ದಾರೆ. ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ತಮ್ಮ ಇಡೀ ಜೀವನ ಕಳೆದ, ಅದರಿಂದಾಗಿಯೇ ದೇಶದ ಏಕಮೇವ ಸಮಾಜ ವಿಜ್ಞಾನಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಶ್ರೀನಿವಾಸರಿಂದ ಸಮಾಜ ನಿರೀಕ್ಷಿಸಿದ್ದು ಅಪಾರವಾಗಿತ್ತು. ಆದರೆ ಅವರು ನಿರ್ಮಿಸಿರುವ ಸಮಾಜಶಾಸ್ತ್ರೀಯ ಅಡಿಪಾಯವೇ ತೀರ ದುರ್ಬಲವಾಗಿದೆ. ಅವರು ಈ ಅಡಿಪಾಯಕ್ಕೆ ಬಳಸಿರುವ ದುರ್ಬಲ ಸಾಮಗ್ರಿಗಳನ್ನು ಹೊರತೆಗೆದು ಸದೃಢವೂ ವಸ್ತುನಿಷ್ಠವೂ ಆದ ಸಮಾಜಶಾಸ್ತ್ರವನ್ನು ನಿರ್ಮಿಸುವ ಜವಾಬ್ದಾರಿ ನಮ್ಮೆಲ್ಲರ ಹೆಗಲ ಮೇಲಿದೆ.

**'ರಿಮೆಂಬರ್ಡ್ ವಿಲೇಜ್' ಜೊಂಡೋ? ಪೈರೋ?**

ಎಂ. ಚಂದ್ರಪೂಜಾರಿಯವರು ಪುಸ್ತಕ ಪರಿಚಯದಲ್ಲಿ (ಕನ್ನಡ ಅಧ್ಯಯನ: ೬-೧) ಎಂ.ಎನ್. ಶ್ರೀನಿವಾಸರ 'ದಿ ರಿಮೆಂಬರ್ಡ್ ವಿಲೇಜ್' ಪುಸ್ತಕವನ್ನು ಪರಿಚಯಿಸುವ ಪ್ರಯತ್ನ ಮಾಡಿದ್ದಾರೆ. 'ರಿಮೆಂಬರ್ಡ್ ವಿಲೇಜ್'ನ ರಚನೆಯ ಹಿಂದಿನ ಪ್ರೇರಣೆ, ಸೈದ್ಧಾಂತಿಕ ನಿಲುವುಗಳನ್ನು ಸ್ಪಷ್ಟವಾಗಿ ಚರ್ಚಿಸಿದ್ದಾರೆ. ರಚನಾತ್ಮಕ ಕಾರ್ಯಾತ್ಮಕ ವಿಧಾನ (Structural Functinalism)ನ ಮಿತಿಗಳನ್ನು ಗುರುತಿಸಿ ಅದರ ಯಜಮಾನ್ಯವನ್ನು ಪ್ರಶ್ನಿಸುತ್ತಾರೆ. ಇದರ ಮಿತಿಗಳನ್ನು ಗುರುತಿಸಿದ ಪೂಜಾರಿಯವರು, ಶ್ರೀನಿವಾಸರು ತಮ್ಮದೇ ಪರಿಸರದ ಹಳ್ಳಿಯನ್ನು ಅಧ್ಯಯನ ಮಾಡಿ 'ರಚನಾತ್ಮಕ ಕಾರ್ಯಾತ್ಮಕ' ವಿಧಾನದ ಮಿತಿಗಳನ್ನು ಮೀರಿದರು ಎಂಬ ರಿಯಾಯಿತಿಯನ್ನು ರಿಮೆಂಬರ್ಡ್ ವಿಲೇಜ್ ಕೃತಿಗೆ ನೀಡುತ್ತಾರೆ.

ಆದರೆ ಎಂ.ಎನ್.ಎಸ್.ರ ಈ ಅಧ್ಯಯನವನ್ನು ಮತ್ತಷ್ಟು ಕೂದಲು ಸೀಳಿ ನೋಡಿದರೆ ಶ್ರೀನಿವಾಸರು ರಚನಾತ್ಮಕ ಕಾರ್ಯಾತ್ಮಕ ವಿಧಾನದ ನಿಯಮಗಳಿಗೆ ಪೂರ್ಣಪ್ರಮಾಣದಲ್ಲಿ ಬದ್ಧರಾಗಿರುವುದು ಕಂಡುಬರುತ್ತದೆ. ಬಹುಶಃ ರ್ಯಾಡ್‌ಕ್ಲೆಫ್ ಬ್ರೌನ್‌ರಿಗಿಂತ ದೂರದ ವೀಕ್ಷಕರಾಗಿ ತಮ್ಮ ನೆನಪುಗಳನ್ನು ದಾಖಲಿಸಿದ್ದಾರೆ ಎನಿಸುತ್ತದೆ. ಪಾಸಿಟಿವಿಸಂ ಆಬ್‌ಜೆಕ್ಟಿವಿಟಿಯ ಪದಶಃ ಅರ್ಥಕ್ಕೆ ಜೋತುಬಿದ್ದು ರಚಿಸಿರುವ ಈ ಕೃತಿ ವಿವರಗಳ ವಿಚಾರದಲ್ಲಿ ಸಮೃದ್ಧವಾಗಿದೆ. ಅದೇ ಕಾರಣಕ್ಕಾಗಿ ಆಶೀಶ್‌ನಂದಿ, ಡಿ.ಆರ್. ನಾಗರಾಜ, ಅನಂತಮೂರ್ತಿ ಮೊದಲಾದ ವಿದ್ವಾಂಸರಿಂದ ಹೊಗಳಿಸಿಕೊಂಡಿದೆ. ಪೂಜಾರಿಯವರು, ಡಿ.ಆರ್. ನಾಗರಾಜರು 'ರಿಮೆಂಬರ್ಡ್ ವಿಲೇಜ್'ನ್ನು ವೈಭವೀಕರಿಸಿರುವುದನ್ನು ನೆರವಿಗೆ ಪಡೆದುಕೊಂಡು, ಅದನ್ನು ಸೂಕ್ಷ್ಮ ಕಾದಂಬರಿ, ಅದ್ಭುತ ಸಮಾಜಶಾಸ್ತ್ರೀಯ ಕೃತಿಯೆಂದು ಓದುಗರಿಗೆ ಪರಿಚಯಿಸುವುದು ಜೊಂಡನ್ನು ನೋಡಿ ಎಂಥ ಸಮೃದ್ಧ ಪೈರು ಎಂದು ಕರೆದಂತೆ ಆಗುತ್ತದೆ.

# ವಿಜ್ಞಾನ-ತಂತ್ರಜ್ಞಾನ: ಕರ್ನಾಟಕದ ಸಾಧನೆ-ಸವಾಲುಗಳು

● ಟಿ.ಆರ್. ಅನಂತರಾಮು

ವಿಜ್ಞಾನ ಮತ್ತು ತಂತ್ರಜ್ಞಾನ ಇಂದಿನ ಬದುಕಿನ ಅನಿವಾರ್ಯಗಳು ಎಂದು ಒಪ್ಪಿಕೊಳ್ಳಬೇಕಾದ ಸಂದರ್ಭದಲ್ಲಿ ನಾವಿದ್ದೇವೆ. ಶತಮಾನದ ಸಾಧನೆ ಅಥವಾ ಸಹಸ್ರಮಾನದಲ್ಲಾದ ಬೆಳವಣಿಗೆ ಕುರಿತು ಅವಲೋಕನ ಮಾಡುವುದು ಸಮುದ್ರ ತೀರದಲ್ಲಿ ಮರಳಿನ ಕಣವನ್ನು ಎಣಿಸುವ ಸಾಹಸವೇ ಸರಿ. ಈಗ ಒಂದೊಂದು ವಿಜ್ಞಾನ ಶಾಖೆಯೂ ವಟವೃಕ್ಷವಾಗಿ ಬೆಳೆದು ನಿಂತಿವೆ. ಭೌತವಿಜ್ಞಾನ, ಜೀವವಿಜ್ಞಾನ, ತಂತ್ರವಿಜ್ಞಾನ ತಮ್ಮ ಗಡಿಗಳನ್ನು ಅನೂಹ್ಯ ರೀತಿಯಲ್ಲಿ ವಿಸ್ತರಿಸಿಕೊಂಡಿವೆ. ವಿಜ್ಞಾನ-ತಂತ್ರಜ್ಞಾನಗಳು ಭೌಗೋಳಿಕ ಚೌಕಟ್ಟಿಗೆ ಸೀಮಿತವಾಗುವುದಿಲ್ಲ. ಒಂದು ತಲೆಮಾರಿನ, ಒಂದು ಜನಾಂಗದ ಕೊಡುಗೆಯಾಗದೆ ಇಡೀ ಮನುಕುಲದ ಭೌದ್ಧಿಕ ಬೆಳವಣಿಗೆಯಾಗಿ ನಮ್ಮ ಕಣ್ಣೆದುರಿಗೆ ವಿಸ್ತರಿಸುತ್ತಿವೆ. ವಿಜ್ಞಾನ ಸಂಶೋಧನೆಗಳು ತಾತ್ವಿಕ ವಾದವು; ಪ್ರಯೋಗಮತಿಗಳ ನಿತ್ಯ ಕಸರತ್ತಿನ ಫಲ. ಸಿದ್ಧಾಂತಗಳನ್ನು ಅನ್ವಯಿಸಿ ಪಡೆಯುವ ಜ್ಞಾನ ತಂತ್ರಜ್ಞಾನ, ಯಾಂತ್ರಿಕ ಬೆಳವಣಿಗೆಗೆ ಇದೇ ಹೂರಣ. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು. ಎರಡಕ್ಕೂ ವಿಶ್ವವ್ಯಾಪಿ ಗುಣವಿದೆ. ನಾಗಾಲೋಟದಲ್ಲಿ ಓಡುತ್ತಿರುವ ಈ ಬೌದ್ಧಿಕ ಜ್ಞಾನವನ್ನು ಎಷ್ಟು ತ್ವರಿತವಾಗಿ ಗ್ರಹಿಸಿ ನಮ್ಮ ಬದುಕಿನ ಸುಲಲಿತ ಚಾಲನೆಗೆ ಅನ್ವಯಿಸುತ್ತೇವೋ ಅಷ್ಟೇ ತ್ವರಿತವಾಗಿ ಪ್ರಗತಿ ಕಾಣಬಹುದು.

ಈ ಹಿನ್ನೆಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಕ್ಷೇತ್ರದಲ್ಲಿನ ಸಾಧನೆಯನ್ನು ಗ್ರಹಿಸುವುದು ಅಪೇಕ್ಷಣೀಯ. ಒಂದು ಅಂಶ ನಿಚ್ಚಳವಾಗಿ ಕಾಣುತ್ತದೆ. ತಲೆಮಾರಿನಿಂದ ತಲೆಮಾರಿಗೆ ತಂತ್ರಜ್ಞಾನ ಸುಧಾರಿಸುತ್ತ ಬಂದಿದೆ. ವಿಜ್ಞಾನಿಗಳ ಅನುಭವವೆಂದರೆ ಅದು ಥಟ್ಟನೆ ಆಗುವ ಜ್ಞಾನೋದಯವಲ್ಲ; ನಿರಂತರ ಬೌದ್ಧಿಕ ಯೋಚನೆಯ ಫಲ. ಹಿಂದಿನ ಆವಿಷ್ಕಾರಗಳೇ ಮುಂದಿನ ಆವಿಷ್ಕಾರಗಳಿಗೆ ಬುನಾದಿ. ಸದಾ ಕಾಲಕ್ಕೂ ಶ್ರೇಷ್ಠದರ್ಜೆಯ ವಿಜ್ಞಾನಿಯೆಂದೇ ಹೆಸರಾದ ಐಸಾಕ್ ನ್ಯೂಟನ್ನನ ಮಾತಿನಲ್ಲಿ 'ಹಿಂದಿನವರ ಹೆಗಲ ಮೇಲೆ ಕುಳಿತೇ ನಾನು ಮುಂದಿನ ನೋಟ ಪಡೆದಿದ್ದೇನೆ.'

ಭಾರತದಲ್ಲಿ ಅತ್ಯಂತ ಪ್ರತಿಭಾಶಾಲಿ ವಿಜ್ಞಾನಿಗಳು ರೂಪುಗೊಂಡಿದ್ದು ಈಗಾಗಲೇ ಸುಪರಿಚಿತ. ರಾಮನ್, ಜಗದೀಶಚಂದ್ರ ಬೋಸ್, ಮೇಘನಾಥ ಸಹಾ, ಹೋಮಿ ಜೆ. ಬಾಬಾ, ವಿಕ್ರಂ ಸಾರಾಭಾಯಿ, ಬೀರಬಲ್ ಸಾಹ್ನಿ, ಸ್ವಾಮಿನಾಥನ್ ಹೀಗೆ ಪಟ್ಟಿಯನ್ನು ಬೆಳೆಸುತ್ತಲೇ ಹೋಗಬಹುದು. ಸ್ವಾತಂತ್ರ್ಯಪೂರ್ವದಲ್ಲಾದ ವೈಜ್ಞಾನಿಕ ಬೆಳವಣಿಗೆಗೂ, ಸ್ವಾತಂತ್ರ್ಯೋತ್ತರದಲ್ಲಿ ಭಾರತ ಕಂಡ ಬೆಳವಣಿಗೆಗೂ ಇರುವ ಅಂತರ ಅಜಗಜಾಂತರ. ಈ ಸಹಸ್ರಮಾನದಲ್ಲಿ ೧೮ ಮತ್ತು ೧೯ನೇ ಶತಮಾನದಲ್ಲಿ ತಂತ್ರಜ್ಞಾನ ದೈತ್ಯ ಬೆಳವಣಿಗೆ ಕಂಡಿತು. ಹಾಗೆಯೇ ಈ ಶತಮಾನದ ಕಳೆದ ಮೂರು ದಶಕಗಳಲ್ಲಾದ ಬದಲಾವಣೆ ಅಭೂತಪೂರ್ವವಾದುದು. ಭಾರತದ ಸಂದರ್ಭದಲ್ಲಿ ಹೇಳುವಾಗ ಸ್ವಾತಂತ್ರ್ಯೋತ್ತರ ಬೆಳವಣಿಗೆಗೆ ವಿಶೇಷ ಸ್ಥಾನವಿದೆ. ಕಾರಣವಿಷ್ಟೇ, ಜವಾಹರ್‌ಲಾಲ್ ನೆಹರೂ ರಾಷ್ಟ್ರದ ಆಡಳಿತದ ಚುಕ್ಕಾಣಿ ಹಿಡಿದಾಗ ಸಮಗ್ರ ಭಾರತದ ಅಭಿವೃದ್ಧಿಯ ದೃಷ್ಟಿ ಅವರದಾಗಿತ್ತು. ವೈಜ್ಞಾನಿಕವಾಗಿ ಪ್ರಗತಿ ಸಾಧಿಸಿದ ಹೊರತು ನಮ್ಮ ದೇಶದ ಉತ್ಥಾನ ಸಾಧ್ಯವಾಗದೆಂದು ಅವರು ಮನಗಂಡಿದ್ದರು. ಪಂಚವಾರ್ಷಿಕ ಯೋಜನೆಗಳ ಮೂಲಕ ಭಾರತದ ಪ್ರಗತಿಯನ್ನು ಯೋಜಿಸಿದ ಕನಸುಗಾರ. ಪರಮಾಣು ವಿಜ್ಞಾನಿ ಡಾ. ರಾಜಾ ರಾಮಣ್ಣ ಅವರ ಮಾತಿನಲ್ಲಿ 'ನೆಹರೂ, ಪಶ್ಚಿಮದ ಆಧುನಿಕತೆಯನ್ನೂ, ಪೌರಸ್ತ್ಯದ ವಿಚಾರಪರತೆಯನ್ನೂ ಮೈಗೂಡಿಸಿಕೊಂಡು ವಿಜ್ಞಾನದಲ್ಲಿ ವಿಶೇಷ ಆಸಕ್ತಿ ಇದ್ದ ದಾರ್ಶನಿಕ.'

ಈ ಶತಮಾನದಲ್ಲಾದ ಒಂದೊಂದೂ ವಿಜ್ಞಾನ ಕ್ಷೇತ್ರದಲ್ಲಿನ ಪ್ರಗತಿ, ತಂತ್ರಜ್ಞಾನದಲ್ಲಾದ ಸುಧಾರಣೆಯನ್ನು ದಾಖಲೆ ಮಾಡುತ್ತ ಹೋಗುವುದು ಇಲ್ಲಿನ ಉದ್ದೇಶವಲ್ಲ, ಮಾನವೇತಿಹಾಸದಲ್ಲಿ ಅತ್ಯಂತ ಪ್ರಭಾವ ಬೀರಿ ಇಂದಿಗೂ ಒಂದಲ್ಲ ಒಂದು ಬಗೆಯಲ್ಲಿ ಅದರ ಪರಿಣಾಮವನ್ನು ತೋರುತ್ತಿರುವ ಸಿದ್ಧಾಂತಗಳು, ಅವುಗಳನ್ನೇ ಬುನಾದಿ ಮಾಡಿಕೊಂಡು ಬೆಳೆದ ತಂತ್ರಜ್ಞಾನದ ಹೆಜ್ಜೆ ಗುರುತುಗಳನ್ನು ಸ್ಥೂಲವಾಗಿ ಗುರುತಿಸುವುದು ಅವಶ್ಯಕ ಎನಿಸುತ್ತದೆ.

ಭೌತ ವಿಜ್ಞಾನದ ಪ್ರಗತಿ, ಪರಮಾಣು ಪ್ರಪಂಚದಿಂದ ನಮ್ಮನ್ನು ಬಾಂಬುಸ್ಫೋಟದವರೆಗೆ ಕರೆದೊಯ್ದಿದೆ. ಖಗೋಳ ವಿಜ್ಞಾನ ಸೌರವ್ಯೂಹದ ಆಚೆಗೂ ಅದರ ಕಬಂಧ ಬಾಹು ಚಾಚಿ ವಿಶ್ವದ ಬಗ್ಗೆ ನಮ್ಮ ಅರಿವಿನ ಕ್ಷಿತಿಜವನ್ನೇ ವಿಸ್ತರಿಸುತ್ತಿದೆ. ಹೊಸ ಸೂರ್ಯ, ಹೊಸ ಚಂದ್ರರ ಆವಿಷ್ಕಾರದಲ್ಲಿ ಮನುಕುಲ ಹೊಸ ಬಗೆಯ ನಾಳೆಗಳನ್ನು ಎದುರುನೋಡುತ್ತಿದೆ. ತಳಿ ವಿಜ್ಞಾನದ ಪ್ರಗತಿ ನಮ್ಮ ಬದುಕಿನ ಪರಿಯನ್ನೇ ಬದಲಾಯಿಸುತ್ತಿದೆ. ಹೊಸ ಜೀವ ಸೃಷ್ಟಿಯನ್ನು ಹೊಸ ತಂತ್ರಜ್ಞಾನ ಸಾಧ್ಯವಾಗಿಸಿದೆ. ಸೃಷ್ಟಿಕ್ರಿಯೆಗೆ ಅದು ಸೆಡ್ಡು ಹೊಡೆದು ನಿಂತಿದೆ. ಮಾಹಿತಿ ತಂತ್ರಜ್ಞಾನ ಜಗತ್ತನ್ನೇ ಪುಟ್ಟ ಗ್ರಾಮವಾಗಿ ಪರಿವರ್ತಿಸಿ, ಬೌದ್ಧಿಕ ಕ್ರಾಂತಿಯ ಕಹಳೆಯನ್ನೇ ಊದಿದೆ. ಇಪ್ಪತ್ತನೆಯ ಶತಮಾನದ ಅಂಚಿನಲ್ಲಿ ಕಂಪ್ಯೂಟರ್ ಪರಿಚಯವಿಲ್ಲದ ವ್ಯಕ್ತಿ ಅನಕ್ಷರಸ್ಥರ ಸಾಲಿಗೆ ಸೇರುವ ಅಪಾಯ ಎದುರಾಗಿದೆ. ತಂತ್ರಜ್ಞಾನದ ಬಿರುಗಾಳಿ ಈಗ

ಜಗತ್ತನ್ನೇ ಆವರಿಸಿದೆ. ಯಾವ ದೇಶ ಅಥವಾ ರಾಜ್ಯ ಇಂತಹ ಬದಲಾವಣೆಗೆ ಸ್ಪಂದಿಸುವು ದಿಲ್ಲವೋ, ಅದಕ್ಕಾಗುವ ಶಾಶ್ವತ ನಷ್ಟ ಊಹಾತೀತ.

ಯೂರೋಪಿನಲ್ಲಿ ಇಪ್ಪತ್ತನೆಯ ಶತಮಾನದ ಬಾಗಿಲು ತಟ್ಟುವ ಹೊತ್ತಿಗೆ ಜರ್ಮನಿಯ ರಂಟ್‌ಜನ್ ಎಕ್ಸ್ ಕಿರಣಗಳನ್ನು ಆವಿಷ್ಕರಿಸಿದ್ದ (ಕ್ರಿ.ಶ. ೧೮೯೫). ವೈದ್ಯಕೀಯ ಕ್ಷೇತ್ರದಲ್ಲಿ ಎಕ್ಸ್ ಕಿರಣಗಳ ಬಳಕೆ ಈಗಾಗಲೇ ಜಗಜ್ಜಾಹೀರಾಗಿದೆ. ಇದರ ಹಿಂದೆಯೇ ಫ್ರಾನ್ಸ್‌ನ ಬೆಕೆರಲ್ ಯುರೇನಿಯಮ್ ಲವಣದಲ್ಲಿ ವಿಕಿರಣ ಪಟುತ್ವವನ್ನು ಗುರುತಿಸಿದ(ಕ್ರಿ.ಶ. ೧೮೯೬). ಮುಂದೆ ಮೇರಿಕ್ಯೂರಿ, ಪಿಯರಿಕ್ಯೂರಿ ಪಿಚ್ ಬ್ಲೆಂಡ್ ಎಂಬ ಅದುರನ್ನು ಬಳಸಿ ಅದರಿಂದ ಪೊಲೋನಿಯಮ್ ಮತ್ತು ರೇಡಿಯಮ್ ಎನ್ನುವ ವಿಕಿರಣ ಪಟು ಧಾತುವನ್ನು ಪ್ರತ್ಯೇಕಿಸಿದರು (೧೮೯೮). ಇದರ ಬೆನ್ನ ಹಿಂದೆಯೇ(ಕ್ರಿ.ಶ. ೧೮೯೯) ರುದರ್‌ಫರ್ಡ್ ಯುರೇನಿಯಮ್ ಧಾತುವಿನ ವಿಕಿರಣದಲ್ಲಿ ಆಲ್ಫಾ ಮತ್ತು ಬೀಟಾ ಕಣಗಳ ಉತ್ಸರ್ಜನೆಯನ್ನು ಪತ್ತೆ ಹಚ್ಚಿದ. ಪರಮಾಣು ಲೋಕದ ಅದ್ಭುತ ಜಗತ್ತು ತೆರೆಯಿತು. ಪರಮಾಣುವಿನ ನ್ಯೂಕ್ಲಿಯಸ್‌ನ್ನು ಋಣ ವಿದ್ಯುತ್ತಿನ ಎಲೆಕ್ಟ್ರಾನುಗಳು ಪರಿಭ್ರಮಿಸುತ್ತಿವೆ ಎಂಬ ಸತ್ಯ ಹೊರಬಿತ್ತು. ಇದು ಭೌತ ವಿಜ್ಞಾನದ ದಿಕ್ಕು ದೆಸೆಗಳನ್ನೇ ಬದಲಾಯಿಸಿತು. ಕ್ರಿ.ಶ. ೧೯೩೮ರಲ್ಲಿ ಜರ್ಮನಿಯ ಆಟೋಹಾನ್ ಮತ್ತು ಸ್ಟ್ರಾಸ್ ಮನ್, ಯುರೇನಿಯಮ್ ಧಾತುವನ್ನು ನ್ಯೂಟ್ರಾನ್ ಕಣಗಳಿಂದ ತಾಡಿಸಿದರೆ ನ್ಯೂಕ್ಲಿಯಸ್ ವಿದಳನವಾಗುತ್ತದೆ ಎಂದು ತೋರಿಸಿಕೊಟ್ಟರು. ಪರಮಾಣು ಬಾಂಬುವಿನ ಆವಿಷ್ಕಾರಕ್ಕೆ ಇದು ಮೂಲಸೂತ್ರವಾಯಿತು. ಅಷ್ಟೇ ಅಲ್ಲ, ಪರಮಾಣು ಶಕ್ತಿಯ ಬಳಕೆಗೂ ಈ ತತ್ವವೇ ಆಧಾರ. ಎರಡನೆಯ ಮಹಾಯುದ್ಧದಲ್ಲಿ ನಾಜಿಗಳ ಕೈ ಮಿಗಿಲಾಗಿ ಅಮೆರಿಕದ ಮೇಲೆ ಪರಮಾಣು ಬಾಂಬುವಿನ ಪ್ರಯೋಗ ಮಾಡಬಹುದೆಂಬ ಗುಮಾನಿ ಅಮೆರಿಕನ್ನರಿಗೆ ಕಾಡಿ ಕೊನೆಗೆ ಅದು ಪರ್ಯವಸಾನವಾದದ್ದು ನಾಗಾಸಾಕಿ ಮತ್ತು ಹಿರೋಶಿಮಾ ಗಳ ಮೇಲೆ ೧೯೪೫ರಲ್ಲಿ ಅಮೆರಿಕ ಬಾಂಬ್ ದಾಳಿ ಮಾಡುವುದರೊಡನೆ. ಈಗ ನಾವು ಬಾರತವೂ ಸೇರಿದಂತೆ ಪರಮಾಣು ಅಸ್ತ್ರಗಳ ಪರೀಕ್ಷೆಯನ್ನು ನಿಷೇಧಿಸುವ ಸಿ.ಟಿ.ಬಿ.ಟಿ. ಕುರಿತು ಚಿಂತಿಸುವ ಮಟ್ಟಕ್ಕೆ ಬೆಳೆದಿದ್ದೇವೆ. ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಅಮೆರಿಕದಂತಹ 'ದೊಡ್ಡಣ್ಣ'ಗಳ ಹಿಡಿತ ಬಿಗಿಯಾಗುತ್ತಲೇ ಸಾಗಿದೆ. ಈ ಹಿನ್ನೆಲೆಯಲ್ಲಿ ಯೂರೋಪಿಯನ್ನರ ವೈಜ್ಞಾನಿಕ ಪ್ರಗತಿಯನ್ನು ಗಮನಿಸುವಾಗಲೇ ನಮ್ಮಲ್ಲಿ ಎಂತಹ ತಂತ್ರಜ್ಞಾನ ರೂಪುಗೊಳ್ಳುತ್ತಿತ್ತು ಎಂದು ಹಿನ್ನೋಟ ಬೀರುವುದು ಹೆಚ್ಚು ಅಪೇಕ್ಷಣೀಯ ಎನ್ನಿಸುತ್ತದೆ.

ಗ್ರಾಮೀಣ ಭಾರತದ ಸಮಗ್ರ ಅಭಿವೃದ್ಧಿಯ ಕನಸು ಕಂಡ ಗಾಂಧೀಜಿ, ದೇಶದ ಪ್ರಗತಿ ಯನ್ನು ವೈಜ್ಞಾನಿಕ ನೆಲೆಯಲ್ಲಿ ಬೆಳೆಸಬೇಕೆಂದು ಚಿಂತಿಸುತ್ತಿದ್ದ ನೆಹರೂ ಅವರ ಕಲ್ಪನೆಗಳನ್ನು ನಿಜವಾದ ಅರ್ಥದಲ್ಲಿ ಕಾರ್ಯರೂಪಕ್ಕೆ ತಂದದ್ದು ಕರ್ನಾಟಕದಲ್ಲೇ. ಏಷ್ಯದ ಮೊದಲ ಜಲ ವಿದ್ಯುತ್ ಯೋಜನೆಯೆಂದು ಖ್ಯಾತಿ ಪಡೆದಿರುವ ಶಿವನಸಮುದ್ರ ವಿದ್ಯುತ್ ಯೋಜನೆ, ಕೋಲಾರದ ಚಿನ್ನದ ಗಣಿಗಳಿಗೆ ವಿದ್ಯುತ್ ಒದಗಿಸಲೆಂದೇ ಪ್ರಾರಂಭವಾಯಿತು (೧೯೦೨). ೧೪೦ ಕಿ.ಮಿ. ದೂರದಿಂದ ೪.೨ ಮೆಗಾವ್ಯಾಟ್ ವಿದ್ಯುತ್ ಪೂರೈಕೆ ಮಾಡಿದ್ದು ಆಗಿನ ಕಾಲಕ್ಕೆ

ನಿಜವಾಗಲೂ ದೊಡ್ಡ ದಾಖಲೆಯೇ. ದಿವಾನ್ ಶೇಷಾದ್ರಿ ಅಯ್ಯರ್ ಅವರ ಕಾಲದಲ್ಲಿ ನೀಡಿದ ಈ ಸವಲತ್ತು ಕೋಲಾರದ ಗಣಿಗಳಿಗೆ ಹೊಸಜೀವ ನೀಡಿತು. ಅದು ಕೇವಲ ರಾಜ್ಯದ ಪ್ರಗತಿಯಷ್ಟೇ ಆಗಿರಲಿಲ್ಲ ದೇಶದ ಪ್ರಗತಿಯೇ ಆಗಿತ್ತು. ದಿವಾನರುಗಳ ಕಾಲದಲ್ಲಿ ಹಳೆಯ ಮೈಸೂರು ಕಂಡ ಬದಲಾವಣೆಗಳು ಹಲವಾರು. ಕರ್ನಾಟಕದ ಶಿಲ್ಪಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ತಂತ್ರಜ್ಞಾನದ ಕ್ಷೇತ್ರದಲ್ಲಿ ಮೊದಲು ಕೇಳಿಬರುವ ಹೆಸರು. ಅತ್ತ ಯೂರೋಪಿನಲ್ಲಿ ರುದರ್‌ಫರ್ಡ್ ಪರಮಾಣುವಿನ ಒಳ ರಚನೆಯನ್ನು ಕುರಿತು ಅಧ್ಯಯನದಲ್ಲಿ ತಲ್ಲೀನನಾಗಿದ್ದಾಗ, ಇತ್ತ ವಿಶ್ವೇಶ್ವರಯ್ಯನವರು ಗ್ರಾಮೀಣ ಬದುಕನ್ನು ಹಸನುಗೊಳಿಸಲು ಯೋಜನೆಗಳನ್ನು ಕೈಗೊಂಡಿದ್ದರು. ಮುಂಬೈ ಪ್ರಾಂತ್ಯದ ಸಿಂಧ್ ನದಿ ಉಕ್ಕಿ ಹರಿದು ಮಳೆಗಾಲದಲ್ಲಿ ಪ್ರವಾಹ, ಬೇಸಗೆಯಲ್ಲಿ ಬಣಬಣ ಎನ್ನುತ್ತಿದ್ದ ಅತಿ ವೈಪರೀತ್ಯ ತೋರುತ್ತಿದ್ದ ಕಾಲದಲ್ಲಿ ಈ ತಂತ್ರಜ್ಞಾನಿ ಸಕ್ಕೂರು ಜಲಾಶಯದಲ್ಲಿ ನೀರು ನಿಲ್ಲುವಂತೆ ಮಾಡಲು ಸ್ವಯಂಚಾಲಿತ ಕವಾಟುಗಳನ್ನು ನಿರ್ಮಿಸಿ ನೀರಿನ ಹರಿಯುವಿಕೆಯನ್ನು ನಿಯಂತ್ರಿಸಿದರು. ಇಂಥ ಕವಾಟದ ಆವಿಷ್ಕಾರಕ್ಕಾಗಿ ಅದರ ಸ್ವಾಮ್ಯವನ್ನು ಅವರಿಗೇ ಬಿಟ್ಟುಕೊಡಲಾಯಿತು. ಸರ್ಕಾರಿ ನೌಕರನಾಗಿ ಇದು ನನ್ನ ಕರ್ತವ್ಯ ಎಂದಷ್ಟೇ ಹೇಳಿ ವಿನಮ್ರವಾಗಿಯೇ ಹಕ್ಕನ್ನು ತಿರಸ್ಕರಿಸಿದರು. ಈ ಸಂದರ್ಭದಲ್ಲಿ ಥಾಮಸ್ ಆಲ್ವ ಎಡಿಸನ್ ತನ್ನ ಆವಿಷ್ಕಾರಕ್ಕಾಗಿ ಒಂದು ಸಾವಿರ ಪೇಟೆಂಟ್‌ಗಳನ್ನು ಪಡೆದಿದ್ದನೆಂಬುದು ಉಲ್ಲೇಖನೀಯ. ವಿಶ್ವೇಶ್ವರಯ್ಯನವರು ಕರ್ನಾಟಕಕ್ಕೆ ನೀಡಿದ ಕನ್ನಂಬಾಡಿ ಮಾರಿಕಣಿವೆ ಅಣೆಕಟ್ಟುಗಳು ಅವು ಕೇವಲ ನೀರಾವರಿ ಅಣೆಕಟ್ಟು ಎಂಬುದರಿಂದಲೇ ಪ್ರಸಿದ್ಧಿಯಾಗಿಲ್ಲ. ಅವುಗಳನ್ನು ಕಟ್ಟಲು ವಿಶ್ವೇಶ್ವರಯ್ಯನವರು ದುಬಾರಿಯ ಕಾಂಕ್ರೀಟ್ ತಂತ್ರಜ್ಞಾನಕ್ಕೆ ಮೊರೆಹೋಗಲಿಲ್ಲ. ಅವರು ಅನುಸರಿಸಿದ್ದು ಶುದ್ಧ ದೇಸೀ ತಂತ್ರಜ್ಞಾನ. ಸುಣ್ಣ ಮರಳನ್ನು ರುಬ್ಬಿ ಮಾಡಿದ ಗಾರೆಯೇ ಈ ಎರಡೂ ಅಣೆಕಟ್ಟುಗಳಲ್ಲಿ ಬಳಕೆಯಾಗಿದೆ. ಆಗಿನ ಕಾಲಕ್ಕೆ ಸಿಮೆಂಟು ದೊರೆಯುತ್ತಿರಲಿಲ್ಲ ಎಂದಲ್ಲ, ಅದರ ಆಮದಿಗಾಗಿ ತೆರಬೇಕಾಗಿದ್ದ ಹಣ ಅಪಾರ. ಈಗಲೂ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಹಳೆಯ ದೇವಸ್ಥಾನಗಳಲ್ಲಿ ಗಾರೆಯನ್ನು ಬಳಸಿರುವುದನ್ನು ಕಾಣಬಹುದು.

ಕ್ರಿ.ಶ. ೧೯೦೬ರ ಸುಮಾರಿನಲ್ಲಿ ಸೂಯೆಜ್ ಕಾಲುವೆ ಬಳಿ ಇರುವ ಬ್ರಿಟಿಷ್ ಆಡಳಿತಕ್ಕೆ ಸೇರಿದ ಏಡನ್ ನಗರದಲ್ಲಿ ಕುಡಿಯುವ ನೀರಿಗಾಗಿ ಹಾಹಾಕಾರ ಪಡಬೇಕಾದ ಸ್ಥಿತಿಯಿತ್ತು. ಒಂದು ಗ್ಯಾಲನ್ ಕುಡಿಯುವ ನೀರಿಗೆ ಒಂದೂವರೆ ರೂಪಾಯಿ ಖರ್ಚು ಮಾಡಬೇಕಾಗಿತ್ತು. ಸಮುದ್ರದ ನೀರನ್ನು ಕಾಯಿಸಿ, ಆವಿ ಮಾಡಿ ಅದರಿಂದ ಉತ್ಪಾದನೆಯಾದ ಬಾಷ್ಪವನ್ನು ಸಂಗ್ರಹಿಸಿ ಬ್ರಿಟಿಷ್ ಸೈನಿಕರು ಕುಡಿಯಬೇಕಾದ ಪರಿಸ್ಥಿತಿ ಇತ್ತು. ಮುಂಬೈನಲ್ಲಿದ್ದ ಬ್ರಿಟಿಷ್ ಅಧಿಕಾರಿಗಳಿಗೆ ತಕ್ಷಣ ಹೊಳೆದಿದ್ದು ವಿಶ್ವೇಶ್ವರಯ್ಯನವರ ಹೆಸರು. ಆಗ ಮುಂಬೈ ನಗರದಿಂದಲೇ ಏಡನ್ ನಗರದ ಆಡಳಿತವನ್ನು ನಿಯಂತ್ರಿಸಲಾಗುತ್ತಿತ್ತು. ಮುಂಬೈ ಸರ್ಕಾರದ ಸೇವೆಯಲ್ಲಿದ್ದ ವಿಶ್ವೇಶ್ವರಯ್ಯನವರನ್ನು ಅಲ್ಲಿಗೆ ಕಳುಹಿಸಲು ಸರ್ಕಾರ ಒಡನೆಯೇ ಒಪ್ಪಿತು. ಏಡನ್ ಸುತ್ತಮುತ್ತ ಬರೀ ಮರಳು ಭೂಮಿ; ಬಿದ್ದ ಮಳೆ ನೀರೆಲ್ಲವೂ ಇಂಗಿ ಹೋಗುತ್ತಿತ್ತು.

ಎಲ್ಲೆಲ್ಲೂ ಬರೀ ಬೋಳುಗುಡ್ಡ. ಈ ವೈಪರೀತ್ಯಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ ಸರ್.ಎಂ.ವಿ. ಮರಳುಗಾಡಿನಲ್ಲಿ ನೂರಾರು ಬಾವಿ ತೋಡಿಸಿದರು. ಮೂವತ್ತು ಕಿಲೋಮೀಟರು ಉದ್ದಕ್ಕೂ ಕೊಳಾಯಿಯಲ್ಲಿ ನೀರು ಸಾಗಿಸಿ ಏಡನ್ ನಗರದ ನೀರಿನ ದಾಹ ತಣಿಸಿದರು. ರೋಗ ರುಜಿನಗಳ ಬೀಡಾಗಿದ್ದ ಏಡನ್ ನಗರದ ರಸ್ತೆ, ಚರಂಡಿಗಳನ್ನು ಶುದ್ಧಗೊಳಿಸಿ ಸಾಂಕ್ರಾಮಿಕ ರೋಗಗಳಿಗೆ ಪರಿಹಾರ ಕಂಡುಕೊಟ್ಟರು. ಈ ಸೇವೆಗಾಗಿ ವಿಶ್ವೇಶ್ವರಯ್ಯನವರಿಗೆ 'ಕೈಸರ್-ಇ-ಹಿಂದ್' ಪ್ರಶಸ್ತಿ ಕೂಡ ದೊರೆಯಿತು. ಭದ್ರಾವತಿ ಕಬ್ಬಿಣದ ಕಾರ್ಖಾನೆ, ಮೈಸೂರು ಬ್ಯಾಂಕಿನ ಸ್ಥಾಪನೆ, ಕರ್ನಾಟಕದ ಒಳ ರೈಲು ಮಾರ್ಗಗಳು ಇವೆಲ್ಲವೂ ಕರ್ನಾಟಕದ ಅಭಿವೃದ್ಧಿಗೆ ವಿಶ್ವೇಶ್ವರಯ್ಯನವರು ನೀಡಿದ ಕೊಡುಗೆ. ಸ್ವಚ್ಛ ಬದುಕು, ಆದರ್ಶಗುಣ ಪ್ರತೀಕ ವಾಗಿದ್ದ ತಂತ್ರಜ್ಞಾನದ ಪರಿಣತರಿಗೆ ಅಧಿಕಾರ ದೊರೆತರೆ ಭಾರತದ ಚಹರೆಯೇ ಹೇಗೆ ಬದಲಾಗುತ್ತದೆ ಎಂಬುದಕ್ಕೆ ವಿಶ್ವೇಶ್ವರಯ್ಯ ತೋರುದೀಪವಾಗಿದ್ದಾರೆ. ತಂತ್ರಜ್ಞಾನದ ಪರಮೋಚ್ಚ ಗುರಿ ಎಂದೂ ನಮ್ಮ ಬದುಕನ್ನು ಉನ್ನತಮಟ್ಟಕ್ಕೆ ಏರಿಸುವ ಸುಧಾರಣೆಗಳನ್ನು ತರುವುದೇ ವಿನಾ ಮನುಕುಲದ ವಿನಾಶಕ್ಕೆ ಹೊಸ ತಂತ್ರಗಳನ್ನು ರೂಪಿಸುವುದಲ್ಲ.

ಸ್ವಾತಂತ್ರ್ಯಾನಂತರದ ಭಾರತದಲ್ಲಿ ಅಭೂತಪೂರ್ವ ಬೆಳವಣಿಗೆ ಕಂಡ ಕ್ಷೇತ್ರಗಳಲ್ಲಿ ಪರಮಾಣು ವಿಜ್ಞಾನವು ಒಂದು. ಸ್ವಾತಂತ್ರ್ಯ ಬಂದ ಮರುವರ್ಷವೇ ಡಾ. ಹೋಮಿ ಜಹಾಂಗೀರ್ ಭಾಭಾ ಅವರ ನೇತೃತ್ವದಲ್ಲಿ ಪರಮಾಣು ಶಕ್ತಿ ಆಯೋಗ ರಚನೆಯಾಯಿತು. ಆಯೋಗದ ಆದ್ಯಕ್ಷರಾಗಿ ಭಾಭಾ ಇಡೀ ದೇಶದ ಪರಮಾಣು ಶಕ್ತಿಯ ಕಲ್ಪನೆಯನ್ನೇ ದೊಡ್ಡ ಪ್ರಮಾಣದಲ್ಲಿ ಬದಲಾಯಿಸಿದರು. ಭಾರತದ ಉಪಖಂಡದ ಪರಮಾಣು ಶಕ್ತಿಯ ಸಾಮರ್ಥ್ಯವನ್ನು ಯೂರೋಪಿಗೆ ಮನವರಿಕೆ ಮಾಡಿಕೊಟ್ಟರು. ಭಾರತದ ಪರಮಾಣು ಶಕ್ತಿ ಸಂಶೋಧನೆಗಳು ಮೂಲತಃ ನಮ್ಮ ವೈಜ್ಞಾನಿಕ ಅಭಿವೃದ್ಧಿಗೆ ಸಂಬಂಧಿಸಿದವುಗಳು. ಪರಮಾಣು ಕ್ರಿಯಾಕಾರಕಗಳ ಸ್ಥಾಪನೆಯ ಗುರಿ ಹೊಂದಿ ಕೃಷಿ, ಔಷಧಿ ಮತ್ತು ಕೈಗಾರಿಕಾ ಬೆಳವಣಿಗೆಗೆ ನೆರವಾಗುವಂತಹವು. ಹೋಮಿ ಭಾಬಾ ಅವರ ಗರಡಿಯಲ್ಲಿ ಬೆಳೆದ ಅಪ್ಪಟ ಪ್ರತಿಭೆ ಪರಮಾಣು ವಿಜ್ಞಾನಿ ಕರ್ನಾಟಕದ ಡಾ. ರಾಜಾ ರಾಮಣ್ಣ. ಪರಮಾಣು ಭೌತ ವಿಜ್ಞಾನಿಯಾಗಿ, ಟಾಟಾ ಮೂಲಭೂತ ಸಂಶೋಧನಾ ಕೇಂದ್ರದಲ್ಲಿ ಅನಂತರ ಭಾಭಾ ಪರಮಾಣು ಕೇಂದ್ರದ ಮುಖ್ಯಸ್ಥರಾಗಿ ಆ ಕ್ಷೇತ್ರದಲ್ಲಿ ಅತ್ಯಂತ ಪರಿಣತ ವಿಜ್ಞಾನಿ ಎಂದು ರಾಜಾ ರಾಮಣ್ಣ ಅವರನ್ನು ಗುರುತಿಸುತ್ತಾರೆ. ಭಾರತದ ಸಂಶೋಧನಾ ಕ್ರಿಯಾಕಾರಕಗಳನ್ನು ಸ್ಥಾಪನೆ ಮಾಡಿ ಈ ನಿಟ್ಟಿನಲ್ಲಿ ಭಾರತ ದಾಪುಗಾಲು ಹಾಕಲು ಭೂಮಿಕೆಯನ್ನು ಒದಗಿಸಿದವರೇ ರಾಜಾ ರಾಮಣ್ಣ. ಜಪಾನ್ ದೇಶ ಪರಮಾಣು ಶಕ್ತಿಯ ಕ್ರಿಯಾಕಾರಕಗಳನ್ನು ಸ್ಥಾಪಿಸುವ ಮೊದಲೇ ಭಾರತದ 'ಅಪ್ಸರ' ಕ್ರಿಯಾಕಾರಕ (೧೯೫೬) ಪೂರ್ಣ ಪ್ರಮಾಣದಲ್ಲಿ ಸಿದ್ಧವಾಗಿತ್ತು. ಭಾರತಕ್ಕೆ ಖ್ಯಾತಿ ತಂದ ಈ ರಿಯಾಕ್ಟರನ್ನು ಸ್ಥಾಪಿಸಿದ್ದು ರಾಜಾ ರಾಮಣ್ಣ ಅವರ ನಿರ್ದೇಶನದಲ್ಲೇ. ಇದೀಗ ಸೈರಸ್, ಜರ್ಲಿನ್, ಪೂರ್ಣಿಮಾ ಕ್ರಿಯಾಕಾರಕಗಳು ಪರಮಾಣು ಶಕ್ತಿಯ ಸಂಶೋಧನೆಯಲ್ಲಿ ಭಾರತಕ್ಕೆ ದೊಡ್ಡ ಹೆಸರು ತಂದಿವೆ.

ಬೆಳೆಯುತ್ತಿರುವ ಶಕ್ತಿಯ ಬೇಡಿಕೆಯ ಪೂರೈಕೆಗಾಗಿ ತಾರಾಪುರ, ಕೋಟಾ, ಕಲ್ಪಕಂ, ನರೋರ, ಕಕ್ರಾಪುರಗಳಲ್ಲಿ ಶಕ್ತಿ ಉತ್ಪಾದನೆಯ ಸ್ಥಾವರಗಳಿವೆ. ನಮ್ಮ ನೆಲವನ್ನೇ ಕುರಿತು ಹೇಳುವುದಾದರೆ ಕಳೆದ ವಾರವಷ್ಟೇ ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಕೈಗಾ ಪರಮಾಣು ಸ್ಥಾವರದ ಎರಡನೇ ಹಂತದಿಂದ ನೂರು ಮೆಗಾ ವ್ಯಾಟ್ ಶಕ್ತಿಯ ವಿದ್ಯುತ್ ಉತ್ಪಾದನೆ ರಾಷ್ಟ್ರೀಯ ಜಾಲವನ್ನು ಸೇರಿದೆ. ಬೆಳೆಯುತ್ತಿರುವ ಬೇಡಿಕೆಗನುಗುಣವಾಗಿ ಪರ್ಯಾಯ ಶಕ್ತಿ ಮೂಲಗಳ ಅವಶ್ಯಕತೆ ಹಿಂದೆಂದಿಗಿಂತಲೂ ಈಗ ಬಹಳವಿದೆ. ಆಯಾ ದೇಶಗಳ ಸಂಪನ್ಮೂಲಗಳನ್ನು ಆಧರಿಸಿ ಕೈಗಾರಿಕೆಗಳು ಬೆಳೆಯಬೇಕೆ ವಿನಾ ಎಲ್ಲವೂ ಆಮದಿನಿಂದ ಕೈಗೂಡಲಾರವು.

ಈ ಎಲ್ಲ ತಂತ್ರಜ್ಞಾನದಿಂದಲೂ ನಮ್ಮ ಶಕ್ತಿಯ ಬೇಡಿಕೆಯನ್ನು ಸಂಪೂರ್ಣವಾಗಿ ಪೂರೈಸಿ ಕೊಳ್ಳಲಾಗುತ್ತಿಲ್ಲ. ನ್ಯೂಕ್ಲಿಯರ್ ಶಕ್ತಿಯ ಸ್ಥಾವರಗಳಿಂದ ಒಟ್ಟಾರೆ ಎರಡು ಸಾವಿರ ಮೆಗಾ ವ್ಯಾಟ್‌ಗಳಷ್ಟು ಶಕ್ತಿ ನಮಗೆ ಲಭ್ಯವಾಗುತ್ತಿದೆ. ಬಹುತೇಕ ಯುರೇನಿಯಮ್ ಇಂಧನವನ್ನು ಶಕ್ತಿಯ ಉತ್ಪಾದನೆಗೆ ಬಳಸಲಾಗುತ್ತಿದೆ.

ರಾಜಸ್ಥಾನದ ಪೋಕ್ರಾನ್‌ನಲ್ಲಿ ೧೯೭೪ರ ಮೇ ತಿಂಗಳಲ್ಲಿ ಪ್ರಯೋಗಾರ್ಥ ಪರಮಾಣು ಬಾಂಬು ಸ್ಫೋಟಿಸಿದಾಗ, ಈ ಸಾಧನೆ ವಿಶ್ವದ ಗಮನ ಸೆಳೆಯಿತು. ಇದಕ್ಕೆ ಬೇಕಾದ ಪ್ಲುಟೋನಿಯಮ್‌ನ್ನು ನಮ್ಮದೇ ಆದ ಸೈರಸ್ ಕ್ರಿಯಾಕಾರಕದಿಂದ ಪಡೆಯಲಾಗಿತ್ತು. ಬುದ್ಧಪೂರ್ಣಿಮೆಯ ದಿನದಂದೇ ಈ ಸ್ಫೋಟವನ್ನು ಯೋಜಿಸಿದ್ದರಿಂದ 'ಬುದ್ಧ ನಕ್ಕ' ಎಂಬ ಸಂದೇಶದ ಮೂಲಕ ಭಾರತದ ಸಾಮರ್ಥ್ಯವನ್ನು ಮನದಟ್ಟು ಮಾಡಿಕೊಡಲಾಗಿತ್ತು. ಇದೂ ಕೂಡ ರಾಜಾ ರಾಮಣ್ಣ ಅವರ ಕೊಡುಗೆಯೇ. ಪರಮಾಣು ಶಕ್ತಿ ಕುರಿತಂತೆ ಅನೇಕ ಯಶಸ್ವೀ ಯೋಜನೆಗಳನ್ನು ನಿರ್ವಹಿಸಿದ ರಾಜಾರಾಮಣ್ಣ ನಾಡು, ದೇಶಕ್ಕೆ ಖ್ಯಾತಿ ತಂದವರು. ಕಳೆದ ವರ್ಷದ ಮೇ ೧೩ರಂದು ಭಾರತ ಮತ್ತೆ ಅದೇ ಮರುಭೂಮಿಯಲ್ಲಿ ಪರಮಾಣು ಬಾಂಬುಗಳ ಸರಣಿಯನ್ನೇ ಸ್ಫೋಟಿಸಿ ಪರಮಾಣು ಅಸ್ತ್ರಗಳನ್ನು ಹೊಂದಿರುವ ರಾಷ್ಟ್ರಗಳ ಸಾಲಿಗೆ ಸೇರಿತು. ಅಷ್ಟೇ ಅಲ್ಲ, ಅಮೆರಿಕ ಹಾಕಿದ ದಿಗ್ಬಂಧನವನ್ನು ಯಶಸ್ವಿಯಾಗಿ ನಿರ್ವಹಿಸಿತು. ನಮ್ಮ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ವಿದೇಶಿಗಳು ಮೂಗು ತೂರಿಸುವ ಕ್ರಮಕ್ಕೆ ಸಡ್ಡು ಹೊಡೆದು ನಿಂತಿತು.

ಪರಮಾಣು ತಂತ್ರಜ್ಞಾನದಲ್ಲಿ ಭಾರತದ ಸಾಧನೆಗೆ ಎಲ್ಲ ಕಡೆಯೂ ಬೆಂಬಲವಿದ್ದಂತೆ ಕಾಣುತ್ತಿಲ್ಲ. ಇದು ಏಷ್ಯ ಖಂಡದ ಶಾಂತಿಗೆ ಧಕ್ಕೆ ತರುತ್ತದೆ, ಪರಮಾಣು ಅಸ್ತ್ರದ ಪೈಪೋಟಿಗೆ ಪ್ರೋತ್ಸಾಹ ಕೊಡುತ್ತದೆ ಎಂದು ಅನೇಕ ದೇಶಗಳು ಆತಂಕ ತೋರಿವೆಯಾದರೂ ನಮ್ಮ ಸ್ವರಕ್ಷಣೆಗೆ ಇದು ಅನಿವಾರ್ಯ, ನಾವು ಶಾಂತಿಪ್ರಿಯರು, ಮೊದಲು ಪರಮಾಣು ಬಾಂಬನ್ನು ಶತ್ರು ರಾಷ್ಟ್ರಗಳ ಮೇಲೆ ಪ್ರಯೋಗಿಸುವುದಿಲ್ಲ ಎಂಬ ಆಶ್ವಾಸನೆಯನ್ನು ಭಾರತ ನೀಡಿದೆ. ವಸ್ತುಸ್ಥಿತಿ ಎಂದರೆ ನಮ್ಮ ಯೋಜನೆಗಳನ್ನು ಹದ್ದುಬಸ್ತಿನಲ್ಲಿಡಲು ಅಂತಾರಾಷ್ಟ್ರೀಯ ವೇದಿಕೆಗಳನ್ನು ಶ್ರೀಮಂತ ರಾಷ್ಟ್ರಗಳು ಬಳಸುತ್ತಿವೆ.

ಹಾಗೆ ನೋಡಿದರೆ ಪರಮಾಣು ಶಕ್ತಿಯ ಇನ್ನೊಂದು ಮುಖ ಅಷ್ಟೇ ಕರಾಳ. ರಷ್ಯದ ಚರ್ನೊಬಿಲ್ ಪರಮಾಣು ಸ್ಥಾವರದಲ್ಲಿ ೧೯೮೬ರಲ್ಲಿ ಸೋರಿಕೆಯಾಗಿ ಅದರ ಪ್ರಭಾವ ದೂರದ ಸೈಬೀರಿಯದವರೆಗೆ ವ್ಯಾಪಿಸಿ, ವಿಕಿರಣದಿಂದಾಗಿ ಸಹಸ್ರಾರು ಜೀವಜಂತುಗಳು ಹಂತಹಂತವಾಗಿ ಸತ್ತವು. ಹುಟ್ಟಿದ ಮಕ್ಕಳು ವಿಕಲಾಂಗರಾದರು. ಮನುಕುಲಕ್ಕೆ ಪರಮಾಣು ಶಕ್ತಿ ವರವೇ ಶಾಪವೇ ಎಂಬ ಬಗ್ಗೆ ಇಂಥ ಘಟನೆಗಳು ಚರ್ಚೆಗೆ ಗ್ರಾಸ ಒದಗಿಸುತ್ತವೆ. ಇತ್ತೀಚೆಗಷ್ಟೇ ಜಪಾನಿನಲ್ಲಿ ಪರಮಾಣು ಶಕ್ತಿಯ ಸಂಸ್ಕರಣಾ ಘಟಕದಲ್ಲಿ ವಿಕಿರಣ ಹರಡಿ ಅಲ್ಲಿನ ಕಾರ್ಮಿಕರು ಅಸ್ವಸ್ಥರಾದುದನ್ನು ವಿದ್ಯುನ್ಮಾನ ಮಾಧ್ಯಮಗಳೂ, ಪತ್ರಿಕೆಗಳು ಜಾಹೀರುಗೊಳಿಸಿವೆ. ಜನಸಂಖ್ಯಾ ಸ್ಫೋಟವನ್ನು ಕಂಡಿರುವ ಭಾರತದಲ್ಲಿ ಕಾರ್ಯನಿರ್ವಹಿಸುತ್ತಿರುವ ಪರಮಾಣು ಸ್ಥಾವರಗಳು ಎಷ್ಟು ಸುರಕ್ಷ, ಅವುಗಳಲ್ಲಿ ವಿಕಿರಣ ಸೋರಿದರೆ ತ್ವರಿತವಾಗಿ ರಕ್ಷಣೆ ಒದಗಿಸುವ ವ್ಯವಸ್ಥೆ ನಮ್ಮಲ್ಲಿದೆಯೇ? ಜನರಲ್ಲಿ ಈ ಕುರಿತು ಜಾಗೃತಿ ಮೂಡಿದಿಯೇ? ಕೈಗಾ ಸ್ಥಾವರದಿಂದ ಪಡೆಯುತ್ತಿರುವ ವಿದ್ಯುತ್ತಿನ ಪ್ರಮಾಣಕ್ಕೂ, ಅಲ್ಲಿನ ಗ್ರಾಮೀಣ ಪ್ರದೇಶದ ಜನರ ಅಸ್ತಿಯ ತ್ಯಾಗಕ್ಕೂ ನಿಜಕ್ಕೂ ತಾಳೆ ಮಾಡಬಹುದೆ? ಅಲ್ಲಿ ಆಗಿರುವ ಕಾಡಿನ ನಾಶದ ಪ್ರಮಾಣ ಎಷ್ಟು? ಈ ಸ್ಥಾವರದಿಂದ ಉತ್ಪಾದನೆಯಾಗುವ ತ್ಯಾಜ್ಯ ವಿಕಿರಣ ಪದಾರ್ಥವನ್ನು ಯಾವ ವೈಜ್ಞಾನಿಕ ಉಪಾಯಗಳಿಂದ ಸುರಕ್ಷಿತವಾಗಿ ನಿಭಾಯಿಸಬಹುದು? ಇಂಥ ಹತ್ತು ಹಲವು ಪ್ರಶ್ನೆಗಳನ್ನು ಪರಿಸರವಾದಿಗಳೂ, ಸಾರ್ವಜನಿಕರೂ ಕೇಳುತ್ತಿದ್ದಾರೆ. ಇಂಥ ಯೋಜನೆಗಳಿಂದ ಹೆಚ್ಚು ಕೆಡಕಾಗುವುದಿಲ್ಲ ಎಂಬುದನ್ನು ಸಾಬೀತು ಮಾಡಿ ತೋರಿಸಬೇಕಾದ ಹೊಣೆ ಯೋಜನಕರ ಮೇಲಿದೆ. ತಂತ್ರಜ್ಞಾನಗಳು ನಮ್ಮ ದೈನಂದಿನ ಬದುಕಿನ ಸಮಸ್ಯೆಗಳಿಗೆ ಉತ್ತರವಾಗಬೇಕು. ಅವೇ ಶಾಪವಾಗಬಾರದು. ಇಂಥ ಆತಂಕವನ್ನು ದೂರ ಮಾಡಿದಾಗ ಮಾತ್ರ ವೈಜ್ಞಾನಿಕ ಪ್ರಗತಿ, ತಂತ್ರಜ್ಞಾನ ನಮ್ಮನ್ನು ಪ್ರಗತಿಯ ಪಥಕ್ಕೆ ಒಯ್ಯಬಲ್ಲವು ಎಂಬ ನಂಬಿಕೆ ಹುಟ್ಟಿಸುತ್ತವೆ.

### ಅಂತರಿಕ್ಷ ಯಾನ

ಸಾಧನೆಯನ್ನು ಕುರಿತು ಹೇಳುವಾಗ ಆಕಾಶದ ಮಿತಿಯನ್ನು ಹೇಳುವುದು ರೂಢಿ. ಬಾಹ್ಯಾಕಾಶದ ಸಂಶೋಧನೆಯ ದೃಷ್ಟಿಯಿಂದ ಅಕಾಶಕ್ಕೆ ಮಿತಿಯನ್ನು ಕಲ್ಪಿಸುವುದೂ ಕೂಡ ಅಸಂಭವವೇ. ಈ ಶತಮಾನದ ಪೂರ್ವಾರ್ಧ ರಾಕೆಟ್ ಯುಗ, ಉತ್ತರಾರ್ಧ ಉಪಗ್ರಹ ಹಾಗು ವ್ಯೋಮನೌಕೆಯ ಯುಗವೆಂದು ಸ್ಥೂಲವಾಗಿ ಗುರುತಿಸಬಹುದು. ಕ್ರಿ.ಶ. ೧೯೫೭ರಲ್ಲಿ ಅಂದಿನ ಸೋವಿಯತ್ ರಷ್ಯ ಮಾನವರಹಿತ ಸ್ಪುಟ್‌ನಿಕ್ ಉಪಗ್ರಹವನ್ನು ಗಗನಕ್ಕೆ ಕಳಿಸುವುದರೊಂದಿಗೆ ನಿಜವಾದ ಅರ್ಥದಲ್ಲಿ ಆಂತರಿಕ್ಷ ಯುಗ ಪ್ರಾರಂಭವಾಯಿತೆನ್ನಬಹುದು. ಅಮೆರಿಕದ ಗಗನಯಾತ್ರಿ ನೀಲ್ ಆರ್ಮ್‌ಸ್ಟ್ರಾಂಗ್ ಅಪೋಲೋ ೧೧ ನೌಕೆಯಲ್ಲಿ ಯಾನ ಮಾಡಿ ೧೯೬೯ ಜುಲೈ ೨೧ ಚಂದ್ರನ ಮೇಲೆ ಕಾಲಿಡುತ್ತಲೇ ಅದು ಮನುಕುಲದ ಪರಮೋಚ್ಚ ಸಾಧನೆ ಎಂಬ ಹೆಗ್ಗಳಿಕೆ ಪಡೆಯಿತು. ಅಲ್ಲಿಂದ ತಂದ ೨೦ ಕಿ.ಗ್ರಾಂ. ತೂಕದ ಚಂದ್ರಶಿಲೆ

ನಮ್ಮೆಲ್ಲರ ಊಹೆಗೂ ತೆರೆ ಎಳೆದು ಚಂದ್ರ ಕೂಡ ಜ್ವಾಲಾಮುಖಿಗಳ ಶಿಲೆಯಿಂದಾದ ಒಂದು ಆಕಾಶಕಾಯ ಎಂಬ ಸತ್ಯ ತಿಳಿದು ಬಂತು. ಇಂದು ಗ್ರಹೋಪಗ್ರಹಗಳ ತಪಾಸಣೆಗೆಂದು ವ್ಯೋಮನೌಕೆಗಳು ನಿರಂತರ ಶೋಧ ಕೈಗೊಂಡಿವೆ. ಬುಧನಿಂದ ಪ್ರಾರಂಭಿಸಿ ಸೌರವ್ಯೂಹದ ಅತಿದೂರದ ಕಾಯ ಪ್ಲೂಟೋ ಗ್ರಹವನ್ನು ಇಣುಕಿನೋಡಿ ಒಂದೊಂದೋ ಗ್ರಹದ ವಿಕಾಸದ ಚರಿತ್ರೆಯನ್ನು ನಮ್ಮ ಮುಂದೆ ತೆರೆದಿಟ್ಟಿದೆ. ಈಗ್ಗೆ ಮೂರು ವರ್ಷಗಳ ಹಿಂದೆ ಮಂಗಳ ಗ್ರಹದಲ್ಲಿ ಇಳಿದ ಪಾತ್ ಫೈಂಡರ್ ನೌಕೆ ಮತ್ತು ಅದರೊಂದಿಗಿದ್ದ ಪುಟ್ಟ ರೋಬೋಟ್ ಯಂತ್ರ ಸೋಜರ್ನರ್ ಅಲ್ಲಿನ ಶಿಲೆಗಳನ್ನು ಕೆರೆದು ಅದೂ ಕೂಡ ಜ್ವಾಲಾಮುಖಿಯಿಂದಾದ ಕಾಯ ಎಂಬುದನ್ನು ತೋರಿಸಿಕೊಟ್ಟಿದೆ. ಈಗ ಮಂಗಳ ಗ್ರಹದ ಅಂಗಳದಲ್ಲಿ ಸೂಕ್ಷ್ಮ ಜೀವಿಗಳಿರಬಹುದೆಂಬ ಬಗ್ಗೆ ಸಾಕಷ್ಟು ಹುಡುಕಾಟ ನಡೆದಿದೆ. ಗುರುವಿನ ಉಪಗ್ರಹವಾದ ಯೂರೋಪದ ಮಂಜಿನ ಗಡ್ಡೆಯಡಿ ಸಾಗರವಿರಬಹುದೆಂಬ ಸೂಚನೆಯನ್ನು ವಾಯೇಜರ್ ನೌಕೆ ನೀಡಿದೆ. ಅನ್ಯಗ್ರಹದ ಜೀವಿಗಳ ಅಸ್ತಿತ್ವದ ಬಗ್ಗೆ ಈ ಶತಮಾನದಲ್ಲಿ ಮತ್ತಷ್ಟು ಸಂಶೋಧನೆಗಳು ಆಗುತ್ತಿವೆ. ಅಮೆರಿಕ, ರಷ್ಯದ ವ್ಯೋಮನೌಕೆಗಳು ಸೌರವ್ಯೂಹದ ಆಚೆಗೂ ತಮ್ಮ ಯಾನ ಬೆಳೆಸಿವೆ. ಹೊಸ ಸೌರವ್ಯೂಹದ ಬಗ್ಗೆ ಈಗಾಗಲೇ ಕೆಲವೊಂದು ಖಚಿತ ಮಾಹಿತಿ ದೊರತಿದೆ.

ಇವೆಲ್ಲ ಬಲಾಢ್ಯ ದೇಶಗಳಾದ ಅಮೆರಿಕ, ರಷ್ಯ ಮುಂತಾದವುಗಳ ಸಂಶೋಧನೆಗೆ ಸಂಬಂಧಿಸಿದ ಅತ್ಯಂತ ಗಮನಾರ್ಹ ಯೋಜನೆಗಳು, ಆದರೆ ಪ್ರಗತಿಶೀಲ ರಾಷ್ಟ್ರವಾದ ಭಾರತ ಅಥವಾ ಅಂಥ ದೇಶಗಳು ಇಂಥ ದೊಡ್ಡ ಸ್ವರೂಪದ ಯೋಜನೆಗಳಲ್ಲಿ ತೊಡಗಿಕೊಳ್ಳಲು ತಾಂತ್ರಿಕಜ್ಞಾನಕ್ಕಿಂತ ಮುಖ್ಯವಾಗಿ ಆರ್ಥಿಕ ಸ್ಥಿತಿ ಹೆಚ್ಚು ನಿಯಂತ್ರಿಸುತ್ತದೆ. ನಮ್ಮ ಆದ್ಯತೆಗಳು ನಮ್ಮ ದೇಶದ ಅವಶ್ಯಕತೆಗೆ ಅನುಗುಣವಾಗಿ ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರಕ್ಕೆ ಸಂಬಂಧಿಸಿದವು. ಭಾರತ ಕೂಡ ಬಾಹ್ಯಾಕಾಶ ಯುಗವನ್ನು ಪ್ರವೇಶಿಸಿ ಅಲ್ಲೂ ಅದ್ಭುತ ಯಶಸ್ಸು ಪಡೆದಿರುವುದು ಗಮನಾರ್ಹ. ನಮ್ಮ ಬಾಹ್ಯಾಕಾಶ ಯೋಜನೆಗೆ ಕೇವಲ ೩೦ರ ಪ್ರಾಯ; ಇದು ವಿಕ್ರಂ ಸಾರಾಭಾಯಿಯವರ ಮಾನಸ ಶಿಶು. ೧೯೬೨ರಲ್ಲಿ ಪರಮಾಣು ಶಕ್ತಿ ಆಯೋಗ ತುಂಬಾದಲ್ಲಿ ರಾಕೆಟ್ ಉಡಾವಣಾ ಕೇಂದ್ರವನ್ನು ಸ್ಥಾಪಿಸಿತು. ೧೯೭೪ರವರೆಗೆ ಬಾಹ್ಯಾಕಾಶ ಸಂಶೋಧನೆ ಪ್ರಾಯೋಗಿಕ ಕಾರ್ಯಕ್ರಮಗಳಿಗೆ, ಮಾತ್ರ ಸೀಮಿತವಾಗಿತ್ತು. ಉಪಗ್ರಹ ಉಡಾವಣಾ ತಂತ್ರಕ್ಕೆ ರಷ್ಯದ ನೆರವನ್ನು ಪಡೆದು ಅಲ್ಲಿನ ಕೇಂದ್ರದಿಂದ ಆರ್ಯಭಟ ಉಪಗ್ರಹವನ್ನು ಕಕ್ಷೆಗೆ ಸೇರಿಸಿತು. ಇದರ ರೂವಾರಿ ಉಡುಪಿ ರಾಮಚಂದ್ರ ರಾವ್, ವಿಕ್ರಮ ಸಾರಾಭಾಯಿ ಅವರ ಕನಸುಗಳನ್ನು ವಾಸ್ತವತೆಗಿಳಿಸಿದ ಸಮರ್ಥ ವಿಜ್ಞಾನಿ. ೧೯೭೪ರಿಂದಲೂ ಭಾರತೀಯ ಉಪಗ್ರಹ ನಿರ್ಮಾಣದಲ್ಲಿ, ಸಂಶೋಧನೆಯಲ್ಲಿ ಯು.ಆರ್. ರಾವ್ ಪ್ರಮುಖ ಪಾತ್ರ ವಹಿಸಿ ಭಾರತದ ಮಟ್ಟಿಗೆ ಬಾಹ್ಯಾಕಾಶದ ಹೊಸ ಅಧ್ಯಾಯವನ್ನೇ ತೆರೆದರು.

ಆರ್ಯಭಟ ಉಪಗ್ರಹದ ನಂತರ ಪ್ರಾರಂಭಿಸಿದ ಭಾಸ್ಕರ ಉಪಗ್ರಹದ ಶ್ರೇಣಿ, ಭಾರತದ

ದೂರಸಂವೇದಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸಿತು. ಇದರ ಮುಖ್ಯಸ್ಥ ಕೂಡ ಕರ್ನಾಟಕದವರೇ ಆದ ಕಸ್ತೂರಿ ರಂಗನ್ ಅವರು. ೮೦ರ ದಶಕದಲ್ಲಿ ರೂಪಿಸಿದ ಇನ್ಸಾಟ್ ಉಪಗ್ರಹಗಳು ನಮ್ಮ ದೇಶದ ಶೈಕ್ಷಣಿಕ ಕಾರ್ಯಕ್ರಮದ ಪ್ರಸಾರ, ದೂರವಾಣಿ, ದೂರದರ್ಶನ ಕಾರ್ಯಕ್ರಮಗಳನ್ನು ಹಳ್ಳಿ ಹಳ್ಳಿಗೆ ಮುಟ್ಟಿಸುವುದರಲ್ಲಿ ಯಶಸ್ವಿಯಾಯಿತು. ಅಷ್ಟೇ ಅಲ್ಲ, ಪ್ರಕೃತಿ ವಿಕೋಪಗಳನ್ನು ಸಕಾಲದಲ್ಲಿ ಗುರುತಿಸಲು, ಹವಾಮಾನ ಮುನ್ಸೂಚನೆ ನೀಡುವಲ್ಲಿ ಇಂದಿಗೂ ಮಹತ್ತರ ಪಾತ್ರ ವಹಿಸುತ್ತಲೇ ಇದೆ. ೯೦ರ ದಶಕದ ಬಹುದೊಡ್ಡ ಬಾಹ್ಯಾಕಾಶ ಸಂಶೋಧನೆ ಎಂದರೆ ನಮ್ಮ ಉಪಗ್ರಹಗಳನ್ನು ಕಕ್ಷೆಗೆ ಸೇರಿಸಲು ನಮ್ಮದೇ ಆದ ರಾಕೆಟ್ ಬಳಕೆ. ದ್ರವರೂಪದ ಹೈಡ್ರೋಜನ್ ಮತ್ತು ಆಕ್ಸಿಜನ್ ಬಳಸಿ, ಸೂಕ್ತ ಕ್ರೈಯೋಜೆನಿಕ್ ಎಂಜಿನ್ನನ್ನು ವಿನ್ಯಾಸಗೊಳಿಸುವ ಕಾರ್ಯಕ್ರಮವನ್ನು ಬೆಂಗಳೂರಿನ ಇಸ್ರೋ ಕೇಂದ್ರ ಹಾಕಿಕೊಂಡು ಆ ನಿಟ್ಟಿನಲ್ಲಿ ಗಣನೀಯ ಪ್ರಗತಿ ಸಾಧಿಸಿದೆ. ಅಮೆರಿಕ ಈ ತಂತ್ರಜ್ಞಾನವನ್ನು ನಮಗೆ ನೀಡಲು ಹಿಂದೆ ಸರಿದುದನ್ನು ಇಲ್ಲಿ ಸ್ಮರಿಸಬಹುದು. ಇಸ್ರೋ ಸಂಸ್ಥೆಯ ಮುಂದಿನ ಬೆಳವಣಿಗೆ ಐ.ಆರ್.ಎಸ್. ಎಂಬ ಹೆಸರಿನ ದೂರಸಂವೇದಿ ಉಪಗ್ರಹಗಳು. ಬೆಳೆಯ ಅಂದಾಜು, ಕಾಡು ನಾಶದ ಪ್ರಮಾಣ, ಬಂಜರು ಭೂಮಿಯ ವಿಸ್ತೀರ್ಣ, ಕೃಷಿ ಯೋಗ್ಯ ಭೂಮಿಯ ಸಮೀಕ್ಷೆ, ನಗರ ಯೋಜನೆ ಹೀಗೆ ಹತ್ತು ಹಲವು ಕ್ಷೇತ್ರಗಳ ಮೌಲ್ಯಮಾಪನಕ್ಕೆ ಈ ಉಪಗ್ರಹಗಳು ತೆಗೆದಿರುವ ಛಾಯಾಚಿತ್ರಗಳೇ ಆಧಾರ.

ಸದ್ಯದ ಒಂದು ಅಂದಾಜಿನಂತೆ ಈಗಾಗಲೇ ಕಕ್ಷೆಯಲ್ಲಿ ಸುಮಾರು ಎರಡು ಸಾವಿರ ಉಪಗ್ರಹಗಳು ಭೂಮಿಯನ್ನು ಸುತ್ತುತ್ತಿವೆ. ಕೆಲವುದರ ಆಯುಷ್ಯ ಮುಗಿದಿದ್ದರೂ ಬಾಹ್ಯಾ ಕಾಶದ ಕಸವಾಗಿ ಅವು ಗಂಭೀರ ಸಮಸ್ಯೆಯನ್ನು ತಂದೊಡ್ಡಿವೆ. ಅಭಿವೃದ್ಧಿಶೀಲ ರಾಷ್ಟ್ರಗಳ ಪೈಕಿ ಅತಿ ಹೆಚ್ಚಿನ ದೂರಸಂವೇದಿ ಉಪಗ್ರಹಗಳನ್ನು ಕಕ್ಷೆಗೆ ಸೇರಿಸಿರುವುದರಲ್ಲಿ ಭಾರತವೇ ಎಲ್ಲ ದೇಶಗಳಿಗಿಂತ ಮುಂದು.

ಬಾಹ್ಯಾಕಾಶ ಯುಗದಲ್ಲಿ ಭಾರತದ ಪ್ರಗತಿ ಎಂದರೆ ಅನ್ಯಗ್ರಹಗಳ ಅನ್ವೇಷಣೆಯಲ್ಲ. ಈ ಗ್ರಹದಲ್ಲೇ ಇರುವ ನೂರು ಕೋಟಿ ಮಂದಿಗೆ ನೆರವಾಗಬಲ್ಲ ಸೌಲಭ್ಯಗಳನ್ನು ಒದಗಿಸು ವುದು. ಇದು ನಮ್ಮ ಆದ್ಯತೆ. ಸಂಪನ್ಮೂಲದ ನಿರ್ವಹಣೆ, ಶೈಕ್ಷಣಿಕ ಕ್ಷೇತ್ರದಲ್ಲಿ, ಕೃಷಿ ಕ್ಷೇತ್ರದಲ್ಲಿ ಉಪಗ್ರಹಗಳ ನೆರವು ಸಂಪರ್ಕ ಸಾಧನವಾಗಿ ನಮಗೆ ಸದ್ಯದಲ್ಲಿ ಅತ್ಯವಶ್ಯಕವಾದ ಮಾಹಿತಿ ಒದಗಿಸುತ್ತಿವೆ.

**ತಳಿ ವಿಜ್ಞಾನದ ಬೆಳವಣಿಗೆಗಳು**

ತಳಿ ವಿಜ್ಞಾನಕ್ಕೆ ತಳಹದಿ ಹಾಕಿದವನು ಆಸ್ಟ್ರಿಯಾದ ಪಾದ್ರಿ ಗ್ರಿಗೋರ್ ಮೆಂಡಲ್ (೧೮೬೦). ಬಟಾಣಿ ಗಿಡಗಳ ಮೇಲೆ ಮೆಂಡಲ್ ನಡೆಸಿದ ಪ್ರಯೋಗದಿಂದ ಆನುವಂಶಿಕವಾಗಿ ಕೆಲವು ಲಕ್ಷಣಗಳು ಪೀಳಿಗೆಯಿಂದ ಪೀಳಿಗೆಗೆ ವರ್ಗವಾಗುತ್ತವೆ ಎಂಬ ಸತ್ಯ ಬೆಳಕಿಗೆ ಬಂತು. ಈ ಅಂಶವೇ ಜೀನ್ ಎಂಬ ಹೆಸರಿನಿಂದ ಜೀವವಿಜ್ಞಾನ ಕ್ಷೇತ್ರದಲ್ಲಿ ಈಗ ಪರಿಚಿತವಾಗಿದೆ.

ತಳಿ ವಿಜ್ಞಾನದ ಕ್ರಾಂತಿಕಾರಕ ಬದಲಾವಣೆಗಳು ನಿಂತಿರುವುದು ಈ ಜೀನ್‌ಗಳ ಅಧ್ಯಯನದ ಮೇಲೆ. ಜೆನಿಟಿಕ್ ಇಂಜಿನೀಯರಿಂಗ್ ತಳಿ ವಿಜ್ಞಾನದಲ್ಲಿ ಏನೆಲ್ಲವನ್ನೂ ಸಾಧ್ಯ ಮಾಡಿದೆ. ಭ್ರೂಣಶಾಸ್ತ್ರದಿಂದ ಹಿಡಿದು ಜೀವ ರಸಾಯನ ಶಾಸ್ತ್ರದವರೆಗೆ ಇದು ತಂದಿರುವ ಬದಲಾವಣೆಗಳು ನೂರಾರು. ವೈದ್ಯಕೀಯ ಕ್ಷೇತ್ರ, ಕೃಷಿ ಕ್ಷೇತ್ರಗಳಲ್ಲಂತೂ ಜೆನೆಟಿಕ್ ಇಂಜಿನೀಯರಿಂಗ್ ಕೋಲಾಹಲವನ್ನೇ ಎಬ್ಬಿಸಿದೆ.

ನಮ್ಮ ಶರೀರದಲ್ಲಿ ಮೂರು ಟ್ರಿಲಿಯನ್ ಜೀವಕೋಶಗಳಿವೆ ಎಂದು ಅಂದಾಜು. ಪ್ರತಿ ಜೀವಕೋಶವೂ ಒಂದು ದೊಡ್ಡ ಪ್ರಪಂಚವೇ ಸರಿ. ಕೋಟೆಯೊಳಗಿನ ಕೋಟೆಯಂತೆ ಜೀವಕೋಶದ ಒಂದೊಂದು ಬಾಗಿಲನ್ನು ತೆರೆಯುತ್ತಾ ಹೋದರೆ ಅಲ್ಲಿ ನಮಗೆ ವಿರಾಟ್ ರೂಪವೇ ಎದುರಾಗುತ್ತದೆ. ಜೀವಕೋಶದ ಕೇಂದ್ರದಲ್ಲಿರುವ ನ್ಯೂಕ್ಲಿಯಸ್‌ನಲ್ಲಿ ೨೩ ಜೋಡಿ ವರ್ಣತಂತುಗಳಿವೆ (ಕ್ರೋಮೋಸೋಮ್ಸ್). ಸೂಕ್ಷ್ಮದರ್ಶಕದಲ್ಲಿ ವೀಕ್ಷಿಸಿದಾಗ ಇವು xx ರೂಪದಲ್ಲಿ ಕಾಣುತ್ತವೆ. ಇವುಗಳು ಒಳಗೆ ಏಣಿಯನ್ನು ತಿರುಚಿದಂತೆ ಅಥವಾ ಹಾವು ತೆಕ್ಕೆ ಹಾಕಿಕೊಂಡಂತೆ ಕಾಣುವ ಪಾವಟಿಗೆಗಳೇ ಜೀನುಗಳು. ಈ ಒಂದೊಂದು ಜೀನುಗಳೂ ಡಿ.ಎನ್.ಎ. ಎಂಬ ರಾಸಾಯನಿಕದ ತುಣುಕುಗಳು ಎಂಬುದು ಈಗ ಪತ್ತೆಯಾಗಿದೆ. ತಳಿ ವಿಜ್ಞಾನಿಗಳಿಗೆ ಜೀನ್‌ಗಳೇ ಸರ್ವಸ್ವ. ಜೀವಿಯ ಆರೋಗ್ಯ, ಅನಾರೋಗ್ಯದ ಚರಿತ್ರೆಯನ್ನೇ ಈ ಜೀನ್‌ಗಳು ಬರೆದಿಟ್ಟಿರುತ್ತವೆ. ಇದನ್ನೇ ಬಹುಶಃ ಬ್ರಹ್ಮಸೂತ್ರ ಎನ್ನಬಹುದೇನೋ. ನಮ್ಮ ಆರೋಗ್ಯದ ಏನೆಲ್ಲ ಏರುಪೇರಿಗೆ ಅಂಧತ್ವದಿಂದ ಹಿಡಿದು ಏಡ್ಸ್ ವರೆಗೆ, ಕ್ಯಾನ್ಸರಿನಿಂದ ಹಿಡಿದು ಕರುಳುಬೇನೆಯವರೆಗೆ, ಇಚ್ಛಿತ ಮನೋರೋಗದಿಂದ ಹಿಡಿದು ಅನಪೇಕ್ಷಿತ ಮರೆವಿನ ಖಾಯಿಲೆಯವರೆಗೆ ಎಲ್ಲವನ್ನೂ ಜೀನ್‌ಗಳೇ ನಿಯಂತ್ರಿಸುತ್ತವೆ. ಇವು ಕೋಶ ವಿಭಜನೆಯ ಮೂಲಕ ವಂಶದಿಂದ ವಂಶಕ್ಕೆ ರವಾನೆಯಾಗುವುದರಿಂದ ಇವು ವಂಶವಾಹಿ. ವ್ಯಕ್ತಿಯ ಪ್ರತಿಭೆಯನ್ನೋ ಅಥವಾ ಖಾಯಿಲೆಯನ್ನೋ ಅನುವಂಶಿಕವಾಗಿ ಇವು ವರ್ಗಾಯಿಸುತ್ತವೆ.

ಜರ್ಮನಿ, ಅಮೆರಿಕ, ಫ್ರಾನ್ಸ್, ಜಪಾನ್ ಮುಂತಾದ ದೇಶಗಳು ಒಟ್ಟಿಗೇ ಕೂಡಿ ಮನುಷ್ಯನ ಜೀನ್‌ಗಳ ಎಣಿಕೆ ನಡೆಸಲು ಜೀನೋಮ್ ಪ್ರಾಜೆಕ್ಟ್ ಎಂಬ ವಂಶವಾಹಿಯ ಮಹಾ ಯೋಜಣೆಯನ್ನೇ ಪ್ರಾರಂಭಿಸಿವೆ. ಚಂದ್ರನ ಮೇಲಿನ ಎಲ್ಲ ಲಕ್ಷಣಗಳನ್ನೂ ನಕ್ಷೆ ಮಾಡುವುದಕ್ಕಿಂತ ಕಷ್ಟ ನಮ್ಮೊಳಗಿನ ಜೀನ್‌ಗಳ ನಕ್ಷೆ ತಯಾರಿಕೆ ಎನ್ನುತ್ತಾರೆ ಈ ಯೋಜನೆಯಲ್ಲಿ ತೊಡಗಿರುವ ಜೀವವಿಜ್ಞಾನಿಗಳು. ಇದೀಗ ಇಪ್ಪತ್ತೆರಡನೇ ವರ್ಣತಂತುವಿನ ಬಂಡವಾಳ ಬಯಲು ಮಾಡಿದ್ದಾರೆ. ಇದಕ್ಕಾಗಿ ಸತತ ಹತ್ತು ವರ್ಷಗಳು ಅಹೋರಾತ್ರಿ ಶ್ರಮಿಸಿದ್ದಾರೆ. ಮನುಷ್ಯನ ವರ್ಣ ತಂತುವಿನಲ್ಲಿ ೨೨ನೇ ವರ್ಣ ತಂತುವೇ ಅತಿ ಚಿಕ್ಕದು ಎನ್ನಲಾಗಿದೆ. ಇದರಲ್ಲಿರುವ ಪಾವಟಿಗೆಗಳ ಸಂಖ್ಯೆ ಎಂದರೆ ಜೀನ್‌ಗಳ ಸಂಖ್ಯೆ ೪.೭ ಕೋಟಿ. ಐವತ್ತು ವರ್ಷಗಳ ಕಾಲ. ಇದರ ಅಧ್ಯಯನ ಮಾಡಲು ಹೊರಟಿರುವ ಜೀವ ವಿಜ್ಞಾನಿಗಳು ಕ್ರಿ.ಶ. ೨೦೧೦ರ ವೇಳೆಗೆ ಎಲ್ಲ ವರ್ಣ ತಂತುಗಳಲ್ಲಿ ಅಡಗಿ ಕುಳಿತಿರುವ ಮುನ್ನೂರೈವತ್ತು

ಕೋಟಿ ಜೀನುಗಳ ನಕ್ಷೆ ತಯಾರಿಸುವ ಭರವಸೆ ಹೊಂದಿದ್ದಾರೆ. ಯಾವ ಜೀನ್ ಯಾವ ರೋಗಕಾರಕ ಎಂಬುದು ಪತ್ತೆಯಾದರೆ ವಂಶದಿಂದ ವಂಶಕ್ಕೆ ರವಾನೆಯಾಗಿ ಬದುಕನ್ನೇ ಕಾಡುವ ಭೀಕರ ರೋಗಗಳಿಗೆ ಕಡಿವಾಣ ಹಾಕಲು ಸಾಧ್ಯ.

ಜೆನೆಟಿಕ್ ಇಂಜಿನೀಯರಿಂಗ್ ಈಗ ಮನುಷ್ಯನ ಗುಣಗಳನ್ನೇ ಬದಲಾಯಿಸಬಲ್ಲ ಅಭೂತಪೂರ್ವ ಮುನ್ನಡೆಯನ್ನು ಸಾಧಿಸುತ್ತಿದೆ. ಈಗಾಗಲೇ ತಾಯ ಕೆಚ್ಚಲಿನ ಒಂದೇ ಒಂದು ಕೋಶ ಬಳಸಿ ಡಾಲಿ ಕುರಿಮರಿಯನ್ನು ಪಡೆದಿರುವುದು ಜೆನೆಟಿಕ್ ತಂತ್ರಜ್ಞಾನದಲ್ಲೇ ಕ್ರಾಂತಿ ತಂದಿದೆ. ಲೈಂಗಿಕ ಸಂಪರ್ಕವಿಲ್ಲದೆ ಜೀವಿಗಳನ್ನು ಸೃಷ್ಟಿಸುವ ಈ ತಂತ್ರಜ್ಞಾನ ಯಾವ ದಿಕ್ಕು ಹಿಡಿಯುತ್ತದೋ ಅದು ಇನ್ನೂ ಅನಿಶ್ಚಿತ. ಜೆನೆಟಿಕ್ ತಂತ್ರಜ್ಞಾನದ ಪ್ರಗತಿಯಲ್ಲೂ ಸಾಕಷ್ಟು ಪೈಪೋಟಿ ಇದೆ. ವರ್ಣ ತಂತುಗಳ ಒಳ ಪ್ರಪಂಚದ ರಹಸ್ಯವನ್ನು ರಹಸ್ಯವಾಗಿಯೇ ಇಡಲು ಅನೇಕ ಔಷಧಿ ಕಂಪನಿಗಳು ಪ್ರಯತ್ನಿಸುತ್ತಿವೆ. ಇಂಥ ಹೈಟೆಕ್ ಅಧ್ಯಯನ ಕೇವಲ ಶ್ರೀಮಂತ ರಾಷ್ಟ್ರಗಳ ಸ್ವತ್ತಾದರೆ ವಿಜ್ಞಾನ ತನ್ನ ಮೂಲ ಅರ್ಥವನ್ನೇ ಕಳೆದುಕೊಳ್ಳುತ್ತದೆ ಎಂಬ ಧ್ವನಿಯೂ ಕೇಳಿಬರುತ್ತಿದೆ. ಜೀನ್‌ಗಳ ಮಾರ್ಪಾಟಿನಿಂದ ಸಮಾಜಘಾತಕ ವ್ಯಕ್ತಿಗಳೇ ಹುಟ್ಟುವುದಾದರೆ ಅಂಥ ತಂತ್ರಜ್ಞಾನ ನಮಗೆ ಏಕೆ ಬೇಕು ಎಂದು ಸ್ವತಃ ಜೀವವಿಜ್ಞಾನಿಗಳೇ ಕೇಳುತ್ತಿದ್ದಾರೆ. ತದ್ರೂಪು ಮಾನವನ ಸೃಷ್ಟಿಗೆ ಬಹುದಿನ ಕಾಯಬೇಕಾಗಿಲ್ಲ. ಮುಂದಿನ ಇಪ್ಪತ್ತೈದು ವರ್ಷಗಳಲ್ಲಿ ಅದೂ ಸಾಧ್ಯ ಎನ್ನುತ್ತಿದ್ದಾರೆ ಜೀವವಿಜ್ಞಾನಿಗಳು. ಡಿ.ಎನ್.ಎ. ತಂತ್ರಜ್ಞಾನ ಬಳಸಿ ಮಗುವಿನ ಅಪ್ಪ ಯಾರು ಎಂದು ಖಚಿತವಾಗಿ ನಿರ್ಧರಿಸುವುದು ಈಗ ಸಾಧ್ಯವಾಗಿದೆ.

ಕೃಷಿ ಕ್ಷೇತ್ರದಲ್ಲಿನ ಜೆನೆಟಿಕ್ ಇಂಜಿನೀಯರಿಂಗ್ ಮತ್ತೊಂದು ಬಗೆಯ ಪ್ರಗತಿ ಸಾಧಿಸಿದೆ. ಸಂಕರ ತಳಿಗಳ ಉತ್ಪಾದನೆಗೆ ಇದೇ ಮೂಲಾಧಾರ. ವೈರಸ್ ನಿರೋಧಕ ಬೆಳೆಗಳು, ವೈದ್ಯಕೀಯ ಮಹತ್ವವುಳ್ಳ ಪ್ರೋಟೀನ್ ತಯಾರಿಕೆ, ಇಳುವರಿ ಕೊಡುವ ಫಸಲುಗಳು, ಜೀವತಂತ್ರ ಜ್ಞಾನದ ಕೊಡುಗೆ. ಆದರೆ ಇಂಥ ಬೆಳವಣಿಗೆಗೂ ಇನ್ನೊಂದು ಮುಖವಿದೆ. ಅದು ಸ್ವಾಮ್ಯ ಎಂದರೆ ಪೇಟೆಂಟ್ ಕುರಿತ ಸಮಸ್ಯೆಗಳು. ಪೇಟೆಂಟ್ ಯಾರಿಗೆ ವರ? ಯಾರಿಗೆ ಶಾಪ ಎನ್ನುವುದರ ಬಗ್ಗೆ ದೀರ್ಘ ಚರ್ಚೆಯಾಗುತ್ತಿದೆ. ಈ ಕ್ಷೇತ್ರದಲ್ಲಿ ಭಾರತ ಎದುರಿಸಿದ ಒಂದೆರಡು ಸಮಸ್ಯೆಗಳ ಪ್ರಸ್ತಾಪ ಉಚಿತವೆನ್ನಿಸುತ್ತಿದೆ.

ಭಾರತದ ಹಿಮಾಲಯದ ತಪ್ಪಲಲ್ಲಿ ಹಾಗೂ ಪಾಕಿಸ್ತಾನದ ಕೆಲವು ಭಾಗಗಳಲ್ಲಿ ಬೆಳೆಯುವ ಬಾಸುಮತಿ ಅಕ್ಕಿ ಅದರ ಪರಿಮಳದಿಂದ, ಉದ್ದನೆಯ ಗಾತ್ರದಿಂದಾಗಿ ರಾಷ್ಟ್ರದಲ್ಲಷ್ಟೇ ಅಲ್ಲ, ಅಂತಾರಾಷ್ಟ್ರೀಯ ಮಟ್ಟದಲ್ಲೂ ಖ್ಯಾತಿ ಪಡೆದಿವೆ. ಬಾಸುಮತಿ ಅಕ್ಕಿಯ ರಫ್ತಿನಿಂದ ಭಾರತ ವಾರ್ಷಿಕ ೬೦೦ ಕೋಟಿ ರೂಪಾಯಿ ವಿದೇಶೀ ವಿನಿಮಯ ಗಳಿಸುತ್ತಿದೆ. ಆಮದು ಮಾಡಿಕೊಳ್ಳುತ್ತಿರುವ ರಾಷ್ಟ್ರಗಳಲ್ಲಿ ಅಮೆರಿಕ ಮತ್ತು ಕೊಲ್ಲಿ ರಾಷ್ಟ್ರಗಳೂ ಸೇರಿವೆ. ೧೯೯೭ರಲ್ಲಿ ಅಮೆರಿಕದ ರೈಸಟೆಕ್ ಎಂಬ ಸಂಸ್ಥೆ ಈ ಅಕ್ಕಿಗೆ ವಿಶಿಷ್ಟ ಗುಣಲಕ್ಷಣಗಳನ್ನು ನೀಡಿರುವುದಾಗಿ,

ಅದರ ಪಿಷ್ಟದ ಅಂಶ ಕಡಿಮೆ ಮಾಡಿರುವುದಾಗಿಯೂ, ಅದು ಒಡೆಯುವುದಿಲ್ಲವೆಂದೂ, ಇನ್ನೂ ೨೦ ಗುಣಗಳನ್ನು ಪಟ್ಟಿಮಾಡಿ ಬಾಸುಮತಿ ಅಕ್ಕಿಯ ಸ್ವಾಮ್ಯ ಪಡೆಯುವುದರಲ್ಲಿ ಯಶಸ್ಸು ಗಳಿಸಿತು. ಪೇಟೆಂಟ್ ಪಡೆಯಲು ಎಲ್ಲ ಕರಾರುಗಳನ್ನೂ ಅದು ಪಾಲಿಸಿತ್ತು. ಮೂಲತಃ ಅದು ಬಳಸಿದ್ದು ನಮ್ಮ ಬಾಸುಮತಿ ಅಕ್ಕಿಯನ್ನು. ಅಮೆರಿಕದ ಬಾಸುಮತಿ ಎಂಬ ಹೆಸರಲ್ಲಿ ಅದು ವಹಿವಾಟು ನಿರ್ವಹಿಸುವುದಾದರೆ ನಮ್ಮ ದೇಶದ ಗತಿ? ಉಪಾಯವೆಂದರೆ ಕಟಕಟೆಗೆ ಎಳೆಯಬೇಕು, ಅಕ್ಕಿಯ ಡಿ.ಎನ್.ಎ. ಅಧ್ಯಯನ ಮಾಡಿ ಹೊಸ ಅಂಶ ಸೇರಿಸಿಲ್ಲವೆಂದು ಸಾಬೀತು ಮಾಡಿಸಬೇಕು. ಇದರ ಅರ್ಥ ಸತತ ಹೋರಾಡಬೇಕು. ನಮ್ಮ ಅವಜ್ಞೆಯಿಂದ ನಾವು ತೆರಬೇಕಾದ ಬೆಲೆ ಅಪಾರ.

ಇಂಥದೇ ಅಪಚಾರ ನಮ್ಮ ಅರಿಶಿನಕ್ಕೂ ಆಗಿದೆ. ಮಿಚಿಗನ್ ವಿಶ್ವವಿದ್ಯಾಲಯದ ವೈದ್ಯಕೀಯ ಕೇಂದ್ರವೊಂದು ಅರಿಶಿನದಲ್ಲಿ ಹೊಸ ವೈದ್ಯಕೀಯ ಗುಣವನ್ನು ಪತ್ತೆ ಮಾಡಿರುವುದಾಗಿ ಅಮೆರಿಕದಲ್ಲಿ ಪೇಟೆಂಟ್ ಪಡದೇ ಬಿಟ್ಟಿತು. ಭಾರತದಲ್ಲಿ ಅರಿಶಿನ ಕುಂಕುಮ ತಲತಲಾಂತರದಿಂದ ಮಂಗಳದ್ರವ್ಯಗಳೆಂದೇ ಖ್ಯಾತಿ ಪಡೆದಿವೆ. ಇದರ ಇತಿಹಾಸವನ್ನು ಬಿಚ್ಚಿ, ಸಹಸ್ರಾರು ವರ್ಷಗಳಿಂದ ಭಾರತದ ಗ್ರಾಮೀಣ ಜನರಿಗೂ ಇದರ ಔಷಧೀಯ ಗುಣಗಳ ಪರಿಚಯವಿದೆ ಎಂದು ಆಧಾರ ಸಹಿತ ಸಿ.ಎಸ್.ಐ.ಆರ್. ಸಂಸ್ಥೆ ಸಕಾಲದಲ್ಲಿ ಎಚ್ಚರಿಕೆ ವಹಿಸಿ ವಾದಿಸಿದ್ದರಿಂದ ಅರಿಶಿನದ ಸೌಭಾಗ್ಯ ನಮ್ಮಲ್ಲೇ ಉಳಿಯಿತು.

ಬೇವಿನ ಮರ ಔಷಧೀಯ ಗುಣ ವಿಶೇಷವಾಗಿ ಅದು ಕ್ರಿಮಿನಾಶಕ ಎಂಬುದು ಅನಕ್ಷರಸ್ಥರಿಗೂ ಗೊತ್ತು. ಹಳ್ಳಿಗಳಲ್ಲಿ ಈಗಲೂ ಹಲ್ಲು ತಿಕ್ಕಿಕೊಳ್ಳಲು ಬೇವಿನ ಕಡ್ಡಿಗಳನ್ನು ಬಳಸುವ ಪರಿಪಾಟ ನಮ್ಮಲ್ಲಿ ಉಂಟು. ಕ್ರಿ.ಶ. ೧೯೮೫ರಿಂದ ೧೯೯೫ರವರೆಗೆ ಅಮೆರಿಕ ಯೂರೋಪುಗಳಲ್ಲಿ ಬೇವಿನ ಮರದ ವಿವಿಧ ಉತ್ಪನ್ನಗಳನ್ನು ಕುರಿತು ದೊಡ್ಡ ಪ್ರಮಾಣದ ಸಂಶೋಧನೆಗಳಾಗಿವೆ. ಈ ಅವಧಿಯಲ್ಲಿ ಬೇವಿನ ಉತ್ಪನ್ನಗಳಿಗಾಗಿ ವಿದೇಶಗಳು ೩೬ ಪೇಟೆಂಟ್ ಪಡೆದವು. ಅಮೆರಿಕರ ಒಂದು ರಾಷ್ಟ್ರೀಯ ಕಂಪನಿ ೨೨ ಪೇಟೆಂಟನ್ನು ಪಡೆಯಿತು. ಶಿಲೀಂಧ್ರದ ನಾಶಕ, ಕೀಟನಾಶಕ, ಸಂತಾನ ನಿಯಂತ್ರಣಕ್ಕೆ, ಖಾದ್ಯತೈಲ ಹೀಗೆ ಬೇವಿನ ಉತ್ಪನ್ನಗಳಿಗೆ ದೊರೆತಿರುವ ಪೇಟೆಂಟ್‌ಗಳಲ್ಲಿ ವೈವಿಧ್ಯವಿದೆ. ಸಾವಿರಾರು ವರ್ಷಗಳಿಂದ ಭಾರತೀಯರು ಬಳಸುತ್ತಿರುವ ಬೇವು ನಮ್ಮ ಕೈಬಿಟ್ಟು ಹೋಗುವ ಪರಿಸ್ಥಿತಿಯಲ್ಲಿತ್ತು. ಇದಕ್ಕೆ ಕಾರಣವಿಷ್ಟೇ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಪೇಟೆಂಟ್ ಪಡೆಯುವ ಪ್ರಯತ್ನಗಳು ನಮ್ಮಲ್ಲಾದದ್ದು ಅತಿ ವಿರಳ. ಊರೆಲ್ಲ ಕೊಳ್ಳೆ ಹೊಡೆದ ನಂತರ ದಿಡ್ಡಿ ಬಾಗಿಲು ಮುಚ್ಚುವ ಬುದ್ಧಿವಂತಿಕೆ. ಹೊಸ ಸಸ್ಯಗಳ ತಳಿಗಳ ಅಭಿವೃದ್ಧಿ ಕುರಿತು ಜಗತ್ತಿಗೆ ನಾವು ಹೇಗೆ ಮನದಟ್ಟು ಮಾಡಿಕೊಡಬೇಕು ಎಂಬುದನ್ನು ಕುರಿತೇ ಈಗ ಮದ್ರಾಸಿನ ಸ್ವಾಮಿನಾಥನ್ ಸಂಶೋಧನಾ ಪ್ರತಿಷ್ಠಾನ ಕೆಲವು ಕರಡನ್ನು ಸಿದ್ಧಪಡಿಸುತ್ತಿದೆ.

ನಮ್ಮ ಜೈವಿಕ ವೈವಿಧ್ಯದ ಬಗ್ಗೆ ತಪಶೀಲು ಮಾಹಿತಿ ನಮಗೆ ಬೇಕಾಗಿದೆ. ಹಿತ್ತಲ ಗಿಡ ಮದ್ದು ಎಂಬುದನ್ನು ವಿದೇಶೀ ಕಂಪನಿಗಳು ಅವುಗಳನ್ನು ಕೊಳ್ಳೆ ಹೊಡೆದ ಮೇಲಷ್ಟೇ

ನಾವು ನಂಬುತ್ತೇವೆ. ಜೈವಿಕ ವೈವಿಧ್ಯವೆಂದರೆ ನಮ್ಮಲ್ಲೇ ಅವಜ್ಞೆಗೊಳಗಾಗಿರುವ ಆದರೆ ಅತ್ಯಮೂಲ್ಯ ಜೀವ ಸಂಪನ್ಮೂಲ, ನಮ್ಮ ಸುತ್ತಲಿನ ಸಸ್ಯ ಸಂಪನ್ಮೂಲ, ಆ ನೆಲದ ಸ್ವರೂಪ ಮುಂತಾದವುಗಳು. ಇದನ್ನು ತಯಾರಿಸಲು ಸಮಾಜದ ಎಲ್ಲ ವರ್ಗಗಳ ಜನರ ನೆರವು ಬೇಕಾಗುತ್ತದೆ. ತಜ್ಞರು, ವಿಜ್ಞಾನಿಗಳು, ವಿದ್ಯಾರ್ಥಿಗಳು, ಸ್ಥಳೀಯರ ನೆರವಿನೊಂದಿಗೆ ಮೂಲಭೂತ ಮಾಹಿತಿ ತಯಾರಿಯಲ್ಲಿ ನೆರವು ನೀಡಬೇಕಾಗುತ್ತದೆ. ಈ ಕೆಲಸವನ್ನು ಈಗಾಗಲೇ ಬೆಂಗಳೂರಿನ ವಿಜ್ಞಾನ ಮಂದಿರದ ಪರಿಸರ ವಿಜ್ಞಾನದ ಪ್ರೊ. ಮಾಧವ ಗಾಡ್ಗೀಲ್ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದ ಬಳಿಯ ಮಾಳಾ ಎಂಬ ಗ್ರಾಮದಲ್ಲಿ ಪ್ರಾರಂಭಿಸಿದ್ದಾರೆ. ಅದಕ್ಕಾಗಿಯೇ ಜೀವಿ ವೈವಿಧ್ಯದ ರಿಜಿಸ್ಟರ್ ತೆಗೆದಿದ್ದಾರೆ. ಇದರಲ್ಲಿ ಕೃಷಿಕರು, ಮೀನುಗಾರರು, ಆದಿವಾಸಿಗಳು, ವೈದ್ಯರು, ಅರಣ್ಯ ಇಲಾಖೆಯವರು ವಿದ್ಯಾರ್ಥಿಗಳು ಸಕ್ರಿಯವಾಗಿ ಪಾಲ್ಗೊಂಡು ನಮ್ಮ ಸುತ್ತಲ ಪರಿಸರದ ಬಗ್ಗೆ ವಿಶೇಷವಾಗಿ ಜೀವಿ ವೈವಿಧ್ಯದ ಬಗ್ಗೆ ಜಾಗೃತಿ ಮೂಡಿಸುತ್ತಿದ್ದಾರೆ. ಇಂತಹ ಯೋಜನೆಗಳು ಕಾರ್ಯರೂಪಕ್ಕೆ ಬರದೆ ಹೋದರೆ ನಾವು ನಮ್ಮ ಅಮೂಲ್ಯ ಜೀವಿ ವೈವಿಧ್ಯವನ್ನು ಬಹು ರಾಷ್ಟ್ರೀಯ ಕಂಪನಿಯ ಕೈಗೆ ನೀಡಿ ಅನಂತರ ಪರಿತಪಿಸುವ ಪರಿಸ್ಥಿತಿ ಎದುರಾಗುತ್ತದೆ.

## ಮಾಹಿತಿ ತಂತ್ರಜ್ಞಾನದ ಮಾಯಾಜಾಲ

ತಂತ್ರಜ್ಞಾನದ ಬಿರುಗಾಳಿ ಎಂದಿಗಿಂತ ಇಂದು ಅತಿ ಜೋರಾಗಿಯೇ ಬೀಸುತ್ತಿದೆ. ಅದರಲ್ಲೂ ಮಾಹಿತಿ ತಂತ್ರಜ್ಞಾನ ತಂದಿರುವ ದಿಢೀರ್ ಬದಲಾವಣೆಗಳು ನೂರಾರು. ಕಂಪ್ಯೂಟರ್ ತಂತ್ರಜ್ಞಾನದ ಫಲವಾಗಿ ಕುಳಿತಲ್ಲೇ ಮೌಸ್ ಕ್ಲಿಕ್ ಮಾಡಿ ಜಗತ್ತಿನ ಎಲ್ಲ ಆಗುಹೋಗುಗಳನ್ನು ಕ್ಷಣಮಾತ್ರದಲ್ಲೇ ಕಣ್ಣುಮುಂದೆ ಮೂಡಿಸುವ ಇಂಟರ್‌ನೆಟ್ ಸೌಲಭ್ಯ ನಮ್ಮೆದುರಿಗಿದೆ. ಇ-ಮೇಲ್ ಸೌಲಭ್ಯ ನಮ್ಮ ಸಂಪರ್ಕ ಸಾಧನವಾಗಿ ಜಗತ್ತನ್ನೇ ಕಿರಿದು ಮಾಡುತ್ತಿದೆ. ಪ್ರಾರಂಭದಲ್ಲಿ ಕೇವಲ ಸಂಕಲನ ಯಂತ್ರವಾಗಿ ಹುಟ್ಟಿಕೊಂಡ ಕ್ಯಾಲ್ಕ್ಯುಲೇಟರ್ ಈಗ ಸುಧಾರಣೆಯಾಗಿ ಸೂಪರ್ ಕಂಪ್ಯೂಟರ್ ಯುಗ ಪ್ರವೇಶಿಸಿದೆ. ಈ ಶತಮಾನದ ಮಧ್ಯ ಭಾಗದಲ್ಲಿ ಪ್ರಥಮ ಪೀಳಿಗೆಯ ಕಂಪ್ಯೂಟರ್‌ಗಳು ಮಾರುಕಟ್ಟೆಗೆ ಬಂದವು. ಟ್ರಾನ್ಸಿಸ್ಟರ್‌ಗಳ ಅಭಿವೃದ್ಧಿಯಾದಂತೆ ೬೦-೭೦ರ ದಶಕದಲ್ಲಿ ಎರಡನೇ ಪೀಳಿಗೆಯ ಕಂಪ್ಯೂಟರ್‌ಗಳು ಬಂದವು. ಈಗ ಭಾರತವೂ ಸೂಪರ್ ಕಂಪ್ಯೂಟರ್ ರೂಪಿಸುವಲ್ಲಿ ಸಫಲವಾಗಿದೆ. ಸೆಕೆಂಡಿಗೆ ೫೦೦೦ ಕೋಟಿಗೂ ಹೆಚ್ಚಿನ ಸೂಚನೆಗಳನ್ನು ಇವು ನಿರ್ವಹಿಸಬಲ್ಲವು. ಸೂಪರ್ ಕಂಪ್ಯೂಟರ್‌ಗಳನ್ನು ಪಡೆದಿರುವ ಕೆಲವೇ ರಾಷ್ಟ್ರಗಳಲ್ಲಿ ಭಾರತವೂ ಒಂದು. ಪುಣೆಯ ಸಿ-ಡಾಕ್ ಕಂಪನಿ(ಸೆಂಟರ್ ಫಾರ್ ಡೆವೆಲಪ್‌ಮೆಂಟ್ ಆಫ್ ಆಡ್ವಾನ್ಸ್‌ಡ್ ಕಂಪ್ಯೂಟರ್) ಪರಮ್ 'ಸೂಪರ್ ಕಂಪ್ಯೂಟರ್'ನ್ನು ನಿರ್ಮಿಸಿದೆ. ಅಮೆರಿಕ ಈಗ್ಗೆ ಹತ್ತು ವರ್ಷಗಳಲ್ಲಿ 'ಕ್ರೇ ಸೂಪರ್ ಕಂಪ್ಯೂಟರ್' ಎಂಬ ಸೂಪರ್ ಕಂಪ್ಯೂಟರನ್ನು ನಮಗೆ ಕೊಡಲು ನಿರಾಕರಿಸಿತ್ತು. ಪರಮಾಣು ಅಸ್ತ್ರಗಳ ತಯಾರಿಕೆಗೆ ನೆರವಾಗಲು ಸೂಪರ್ ಕಂಪ್ಯೂಟರ್ ಬಳಸಬಹುದೆಂಬ ಶಂಕೆ

ಅಮೆರಿಕವನ್ನು ಕಾಡಿತ್ತು. ನಮ್ಮ ತಂತ್ರಜ್ಞರು ಇದನ್ನು ಸವಾಲಾಗಿ ಸ್ವೀಕರಿಸಿ ಕಳೆದ ವರ್ಷವಷ್ಟೇ ಪರಮ್ ಕಂಪ್ಯೂಟರನ್ನು ರೂಪಿಸಿದ್ದಾರೆ. ಈ ವರೆಗೆ ಸಿ-ಡಾಟ್ ಸಂಸ್ಥೆ ೩೫ ಸೂಪರ್ ಕಂಪ್ಯೂಟರನ್ನು ನಿರ್ಮಿಸಿದೆ. ಪರಮ್ ೧೦,೦೦೦, ಕಳೆದ ವರ್ಷದ ಮಾರ್ಚ್ ತಿಂಗಳಲ್ಲಿ ಬಿಡುಗಡೆಯಾಯಿತು. ಒಂದು ಸೆಕೆಂಡಿಗೆ ಟ್ರಿಲಿಯನ್ ಸೂಚನೆಗಳನ್ನು ನಿರ್ವಹಿಸಬಲ್ಲದು (ಟ್ರಿಲಿಯನ್ ಎಂದರೆ ೧೦೦,೦೦೦,೦೦೦,೦೦೦,). ಸದ್ಯದಲ್ಲಿ ಈ ತಂತ್ರಜ್ಞಾನ ಪಡೆದಿರುವ ರಾಷ್ಟ್ರಗಳು ಜಪಾನ್ ಮತ್ತು ಅಮೆರಿಕ ದೇಶಗಳು ಮಾತ್ರ.

ಭಾರತದಲ್ಲಿ ಕಂಪ್ಯೂಟರ್ ಕುರಿತ ಸಮಗ್ರ ಬೆಳವಣಿಗೆಗೆ ಕಾರಣರಾದವರು ಕರ್ನಾಟಕದ ನರಸಿಂಹಯ್ಯ ಶೇಷಗಿರಿ ಅವರು. ಪ್ರಧಾನಿ ಇಂದಿರಾ ಗಾಂಧಿಯವರ ಅಭಿಲಾಷೆಯಂತೆ ರಾಜೀವ್ ಗಾಂಧಿಯವರಿಗೆ ಕಂಪ್ಯೂಟರ್ ತಂತ್ರಜ್ಞಾನದ ತಿಳಿವಳಿಕೆ ನೀಡಿದವರು ಇವರೇ. ಈಗ ಈ ವ್ಯಕ್ತಿ ಮಾಹಿತಿ ತಂತ್ರಜ್ಞಾನಕ್ಕೆ ಮತ್ತೊಂದು ಹೆಸರು ಎನ್ನುವಷ್ಟು ಖ್ಯಾತರು. ರಾಷ್ಟ್ರಮಟ್ಟದಲ್ಲಿ ೧೯೭೦ರಲ್ಲಿ ರಾಷ್ಟ್ರೀಯ ಮಾಹಿತಿ ಕೇಂದ್ರ(ಎನ್.ಐ.ಸಿ.) ಸ್ಥಾಪಿಸಿ ಕಂಪ್ಯೂಟರ್ ತಂತ್ರಜ್ಞಾನದ ಬಗ್ಗೆ ನೀತಿಯೊಂದನ್ನು ರೂಪಿಸಿ ಸರ್ಕಾರೀ ಸಂಸ್ಥೆಗಳು ಮಾಹಿತಿ ತಂತ್ರಜ್ಞಾನವನ್ನು ಹೇಗೆ ಹಂಚಿಕೊಳ್ಳಬೇಕು ಎಂಬ ಯೋಜನೆಯನ್ನು ರೂಪಿಸಿದರು. ಶೇಷಗಿರಿ ಅವರ ಅಪ್ರತಿಮ ಸಾಧನೆ ಈಗ ಅವರನ್ನು ವಿದೇಶದಲ್ಲೂ ಪರಿಚಿತ ವ್ಯಕ್ತಿ ಎಂಬ ಹಂತಕ್ಕೆ ಕೊಂಡೊಯ್ದಿದೆ. ಮುಂಬರುವ ಲಾಸ್ ಏಂಜಲೀಸ್‌ನಲ್ಲಿ ನಡೆಯಲಿರುವ ಒಲಿಂಪಿಕ್ ಕ್ರೀಡೆಗೆ ಮಾಹಿತಿ ತಂತ್ರಜ್ಞಾನದ ವ್ಯವಸ್ಥೆ ಕಲ್ಪಿಸಲು ಅವರನ್ನೇ ಕೇಳಿಕೊಂಡಿರುವುದು ಕರ್ನಾಟಕಕ್ಕಷ್ಟೇ ಅಲ್ಲ, ರಾಷ್ಟ್ರಕ್ಕೇ ಹೆಮ್ಮೆಯ ವಿಚಾರ. ಈ ಕ್ಷೇತ್ರದ ಸಾಧನೆಗಾಗಿ ಅವರಿಗೆ ರಾಷ್ಟ್ರಮಟ್ಟದ ಪ್ರಶಸ್ತಿ ಈಗಾಗಲೇ ದೊರೆತಿದೆ.

ಬೆಂಗಳೂರು ಸಿಲಿಕಾನ್ ಸಿಟಿ ಎಂಬ ಹೆಸರು ಗಳಿಸಿರುವುದು ಉತ್ಪ್ರೇಕ್ಷೆಯೇನಲ್ಲ. ೧೯೯೧-೯೨ರಲ್ಲಿ ಇಲ್ಲಿದ್ದ ಸಾಫ್ಟ್‌ವೇರ್ ಕಂಪನಿಗಳು ಕೇವಲ ೧೩. ಈಗ ಅವುಗಳ ಸಂಖ್ಯೆ ೭೫೫ಕ್ಕೇರಿದೆ. ಪ್ರಾರಂಭದಲ್ಲಿ ಒಂದೂವರೆ ಕೋಟಿ ರೂಪಾಯಿ ರಫ್ತು ವಹಿವಾಟಿದ್ದದ್ದು ಈಗ ೩,೨೦೦ ಕೋಟಿ ರೂಪಾಯಿಗೇರಿದೆ. ದೇಶದ ಉದ್ದಗಲಕ್ಕೂ ಇರುವ ಯುವ ಪ್ರತಿಭಾವಂತ ತಂತ್ರಜ್ಞರನ್ನು ಬೆಂಗಳೂರು ಆಕರ್ಷಿಸುವುದರಲ್ಲಿ ಯಶಸ್ವಿಯಾಗಿದೆ. ಬೆಂಗಳೂರಿನಲ್ಲಿ ಸಾಫ್ಟ್‌ವೇರ್ ಕ್ಷೇತ್ರದಲ್ಲಿ ಈಗ ೪೦,೦೦೦ ಮಂದಿ ತೊಡಗಿದ್ದಾರೆ. ಇವುಗಳ ಪೈಕಿ ಇನ್‌ಫೋಸಿಸ್ ಕಂಪನಿಯ ಹೆಸರು ಅದನ್ನು ಹುಟ್ಟುಹಾಕಿ ಬೆಳೆಸಿದ ಎನ್.ಆರ್. ನಾರಾಯಣಮೂರ್ತಿಯವರೊಂದಿಗೇ ಜೋಡಣೆಯಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ಗಳಿಸಿದೆ. ಬದಲಾವಣೆಯ ಗಾಳಿಗೆ ಸಕಾಲದಲ್ಲಿ ಸ್ಪಂದಿಸಿದರೆ ತಂತ್ರಜ್ಞಾನವನ್ನು ಯಾವ ಎತ್ತರಕ್ಕೆ ಕೊಂಡೊಯ್ಯಬಹುದು ಎಂಬುದನ್ನು ಇವರು ಸಾಧಿಸಿ ತೋರಿಸಿದ್ದಾರೆ.

ಕರ್ನಾಟಕ ವಿಜ್ಞಾನ ತಂತ್ರಜ್ಞಾನದ ಅತ್ಯುನ್ನತ ಪ್ರತಿಭಾವಂತರ ಬಹುದೊಡ್ಡ ತಂಡವನ್ನೇ ಹೊಂದಿದೆ. ಆಯಾ ಕ್ಷೇತ್ರಕ್ಕೆ ಕೊಡುಗೆ ಕೊಟ್ಟಿರುವವರ ಕೆಲವು ಹೆಜ್ಜೆಯ ಗುರುತುಗಳು

ಅನುಕರಣಯೋಗ್ಯ. ಇಂಥವರ ಪೈಕಿ ಕೃಷಿಯಲ್ಲಿ ವಿಶೇಷವಾಗಿ ಹೈಬ್ರೀಡ್ ರಾಗಿ ತಳಿಯನ್ನು ಸೃಷ್ಟಿಸಿದ ಲಕ್ಷ್ಮಣಯ್ಯನವರು ರಾಗಿ ಲಕ್ಷ್ಮಣಯ್ಯ ಎಂದೇ ಖ್ಯಾತಿ. ಭೂವಿಜ್ಞಾನದಲ್ಲಿ ಅಂತರ್ಜಲದ ಮಹತ್ವವನ್ನು ರೈತಾಪಿ ವರ್ಗಕ್ಕೆ ಮನದಟ್ಟು ಮಾಡಿಕೊಟ್ಟ ಖ್ಯಾತ ವಿಜ್ಞಾನಿ ಬಿ.ಪಿ. ರಾಧಾಕೃಷ್ಣ, ಅತಿವಾಹಕಗಳು ಎಂದರೆ ಸೂಪರ್ ಕಂಡಕ್ಟರ್ ಇವುಗಳ ಬಗ್ಗೆ ಸಂಶೋಧನೆ ಮಾಡಿ ವಿಶ್ವಮಾನ್ಯರಾದ ಭಾರತೀಯ ವಿಜ್ಞಾನ ಮಂದಿರದ ಸಿ.ಎನ್.ಆರ್. ರಾವ್, ಇವರುಗಳ ಕೊಡುಗೆಗಳು ಶಾಶ್ವತವಾಗಿ ವಿಜ್ಞಾನ ತಂತ್ರಜ್ಞಾನ ಚರಿತ್ರೆಯಲ್ಲಿ ಉಳಿಯುತ್ತವೆ. ವಿಜ್ಞಾನ ತಂತ್ರಜ್ಞಾನಗಳ ಗುರಿ ನಮ್ಮ ಗ್ರಾಮೀಣ ಜನರ ಬದುಕನ್ನು ಮೇಲೆತ್ತುವುದಾದರೆ ನಿಜಕ್ಕೂ ಅದಕ್ಕೆ ಅರ್ಥ ಬರುತ್ತದೆ.

●

ಹಿಂದಣ ಹೆಜ್ಜೆ

# ಮೈಸೂರು ಚರಿತ್ರೆಯ ಮೇಲಣ ಕಾದಂಬರಿಗಳನ್ನು ಬರೆಯುವುದಕ್ಕೆ ಇರತಕ್ಕ ಸಾಮಗ್ರಿಗಳು

● ಎ.ಆರ್. ಕೃಷ್ಣಶಾಸ್ತ್ರೀ

ಅಂಬಳೆ ರಾಮಕೃಷ್ಣಶಾಸ್ತ್ರಿ ಕೃಷ್ಣಶಾಸ್ತ್ರಿ (೧೮೯೦-೧೯೬೮) ಸಂಸ್ಕೃತ ವಿದ್ವಾಂಸರಲ್ಲಿ ಒಬ್ಬರು. ಸಂಸ್ಕೃತ ಪಾಂಡಿತ್ಯವು ಹೊಸಚಿಂತನೆ ಹುಟ್ಟಿಸದೆ ಗೊಡ್ಡಾಗಿ ಬಿದ್ದಿದ್ದ ಸಂದರ್ಭದಲ್ಲಿ, ಶಾಸ್ತ್ರಿ ತಮ್ಮ ಪಾಂಡಿತ್ಯವನ್ನು ಆಧುನಿಕ ಸಂವೇದನೆಯೊಂದಿಗೆ ಮುಖಾಮುಖಿಗೊಳಿಸಿದರು ಹಾಗೂ ಪರಂಪರೆಯ ಜತೆ ವಿಮರ್ಶಾತ್ಮಕವಾಗಿ ಒಡನಾಡಬಲ್ಲ ಮನಸ್ಸನ್ನು ಪಡೆದು ಕೊಂಡರು. ಅವರ ಸಾಹಿತ್ಯಕ ವ್ಯಕ್ತಿತ್ವ ರೂಪುಗೊಂಡಿದ್ದು ಪಶ್ಚಿಮದ ಸಾಹಿತ್ಯ ಹಾಗೂ ತಾತ್ವಿಕ ಚಿಂತನೆಗಳಿಂದ ಅಥವಾ ಇವುಗಳ ಕಿಡಿ ತಗುಲಿಸಿಕೊಂಡಿದ್ದ ಬಂಗಾಳಿ- ಮರಾಠಿ ಸಾಹಿತ್ಯದ ಸಂಪರ್ಕದಿಂದ.ಬಂಗಾಳಿ ಮರಾಠಿ ಗದ್ಯವು, ೧೯ನೇ ಶತಮಾನದಲ್ಲಿ ಇಂಗ್ಲೀಶ್ ಶಿಕ್ಷಣದ ಪರಿಣಾಮವಾಗಿ ಬಂಗಾಳ ಮಹಾರಾಷ್ಟ್ರಗಳಲ್ಲಿ ಹುಟ್ಟಿದ ಅನೇಕ ಸುಧಾರಣಾವಾದಿ ಚಳುವಳಿಗಳ ಕೂಸುತಾನೆ? ಈ ಲೇಖನವು ಮರಾಠಿ ಬಂಗಾಳಿ ಕಾದಂಬರಿಕಾರರ ನೆನಪಿನಿಂದ ಶುರುವಾಗುವುದು, (ಶಾಸ್ತ್ರಿಬಂಗಾಳಿಯನ್ನು ಕಲಿತಿದ್ದರು) ಕನ್ನಡದ ಗದ್ಯಕಾರರಾದ ಅವರು ಆಧುನಿಕ ಗದ್ಯದ ಶ್ರೇಷ್ಠ ಪ್ರಕಾರವಾದ ಕಾದಂಬರಿಯ ಬಗೆಗೆ ಚರ್ಚಿಸುತ್ತಿರುವುದು ಆಕಸ್ಮಿಕವಲ್ಲ.

೨೦ನೇ ಶತಮಾನದ ಮೊದಲ ಬರೆಹಗಾರರಾದ ಮಾಸ್ತಿ ಡಿವಿಜಿಯವರಿಗೆ ಹೋಲಿಸಿದರೆ ಶಾಸ್ತ್ರಿಯವರದು ಸಾಮಾಜಿಕವಾಗಿ ಹೆಚ್ಚು ಉದಾರವಾದ ಮನಸ್ಸು; ಇಂಗ್ಲೀಶ್ ಸಾಹಿತ್ಯವು ಕನ್ನಡದ ಹೆಳವನನ್ನು ಸುಳಿದೆಗೆದು ಬೆಳೆಸಬಲ್ಲ ಮಳೆಬಿಸಿಲುಗಳೆಂದೂ, ಸಂಸ್ಕೃತವು ಹೊಸಗಾಳಿ ಬೆಳಕು ಬರದಂತೆ ನೆರಳು ಚೆಲ್ಲಿದ ಆಲದಂತೆಯೂ ತಿಳಿದಿದ್ದ ಶ್ರೀಯವರ ನಿಲುವು, ಶಾಸ್ತ್ರಿಯವರನ್ನು ಗಾಢವಾಗಿ ಪ್ರಭಾವಿಸಿದಂತೆ ತೋರುತ್ತದೆ. ಈ ಲೇಖನದಲ್ಲಿ (ಬಹುದೀರ್ಘವಾದ ಇದನ್ನು ಎಡಿಟ್ ಮಾಡಿ ಇಲ್ಲಿ ಕೊಟ್ಟಿದೆ) ಕನ್ನಡದ ಲೇಖಕರು ಇಂಗ್ಲೀಶಿನ ಶ್ರೇಷ್ಠ ಕೃತಿಗಳಿಂದ ಪ್ರೇರಣೆ ಪಡೆದುಕೊಳ್ಳಬೇಕು ಎಂದು ಮತ್ತೆ ಮತ್ತೆ ಸೂಚಿಸುವುದು ಹಾಗೂ ೪೬ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (೧೯೪೧) ಮಾಡಿದ ಭಾಷಣದಲ್ಲಿ 'ಕನ್ನಡವು ತನ್ನ ಆರೋಗ್ಯಕ್ಕಾಗಿ ಸಂಸ್ಕೃತದಿಂದ ದೂರಸರಿಯಬೇಕು' ಎನ್ನುವ

ನಿರ್ಬಿಢೆಯ ಮಾತನ್ನಾಡಿದ್ದು ಈ ಪ್ರಭಾವದಿಂದಲೇ. ಆಧುನಿಕ ಕನ್ನಡ ಸಾಹಿತ್ಯವು ಈ ಮೊದಲಿಗರ ಮೂಲಕ ತೆಗೆದುಕೊಂಡ ಈ ನಿಲುವು ಚಾರಿತ್ರಿಕ ಮಹತ್ವದ್ದಾಗಿ ಪರಿಣಮಿಸಿತು ಎಂಬುದಕ್ಕೆ ಸಾಕ್ಷಿ ಟಾಲಸ್ಟಾಯ್ ಓದಿದ ಕುವೆಂಪು ಎರಡು ಕಾದಂಬರಿಗಳನ್ನು ಬರೆದದ್ದು.

ಈ ಲೇಖನ ಬರೆಯಲು ಶಾಸ್ತ್ರಿಯವರು ಅಪಾರ ಅಧ್ಯಯನವನ್ನು ಮಾಡಿದ್ದಾರೆ. (ಲೇಖನದ ಕೊನೆಗಿರುವ ಗ್ರಂಥಸೂಚಿಯನ್ನು ಗಮನಿಸಬೇಕು.) ಮುಖ್ಯ ಸಂಗತಿಯೆಂದರೆ ಶಾಸ್ತ್ರಿಯವರ ಪಾಂಡಿತ್ಯವಲ್ಲ ಅದನ್ನು ಹೊಸ ಚಿಂತನೆಗೆ ಆಕರವಾಗಿಸಿಕೊಳ್ಳಬಲ್ಲ ಜಾಣ್ಮೆ ಹಾಗೂ ಆಧುನಿಕ ಹೊಸಗನ್ನಡ ಸಾಹಿತ್ಯವಿನ್ನೂ ಮೊಳಕೆಯ ಸ್ಥಿತಿಯಲ್ಲಿದ್ದಾಗ ಬರೆದ ಈ ಲೇಖನದಲ್ಲಿ ಕನ್ನಡದಲ್ಲಿ ಇಂಗ್ಲೀಶಿನಲ್ಲಿರುವಂತಹ ಹೊಸ ಹೊಸ ಪ್ರಕಾರಗಳ ಸಾಹಿತ್ಯ ಸೃಷ್ಟಿಯಾಗಬೇಕು ಎಂಬ ಆಸೆ - ಕನಸು.ಆದರೆ ಆಧುನಿಕ ಸಾಹಿತ್ಯದ ಹೊಲ ಖಾಲಿಯಿದ್ದರೂ ಹುಟ್ಟಿದ್ದೆಲ್ಲ ಬೆಳೆಯಬೇಕು ಎಂಬ ಕುರುಡು ಮಮತೆಯೇನು ಇಲ್ಲಿಲ್ಲ. ಕನ್ನಡದಲ್ಲಿ ಆಗಲೇ ಬಂದಿದ್ದ ಚಾರಿತ್ರಿಕ ಕಾದಂಬರಿಗಳನ್ನು ಕುರಿತ ವಿಮರ್ಶಾತ್ಮಕ ಕಾಮೆಂಟುಗಳನ್ನು ಗಮನಿಸಬೇಕು. ಶಾಸ್ತ್ರಿಯವರು ಮಾಸ್ತಿಯವರ ಕತೆಗಳಿಗೆ ಬರೆದ ವಿಮರ್ಶೆಯಲ್ಲೂ ಇಧೇ ವಿಮರ್ಶನ ಎಚ್ಚರಗಳಿವೆ. ಅನೇಕ ವರುಷಗಳ ಕಾಲ ಮೈಸೂರು ವಿಶ್ವವಿದ್ಯಾನಿಲಯದ 'ಪ್ರಬುದ್ಧ ಕರ್ಣಾಟಕ'ದ ಸಂಪಾದಕರಾಗಿ ಅವರು ಬರೆದ ಟಿಪ್ಪಣಿ ಹಾಗೂ ಸಂಪಾದಕೀಯಗಳಲ್ಲೂ ಅವರ ವಿಮರ್ಶಕ ಗುಣ ವ್ಯಕ್ತವಾಗಿದೆ. ಈ ಅರ್ಥದಲ್ಲಿ ಆಧುನಿಕ ಕನ್ನಡ ವಿಮರ್ಶೆಯ ಚರಿತ್ರೆಯನ್ನು ಶಾಸ್ತ್ರಿಯವರಿಂದ ಮಾಡಬೇಕು. ಆದ್ದರಿಂದ ಶಾಸ್ತ್ರಿಯವರ ಸುಂದರವಾದ ಗದ್ಯಶೈಲಿಯ ಮಹತ್ವವಿರುವುದು ಅದರ ರಮ್ಯ ಸಂಪ್ರದಾಯದ ಭಾವುಕತೆ ಕಲ್ಪಕತೆಗಳಿಂದ ಮಾತ್ರವಲ್ಲ, ಭಾಷಾಬಳಕೆ ಬಗೆಗೆ ರೂಪದ ಬಗೆಗೆ ತೋರಿದ ಕಾಳಜಿಯಲ್ಲಿ; ತನ್ನ ಒಳನೋಟಗಳಲ್ಲಿ, ನಿಷ್ಠುರತೆಯಲ್ಲಿ, ಚಾರಿತ್ರಿಕ ಹೊಣೆಗಾರಿಕೆಯಲ್ಲಿ.

ಈ ಲೇಖನದ ಒಳಗೆ ಒಂದು ಪ್ರಮುಖ ವಾಗ್ವಾದ ಅಡಗಿದೆ.ಅದು ಸಾಹಿತ್ಯ ಮತ್ತು ಶಾಸ್ತ್ರಗಳ ಸಂಬಂಧಗಳನ್ನು ಕುರಿತದ್ದು. ಶಾಸ್ತ್ರಿಯವರು ಚರಿತ್ರೆಯನ್ನು ಸಾಹಿತ್ಯಕೃತಿಯೆಂಬ 'ದಿವ್ಯಭವನ' ಕಟ್ಟಲು 'ಸುಣ್ಣ ಕಲ್ಲು ಮರಳು'ಗಳಾಗಿ ಮಾತ್ರ ನೋಡುತ್ತಾರೆ. ಇವರ ಪ್ರಕಾರ ಚರಿತ್ರೆಕಾರರು ಪೂರ್ಣಗೊಳಿಸಲಾಗದ ಕೆಲಸವನ್ನು 'ಕುಶಲ ಕಾರೇಗಾರ'ರಾದ ಲೇಖಕರು ಮಾಡುತ್ತಾರೆ; 'ಪ್ರತಿಭಾಶಾಲಿಗಳೂ ರಸಿಕರೂ' ಆದ ಲೇಖಕರು "ನಿರ್ಜೀವ ಅಸ್ಥಿಪಂಜರದಂತಿರುವ ತುಂಡುತುಂಡು ಐತಿಹಾಸಿಕ ವೃತ್ತಾಂತಗಳು ಪುಷ್ಟವಾದ ದೇಹವನ್ನು ಪಡೆದು ಜೀವಕಳೆಯಿಂದ" ಬೆಳಗುವಂತೆ ಮಾಡಬಲ್ಲರು. ರಿಸರ್ಚ್ ಮಾಡುವ 'ನಿರ್ಜೀವ ಪಂಡಿತರು'ಕೊಡುವ ಚರಿತ್ರೆಯು ಸ್ಕಾಟ್ ಶೇಕ್ಸ್ ಪಿಯರ್ ಮುಂತಾದ ಕಲೆಗಾರರ ಕೈಯಲ್ಲಿ 'ರಾಗಭಾವ ಉಕ್ಕಿಸುವ' ಸಾಹಿತ್ಯರೂಪದಲ್ಲಿ ರೂಪಾಂತರ ಪಡೆದುಕೊಳ್ಳುತ್ತದೆ. ಈ ವಾಗ್ವಾದದ ಮೂಲ ೧೮ನೇ ಶತಮಾನದ ಯೂರೋಪಿನಲ್ಲಿ ಭೌತವಿಜ್ಞಾನಗಳಿಗೂ ಮಾನವಿಕಗಳಿಗೂ ನಡೆದ ತಾತ್ವಿಕ ಜಗಳಗಳಲ್ಲಿದೆ. ವೈಜ್ಞಾನಿಕ ಸಂಶೋಧನೆಗಳು ಕೈಗಾರಿಕಾ ಕ್ರಾಂತಿಯ ನಂತರ ಹೊಸ ಯಜಮಾನಿಕೆ ಪಡೆದುಕೊಂಡು, ಸತ್ಯಕ್ಕೆ ವಾರಸುದಾರನಾಗಿ, ಮಾನವಿಕಗಳಲ್ಲಿ ಕಂಪನವನ್ನು ಹುಟ್ಟಿಸಿದಾಗ, 'ಸಾಹಿತ್ಯ ಮುಂತಾದ ಕಲೆಗಳು ಕಾಣಿಸುವ

ಸತ್ಯವು ಶಾಸ್ತ್ರಸತ್ಯಕ್ಕಿಂತ ಪರಿಪೂರ್ಣವಾದುದು' ಎಂದು ಅವು ಆತ್ಮರಕ್ಷಣೆಗಾಗಿ ಪ್ರತ್ಯುತ್ತರ ಕೊಡಬೇಕಾಯಿತು. ಆ ಪ್ರತ್ಯುತ್ತರಗಳೇ ರಮ್ಯ ಸಂಪ್ರದಾಯದ ಆತ್ಮಪ್ರತ್ಯಯಕ್ಕೆ ಕಾರಣ.

ಈ ಲೇಖನದಲ್ಲಿರುವ ವ್ಯಕ್ತವಾಗಿರುವ ತನ್ನ ತಾಯಿನಾಡು ಹಾಗೂ ಭಾಷೆಯ ಮೇಲಿನ ಪ್ರೀತಿಗಳು ಕೂಡ ಇಂಗ್ಲೀಶ್ ರಮ್ಯ ಸಂಪ್ರದಾಯದ ಪ್ರೇರಣೆಯಿಂದ ಬಂದವು. ವ್ಯತ್ಯಾಸವೆಂದರೆ, ಇವು ವಸಾಹತುಶಾಹಿ ಆಳ್ವಿಕೆಯೊಳಗಿರುವ ದೇಶವೊಂದರಲ್ಲಿ, ಅದರ ವಿದ್ಯಾವಂತವರ್ಗ ತೋರುತ್ತಿರುವ ಸಾಂಸ್ಕೃತಿಕ ರಾಜಕೀಯ ಪ್ರತಿರೋಧದ ಭಾಗಕೂಡ ಆಗಿರುವುದು. ಈ ಲೇಖನದಲ್ಲಿರುವ ಮನೆಯ ಬಾವಿಯ ಅಮೃತದ ನೀರನ್ನು ಬಿಟ್ಟು, ಕೆರೆಯ ನೀರಿಗೆ ಹೋಗುವ, ಮನೆಯ ತಾಯ್ತಂದೆಯರು ಹರಕುಬಟ್ಟೆಯಲ್ಲಿರುವಾಗ ಬೇರೆಯವರಿಗೆ ಚಂದಾಕೊಡುವವರ ಚಿತ್ರಗಳನ್ನು ಅಥವಾ ಕರ್ನಾಟಕದ ಬೆಟ್ಟ, ಹೊಳೆ ಜಲಪಾತಗಳ ಭಾವುಕ ವಿವರಣೆಗಳನ್ನು ಈ ಹಿನ್ನೆಲೆಯಲ್ಲಿಯೇ ಅರ್ಥಮಾಡಿಕೊಳ್ಳಬೇಕು. ನಮ್ಮಲ್ಲಿ ಸಂಪತ್ತಿದೆ ಚೆಲುವಿದೆ. ಆದರೆ ಅದನ್ನು ಕಾಣುವ ಹಾಗೂ ಬಳಸಿಕೊಳ್ಳುವ ಅರಿವು-ಅಭಿಮಾನ ಇಲ್ಲ; ಚಿನ್ನ ಇದೆ ಆದರೆ ತಾಯಿಗೆ ಅದನ್ನು ಆಭರಣ ಮಾಡಿ ತೊಡಿಸುವ ಕಲೆಗಾರರಿಲ್ಲ-ಇದು ಇಲ್ಲಿನ ವೇದನೆ. ಅನ್ಯರ ವ್ಯಾಮೋಹವು ತನ್ನದನ್ನು ಕಾಣುವ ಕಣ್ಣೇ ಕಳೆದುಬಿಟ್ಟಿರುವವರ ಬಗೆಗಿನ ವಿಷಾದ ಉಕ್ಕಿಸುವ ಈ ಚಿಂತನೆ, ತಳದಲ್ಲಿ ರಾಜಕೀಯವಾದ ಆಶಯವನ್ನು ಇಟ್ಟುಕೊಂಡಿದೆ ಎಂತಲೇ ಗೋಪಾಲಸ್ವಾಮಿ ಬೆಟ್ಟದ ಚೆಲುವಿನ ವರ್ಣನೆಯು ನಿಸರ್ಗದ ಬಗೆಗಿನ ಪ್ರವಾಸಾಸಕ್ತಿಯನ್ನು ಹುಟ್ಟಿಸಲು ಬಂದುದಲ್ಲ.

ಬ್ರಿಟಿಶರ ಆಳುವಿಕೆಯಲ್ಲಿ (೧೯೨೦) ಬರೆಯಲಾದ ಈ ಲೇಖನದೊಳಗೆ ಮೇಲುನೋಟಕ್ಕೆ ಒಂದು ವೈರುಧ್ಯ ತೋರುವುದು. ಅದೆಂದರೆ, "ನಮ್ಮ ತಲೆಯ ಮೇಲೆ ಮೊಟಕಿ, ನಾವು ಮೂರು ಮಾವಿನಕಾಯಿ ಉದ್ದವಿರುವ ಅಯೋಗ್ಯರೆಂದು" ಹೇಳುವ "ಪಾಶ್ಚಾತ್ಯರ"ರನ್ನು, ಆಳುವ ರಾಜಕಾರಣದ ಭಾಗವಾಗಿರುವ ಅವರ ಅಹಂಕಾರವನ್ನು ಎದುರಾಳಿ ಎಂದು ತಿಳಿಯುವುದು; ಆದರೆ ಇದೇ ಪಾಶ್ಚಾತ್ಯರ ಸಾಹಿತ್ಯ ಸಂಸ್ಕೃತಿಯನ್ನೇ ಅನುಕರಣೀಯ ಮಾದರಿಯನ್ನಾಗಿಸಿಕೊಳ್ಳಲು ತನ್ನ ಭಾಷೆಯ ಲೇಖಕರಿಗೆ ಕರೆಗೊಡುವುದು ಹಾಗೂ ಸ್ವದೇಶವನ್ನೂ ಸ್ವಜನರನ್ನೂ ಪ್ರೀತಿಸಲು ಅವರ ಚರಿತ್ರೆಯನ್ನು ಕುರಿತು ಬರೆಯಲು ಕಲಿಸುವ ವರ್ಡ್ಸ್‌ವರ್ತ್ ಶೇಕ್ಸ್‌ಪಿಯರ್ ಸ್ಕಾಟ್ ಮುಂತಾದವರನ್ನು ಗುರುಗಳೆಂದು ಸಂಗಾತಿಗಳೆಂದು ತಿಳಿಯುವುದು. ಒಂದೇ ಮೂಲದಿಂದ ಬಂದ ಎರಡು ಸಂಗತಿಗಳಲ್ಲಿ, ಒಂದರ ಜತೆ ಹಗೆತನ ಮತ್ತೊಂದರ ಜತೆ ಗೆಳೆತನ ಸಾಧಿಸಬೇಕೆನ್ನುವ ಈ ನಿಲುವು, ವಾಸ್ತವವಾಗಿ ವೈರುಧ್ಯವಲ್ಲ. ಬಹಳ ಎಚ್ಚರಿಕೆಯ ಸಾಧಿಸಿದ ಸಾಂಸ್ಕೃತಿಕ ರಾಜಕಾರಣದ ನೀತಿಯಾಗಿದೆ. ವಾದ್ರಿಗಳನ್ನು ವಿರೋಧಿಸುವ ಹಾಗೂ ತನ್ನ ಹಳ್ಳಿಯ ಅಟ್ಟದಮೇಲೆ ಕುಳಿತು ವರ್ಡ್ಸ್‌ವರ್ತ್ ಓದುವ ಹೂವಯ್ಯನಂತಹ ಪಾತ್ರವನ್ನು ಮುಂದೆ ಕನ್ನಡ ಕಾದಂಬರಿ ಪಡೆದಿದ್ದು ಇದರ ತಾರ್ಕಿಕ ಬೆಳವಣಿಗೆಯೇ.

ತನ್ನ ನಾಡನ್ನು ಜನರನ್ನು ಅವರ ಚರಿತ್ರೆಯನ್ನು ಪ್ರೀತಿಸುವ ಈ ರಾಷ್ಟ್ರೀಯವಾದಿ ಸಾಂಸ್ಕೃತಿಕ ರಾಜಕಾರಣದ ದೊಡ್ಡ ಸಮಸ್ಯೆಯೆಂದರೆ. ಅದರಲ್ಲಿ ಮೇಲುಜಾತಿ ಹಿಂದುಗಳ [illegible] ರಾಷ್ಟ್ರ [illegible] ಸಾಮ್ರಾಜ್ಯಶಾಹಿಯನ್ನೇ ಮಾದರಿಯನ್ನಾಗಿ ಇಟ್ಟುಕೊಂಡಿರು

ವುದು; ಇದಕ್ಕೆ ಸಾಕ್ಷಿ, ತಮ್ಮ ವಿರುದ್ಧ ಹೋರಾಡಿದ ದೇಶೀಯರನ್ನು ಕ್ರೂರಿಗಳೆಂದು ಚಿತ್ರಿಸುವುದರಲ್ಲಿ ಕುಖ್ಯಾತಿ ಪಡೆದ ಮಾರ್ಕ್ಸ್‌ವಿಲ್ಕ್ಸ್ ನಂತಹ ವಸಾಹತು ಚರಿತ್ರೆಕಾರರನ್ನು ಶಾಸ್ತ್ರಿಯವರು ವಿಮರ್ಶೆಯಿಲ್ಲದೆ ಒಪ್ಪಿಕೊಂಡಿರುವುದು. ಹೀಗಾಗಿ ತಮ್ಮ ಜತೆಯೇ ಬದುಕುತ್ತಿರುವ ಧಾರ್ಮಿಕ ಸಮುದಾಯವನ್ನು, ಬ್ರಿಟೀಶರಿಗಿಂತ ಮಿಗಿಲಾಗಿ ದ್ವೇಷಿಸುವ 'ಚಾರಿತ್ರಿಕ' ಕಾದಂಬರಿಕಾರರಾದ ಹರಿನಾರಾಯಣ ಆಪ್ಟೆ ಹಾಗೂ ಬಂಕಿಮಚಂದ್ರರನ್ನು, ದೇಶಾಭಿಮಾನ ಹುಟ್ಟಿಸುವ ಮಾದರಿಗಳನ್ನಾಗಿ ಒಪ್ಪಿಕೊಂಡಿರುವುದರ ಕಷ್ಟಗಳನ್ನು ಶಾಸ್ತ್ರಿ ಅರಿಯದೆ ಹೋಗಿದ್ದಾರೆ. ಸಂ.)

**ಪೀಠಿಕೆ**

ಬಂಕಿಮಚಂದ್ರರ ಮತ್ತು ಆಪಟೆಯವರ ಕಾದಂಬರಿಗಳನ್ನು ಓದುತ್ತಿರುವಾಗ ಅವುಗಳಲ್ಲಿರುವ ಉತ್ಸಾಹಾಭಿಮಾನಜನಕವಾದ ವೀರರಸ, ಶಕ್ತಿ ಜ್ಞಾನದಾಯಕವಾದ ಧರ್ಮನಿಷ್ಠೆ ಇವುಗಳ ಜೊತೆಯಲ್ಲಿ ಪಾಠಕರಿಗೆ ಮತ್ತೊಂದು ವಿಶೇಷವು ಗೋಚರವಾಗದಿರದು. ಅದೇನೆಂದರೆ ಅವುಗಳಲ್ಲಿ ಉಜ್ವಲವಾದ ಜಾತೀಯ ಅಥವಾ ದೇಶೀಯ ಕಾಂತ; ಇವುಗಳಲ್ಲಿ ಸ್ಪಷ್ಟವಾಗಿ ಕಾಣಬರುವ ಹಿಂದೂ ನಡೆವಳಿಕೆ ಆಚಾರ ರೀತಿನೀತಿಗಳುಳ್ಳ ಸನ್ನಿವೇಶ; ಬಂಗಾಳ ರಾಜಪುತ್ರ ಸ್ಥಾನ ಅಥವಾ ಮಹಾರಾಷ್ಟ್ರ ರಾಜ್ಯದ ಸಹಜವಾದ ಭಾವಚಿತ್ರ. ಹೀಗೆಂದ ಕೂಡಲೆ, ಐತಿಹಾಸಿಕ ಕಾದಂಬರಿಕಾರನು ಚರಿತ್ರೆಯ ವಿಚಾರವಾಗಿ ಬರೆಯುತ್ತ ಹೋಗುವುದರಿಂದ ಅವನು ಕಾಲದೇಶ ವರ್ತಮಾನ (ಸನ್ನಿವೇಶ) ಗಳಿಂದ ಬದ್ಧನಾಗಿರುವನೆಂದೂ ಇದರಲ್ಲಿ ವಿಶೇಷವೇನೂ ಇಲ್ಲ ವೆಂದೂ ಹೇಳಬಹುದು. ಆದರೆ ಈ ಗುಣಕ್ಕೆ ಇಂಥ ಬಂಧನಗಳು ಯಾವುವೂ ಮುಖ್ಯ ಕಾರಣವಲ್ಲವೆಂದೂ ಗ್ರಂಥಕರ್ತರಲ್ಲಿದ್ದ ಅಮೋಘವಾದ ದೇಶಾಭಿಮಾನವೇ ಕಾರಣವೆಂದೂ ನನ್ನ ಅಭಿಪ್ರಾಯ. ಇದು, ನಾನು ಹಿಂದೆ ಹೇಳಿರುವಂತೆ, ಬಂಕಿಮಚಂದ್ರರ ಇತರ ಗ್ರಂಥಗಳನ್ನು ನೋಡಿದರೆ ಸ್ಪಷ್ಟವಾಗಿ ಕಾಣಬರುವುದು; ಸ್ವದೇಶ, ಸ್ವಧರ್ಮ, ಸ್ವಜನರು, ಎಂದರೆ ಅವರಿಗೆ ಎಷ್ಟು ಅಭಿಮಾನ, ನಮ್ಮ ತಲೆಯ ಮೇಲೆ ಮೊಟಕಿ ನಾವು ಮೂರು ಮಾವಿನಕಾಯಿ ಉದ್ದವಿರುವ ಅಯೋಗ್ಯರೆಂದು ಹೇಳುವುದಕ್ಕೆ ಬರುವ ಪಾಶ್ಚಾತ್ಯರ ಮೇಲೆ ಎಷ್ಟು ಆಗ್ರಹ! ಐತಿಹಾಸಿಕ ಕಾದಂಬರಿಗಳನ್ನು ಬಿಟ್ಟು ಅವರ ಇತರ ಕಾದಂಬರಿಗಳನ್ನೂ ನೋಡಿ! ವಿಷವೃಕ್ಷ ಮುಂತಾದ ಕಲ್ಪಿತ ಕಥೆಗಳು ನಡೆಯುವುದೂ ಬಂಗಾಳದಲ್ಲಿಯೆ; ಬೇಕಾದರೆ ಆ ಸ್ಥಳಗಳನ್ನು ಬಂಗಾಳ ದೇಶದ ಭೂಪಟದಲ್ಲಿ ಬೆರಳಿನಿಂದ ಮುಟ್ಟಿ ತೋರಿಸಬಹುದು; ಕೊನೆಗೆ ಅವರ ಗ್ರಂಥಗಳಲ್ಲಿ ಬರುವ ಹುಲಿ ಕರಡಿಗಳೂ ಬಂಗಾಳ ದೇಶದವುಗಳೇ; ಅವು ಇರುವುದು ಬಂಗಾಳ ದೇಶದ ಕಾಡಿನಲ್ಲಿಯೇ; ಲೋಕರಹಸ್ಯವನ್ನು ಬೋಧಿಸಿರುವ ಬೃಹಲ್ಲಾಂಗೂಲ ವ್ಯಾಘ್ರಮಹಾ ಶಯರು ಉಪನ್ಯಾಸಗಳನ್ನು ಕೊಟ್ಟದ್ದೂ ಗಂಗಾಮುಖದಲ್ಲಿರುವ ಸುಂದರವನದಲ್ಲಿಯೆ!

ಜನಗಳಲ್ಲಿ ನಿಜವಾದ ದೇಶಾಭಿಮಾನ ತುಂಬಿತೆಂದರೆ ಅದು ಅವರು ಆಡುವ ಒಂದೊಂದು ಮಾತಿನಲ್ಲಿಯೂ ಬರೆಯುವ ಒಂದೊಂದು ಅಕ್ಷರದಲ್ಲಿಯೂ ಮಾಡುವ ಒಂದೊಂದು ಕೆಲಸದಲ್ಲಿಯೂ ನುಸಿದು ನುಗ್ಗಿ- ದಾರಿ ಮಾಡಿಕೊಂಡು ಬರುತ್ತದೆ. ನಮ್ಮಲ್ಲಿ ಇಂಥ

ದೇಶಾಭಿಮಾನ ಸೂಚಕಗಳಾದ ಗ್ರಂಥಗಳೆಷ್ಟಿವೆ? ಬರೆದರೆ ಕಲ್ಪಿತ ಕಥೆಗಳು; ಅವು ನಡೆಯುವುದು ಯಾವುದೋ ಅನಾಮಧೇಯ ಪ್ರಪಂಚದಲ್ಲಿ; ಅದು ಭೂಗ್ರಹದ ಮೇಲೆಯೇ ನಡೆಯುತ್ತದೆಯೋ ಚಂದ್ರ ಅಥವಾ ಅಂಗಾರಕ ಗ್ರಹದ ಮೇಲೆ ನಡೆಯುತ್ತದೆಯೋ ಸಂದೇಹ! ಈ ಎರಡು ವಿಧವಾದ ಗ್ರಂಥಗಳನ್ನೂ ಓದುತ್ತ ಓದುತ್ತ ನಮಗೆ, ಕನ್ನಡಿಗರಾದ ನಮಗೆ, ಮೈಸೂರು ರಾಜ್ಯನಿವಾಸಿಗಳಾದ ನಮಗೆ, ನಮ್ಮ ದೇಶದಲ್ಲಿಯೂ ಇಂಥ ಸಂಗಿಗಳೂ ನಡೆದಿರುಬಹುದೇ, ನಡೆಯಬಹುದೇ, ಅವುಗಳನ್ನು ಯಾರಾದರೂ ಚಿತ್ರಿಸಿದ್ದಾರೆಯೇ, ಚಿತ್ರಿಸುವುದಕ್ಕೆ ಸಾಧ್ಯವೇ, ಎಂಬ ಯೋಚನೆಯು ಹುಟ್ಟದಿರಲಾರದು. ಮೈಸೂರಿನಲ್ಲಿ ನಡೆಯಲಿ, ಬಿಡಲಿ; ಇಂಡಿಯ ದೇಶವು ನಮ್ಮ ದೇಶವೇ ಅಲ್ಲವೆ? ವಾಲ್ಮೀಕಿ, ವ್ಯಾಸ, ಶುಕ, ಕಾಳಿದಾಸ, ಶಂಕರ, ಮುಂತಾದವರು ನಮ್ಮವರೇ ಅಲ್ಲವೆ? ಅದರಂತೆ ರಾಜಪುತ್ರರೂ ಬಂಗಾಳಿಗಳೂ, ಮರಾಟೆಯವರೂ ನಮ್ಮವರೇ ಅಲ್ಲವೆ? ಅವರ ಕಥೆಗಳೂ ಅವರ ವಿಷಯವಾದ ಗ್ರಂಥಗಳೂ ನಮ್ಮವೇ ಅಲ್ಲವೇ? ಅವುಗಳಲ್ಲಿ ನಾವು ಆಸಕ್ತಿಯನ್ನು ವಹಿಸುವುದಿಲ್ಲವೆ? ಅವುಗಳಿಂದ ನಾವು ಉಪಯೋಗವನ್ನೂ ಆನಂದವನ್ನೂ ಪಡೆಯುವುದಿಲ್ಲವೆ? ಎಂದು ಕೇಳಬಹುದು; ನಿಜ. ಅವರೆಲ್ಲರೂ ನಮ್ಮವರೆ, ನಮ್ಮ ಸಂಸಾರಕ್ಕೆ ಸೇರಿದವರೆ; ನಮ್ಮ ಕಷ್ಟಸುಖಗಳಲ್ಲಿ ಭಾಗಿಳಾದವರೆ. "ಉದಾರಚರಿತಾನಾಂ ತು ವಸುಧೈವ ಕುಟುಂಬಕಂ" ಆದರೆ ನಾವೆಲ್ಲರೂ ಹಿಂದುಗಳಾದರೂ, ಕನ್ನಡಿಗರು, ತೆಲುಗರು ಮರಾಟಿಯವರು ಬಂಗಾಳಿಗಳು ಎಂಬ ಭೇದಭಾವವರಿರುವತನಕ, ಎಲ್ಲರೂ ಏಕರೀತಿಯಾಗಿ ಒಂದೇ ಭಾಷೆಯನ್ನು ಆಡುತ್ತ ಅದನ್ನೇ ಎತ್ತಿ ಅದರ ಸಾಹಿತ್ಯವನ್ನೇ ಅಭಿವೃದ್ಧಿಪಡಿಸುವ ಕಾಲ ಬರುವತನಕ, ಕನ್ನಡ ಸಾಹಿತ್ಯವನ್ನು ಬೆಳೆಸಬೇಕೆಂಬ ಭಾವವಿರುವತನಕ, ಕನ್ನಡಿಗರಾದ ನಾವು ದೇಶವನ್ನೂ ಭಾಷೆಯನ್ನೂ ಕೈಬಿಡಬಾರದು, ಅಲಕ್ಷ್ಯಮಾಡಬಾರದು; ಮನೆಯಲ್ಲಿ ವೃದ್ಧರಾದ ತಾಯಿತಂದೆಗಳು ಹೊಟ್ಟೆಗಿಲ್ಲದೆ ಹರುಕು ಬಟ್ಟೆಯನ್ನುಟ್ಟುಕೊಂಡು ತಿರುಗಾಡುತ್ತಿರುವಾಗ ಮೈಸೂರು ದೇಶವೆಲ್ಲ ನಮ್ಮದೆಂದು ಹೇಳುತ್ತ ದಾನಧರ್ಮಗಳಿಗೆ - ಅವು ಎಷ್ಟೇ ಆವಶ್ಯಕವಾಗಿರಲಿ-ಚಂದಾಕೊಡುವುದಕ್ಕೆ ಹೋಗಬಾರದು; ಇದರ ಮೇಲೆ, ನಮ್ಮ ದೇಶದಲ್ಲಿ ಎಂಥೆಂಥ ಕಣ್ಣಿಗೆ ಹಬ್ಬವನ್ನೀಯುವ ಪ್ರದೇಶಗಳಿವೆ! ಮನಸ್ಸಿಗೆ ಆನಂದವನ್ನಿತ್ತು ಮೂಕನನ್ನು ವಾಚಾಲನನ್ನಾಗಿ ಮಾಡುವಂಥ ರಮಣೀಯವಾದ ಸ್ಥಳಗಳಿವೆ! ಹೃದಯದಲ್ಲಿ ವೀರರಸವನ್ನು ತುಂಬಿ ಹೆಳವನನ್ನೂ ಹಾರುವಂತೆ ಮಾಡುವ ಎಂಥೆಂಥ ಐತಿಹಾಸಿಕ ಘಟನಾವಳಿಗಳಿವೆ! ಮನೆಯ ಬಾವಿಯಲ್ಲಿ ಅಮೃತದಂಥ ಸೀನೀರನ್ನು ಇಟ್ಟುಕೊಂಡು ಕೆರೆಗೆ ಹೋಗುವ ನಮ್ಮ ಹುಚ್ಚನ್ನು ಏನೆಂದು ಹೇಳೋಣ! ಮೈಸೂರಿನಲ್ಲಿ ಓದುವ ವಿದ್ಯಾರ್ಥಿಗಳಿಗೆ ಇಂಥ ನೋಟ ಗಳನ್ನು (ಅವು ಮೈಸೂರಿಗೆ ಹತ್ತಿರದಲ್ಲಿರುವುದರಿಂದ) ನೋಡುವುದಕ್ಕೆ ಸ್ವಲ್ಪವಾದರೂ ಅವಕಾಶ ಇದೆ. ಬೆಂಗಳೂರಿನ ವಿದ್ಯಾರ್ಥಿಗಳಿಗೆ ಸ್ಕೂಲಿನಿಂದ ಮನೆಗೂ ಮನೆಯಿಂದ ಸ್ಕೂಲಿಗೂ ಓಡಿ ಓಡಿ ಬರುತ್ತ, ಸಾಲು ಸಾಲಾಗಿರುವ ಅಂಗಡಿಗಳನ್ನೂ ಮನೆಗಳನ್ನೂ ನೋಡುತ್ತ, ಅತ್ತಲಾಗಿ-ಇತ್ತಲಾಗಿ-ಕೂಡ-ನೋಡದೆ-ತಮ್ಮ-ಕಾರ್ಯಗಳ-ಮೇಲೆಯೇ-ಮನಸ್ಸಿಟ್ಟು-

ಹೊಟ್ಟೆಯ-ಪಾಡಿಗಾಗಿ-ದುಡಿಯುವುದಕ್ಕೆ -ಗಡಬಿಡಿಯಿಂದ-ಹೋಗುತ್ತಿರುವ ಅಥವಾ ದ್ರವ್ಯಾರ್ಜನೆಗಾಗಿ-ನಾನಾ ವಿಧವಾದ-ವಾಹನಗಳಲ್ಲಿ-ಕುಳಿತು-ಹಾರಿ ಹೋಗುತ್ತ-ಹಿಂದೆ-ಮುಂದೆ-ಬರುವವರಿಗೆ-ಬೇಡವೆಂದರೂ ಹೊಟ್ಟೆತುಂಬ-ಧೂಳು-ಕುಡಿಸುವ ಜನರ ಸಂದಣಿಯನ್ನು ನೋಡುತ್ತ, ಸಂತೆಯ ಹೊತ್ತಿಗೆ ಮೂರು ಮೊಳ ನೈಯುವುದರಲ್ಲಿಯೇ ಇದ್ದ ಹೊತ್ತೆಲ್ಲ ಕಳೆದು ಹೋಗುತ್ತದೆ. ಪರೀಕ್ಷೆಯಲ್ಲಿ "ಪ್ಯಾಸು" ಮಾಡುವುದನ್ನು ಬಿಟ್ಟರೆ ಅವರಿಗೆ ಮತ್ತೆ ಯಾವುದೂ ಬೇಕೂ ಇಲ್ಲ; (ಕೆಲವರಿಗಂತೂ ಎರಡು ತರಗತಿಗಳಲ್ಲಿ ಹಾಗೂ ಹೀಗೂ ಕನ್ನಡವನ್ನು ಓದಿ ಗೆದ್ದರೆ ಸಾಕಾಗಿದೆ. ಮೂರನೆಯ ವರ್ಷದಿಂದ ಕನ್ನಡದ ಕಾಟವೇ ಇಲ್ಲ! ಈ ಹಾಳು ಇಂಗ್ಲಿಷಿನ ಕಾಟವೂ ಯತಪ್ಪಿದರೆ ಸಾಕೆಂದು ಅವರ ಪ್ರಾರ್ಥನೆ!) ಅಪ್ಪಿತಪ್ಪಿ ಅವರು "ಟ್ರಿಪ್" ಹೋಗುವುದೆಂದರೆ ಕೋಲಾರದ ಚಿನ್ನದ ಗಣಿಗಳನ್ನು ನೋಡುವುದಕ್ಕೆ; ಅಲ್ಲಿ ಸಾಲುಸಾಲಾಗಿ ಮೂರು ಹೊತ್ತೂ ಹೊಗೆಯನ್ನು ಉಗುಳುತ್ತಿರುವ ಚಿಮಣಿಗಳಿಂದ ಕೂಡಿ ಇಂಗ್ಲಿಷ್ ಕಾರ್ಖಾನೆಯಂತೆ ಇರುವ ಪಟ್ಟಣವನ್ನು ನೋಡಲು ಹೋಗುವುದಕ್ಕೆ; (ಅಲ್ಲಿಗೆ ಹೋದರೆ ಶಿವಸಮುದ್ರದ ಜಲಪಾತವನ್ನು ನೋಡಬೇಕೆಂಬ ಯೋಚನೆ ಬರುವುದಿಲ್ಲ); ಆಮೇಲೆ ಹೆಸರುಘಟ್ಟದ "ಪಂಪಿಂಗ್ ಸ್ಟೇಷನ್"ನ್ನು ನೋಡಲು ಹೋಗುವುದಕ್ಕೆ, ಇದಕ್ಕೆ ತಕ್ಕಂತೆ ನಮ್ಮ ಹುಡುಗರು ಓದುವ ಮೈಸೂರಿನ ಚರಿತ್ರೆಯೆಂದರೆ, ಮ.ಶ್ಯಾಮರಾಯರು ಬರೆದಿರುವ ಸಣ್ಣ ಪುಸ್ತಕ; ಅದನ್ನೂ ಮೂರನೆಯ ಕ್ಲಾಸಿನ ಮೇಲೆ ಓದಬೇಕಾದದ್ದಿಲ್ಲ! ಭೂಗೋಳವೋ ಇದರ ಅಣ್ಣ ತಮ್ಮ! ಮಗ್ಗಿಯ ಪುಸ್ತಕಗಳನ್ನು ಓದಿ ಮಗ್ಗಿಗಳನ್ನು ಕಲಿಯುವುದೂ ಇವುಗಳನ್ನು ಓದಿ ಮೈಸೂರು ದೇಶದ ವಿಷಯಗಳನ್ನು ತಿಳಿದುಕೊಳ್ಳುವುದೂ ಒಂದೇ! ಈಗ ಕನ್ನಡಕ್ಕೆ ಎಲ್ಲರೂ ತೋರಿಸುತ್ತಿರುವ ಅಸಡ್ಡೆಯಲ್ಲಿ, ಕನ್ನಡ ದೇಶದ ಚರಿತ್ರೆ ಭಾಷೆ ಸಾಹಿತ್ಯ ಕಲೆ ಮುಂತಾದ ನಾನಾ ವಿಷಯಗಳನ್ನು ಕಣ್ಣಾರ ನೋಡಬಹುದಾದ, ಅದಕ್ಕಿಂತಲೂ ಅತಿಶಯವಾಗಿ ಅಪೂರ್ವವಾದ ಸೃಷ್ಟಸೌಂದರ್ಯವನ್ನೂ, ಉದಾತ್ತಭಾವಜನಕಗಳಾದ ಪುರಾತನ ಘಟನಾವಳಿಗಳನ್ನೂ ತಂದು ಮುಂದಿಟ್ಟು, ಉದ್ದಾಮ ಕವಿಗಳನ್ನು ನಿರ್ಮಾಣಮಾಡಬಲ್ಲ, ಸೊಬಗಿನ ಸುಗ್ಗಿಗಳಂತಿರುವ ಸ್ಥಳಗಳನ್ನು ನೋಡಿಕೊಂಡು ಬರಬೇಕೆಂದೂ, ಅದಕ್ಕಾಗಿ ವೆಚ್ಚಮಾಡಿದ ಹಣವು ವ್ಯರ್ಥವಾಗುವುದಿಲ್ಲವೆಂದೂ ಹೇಳಿದರೆ ಆ ಸೂಚನೆಯನ್ನು ಮೆಚ್ಚುವರಾರು? ಒಪ್ಪುವವರಾರು? ನಮ್ಮಲ್ಲಿ ಎಷ್ಟು ಜನ ಶೃಂಗೇರಿ, ಚಿತ್ರದುರ್ಗ, ನಂದೀದುರ್ಗ, ಬಾಬಾ ಬುಡನ್ ಬೆಟ್ಟ, ಶಿವಗಂಗೆಯಬೆಟ್ಟ, ಗೋಪಾಲಸ್ವಾಮಿಯಬೆಟ್ಟ ಇವುಗಳನ್ನು ನೋಡಿದ್ದಾರೆ? ಗೋಪಾಲಸ್ವಾಮಿಯ ಬೆಟ್ಟವನ್ನು ನಾನು ಹೋಗಿ ನೋಡಿದ್ದನ್ನು ಅದುವರೆಗೂ ಅದನ್ನು ನೋಡಿರಲಿಲ್ಲವೆಂದೂ ಅದರ ಸೊಬಗನ್ನು ಮೆಚ್ಚಿ ಆನಂದಾನುಭವ ಮಾಡುವುದಕ್ಕೆ ಶಕ್ತರಾಗಿರುವ ಅನೇಕ ಮೈಸೂರು ದೇಶದವರು ಅದನ್ನು ನೋಡಿಲ್ಲವೆಂದೂ ನನಗೆ ಸಂಕಟವಾಗಿ ಕಣ್ಣಲ್ಲಿ ನೀರುಬಂತು.

ನಮ್ಮ ಮೈಸೂರು ದೇಶದಲ್ಲಿ ಇಂಥ ಸ್ಥಳಗಳಿರಬೇಕಾದರೆ ಅವನ್ನು ನೋಡಿ ಆನಂದಪಡದಿದ್ದ ಮೇಲೆ ಏನು ಪ್ರಯೋಜನ? ಅವುಗಳ ಮೇಲೆ ಬರೆಯದಿದ್ದರೆ ಏನು ಪ್ರಯೋಜನ? ವರ್ಡ್ಸ್

ಪರ್ತ್ ಮುಂತಾದ ಕವಿಗಳ ಪದ್ಯಗಳನ್ನು ಓದಿ ಏನು ಪ್ರಯೋಜನ? ಇದರಿಂದ ನಾವೆಲ್ಲರೂ ಕವಿಗಳಾಗಬೇಕೆಂದು ಹೇಳುವುದಿಲ್ಲ. ಆ ಕಾಲವೂ ಬರುವುದು; ಆದರೆ ಅದಕ್ಕೆ ಇನ್ನೂ ಸ್ವಲ್ಪ ದಿನ ಬೇಕೆಂದು ತೋರುವುದು.

ನಾನು ನೋಡಿರುವ ಕೆಲವು ಸ್ಥಳಗಳಲ್ಲಿ ಒಂದೇ ಒಂದರ ವಿಚಾರವಾಗಿ ಇಲ್ಲಿ ಸ್ವಲ್ಪ ಸೂಚಿಸಿ ನಮ್ಮ ದೇಶದಲ್ಲಿ ಗ್ರಂಥನಿರ್ಮಾಣಕ್ಕೆ ಎಂಥ ಸಾಮಗ್ರಿ ಇದೆ ಎಂದು ತೋರಿಸಿದ್ದೇನೆ. ಇದರ ಹಾಗೆ ಮೈಸೂರು ದೇಶದ ಮೇಲೆ ಕಾದಂಬರಿಗಳನ್ನು ಬರೆಯುವಂತೆ ಪ್ರೇರೇಪಿಸುವ, ಕತ್ತುಹಿಡಿದು ದಬ್ಬಿ ನಿರ್ಬಂಧಪಡಿಸುವ, ಎಷ್ಟೋ ಸ್ಥಳಗಳೂ ಘಟನಾವಳಿಗಳೂ ಇವೆ. ಇವುಗಳನ್ನೆಲ್ಲ ವಿಸ್ತಾರವಾಗಿ ವರ್ಣಿಸುತ್ತ ಹೋದರೆ ಮುಗಿಯುವುದು ಎಂದಿಗೆ?

ಮೈಸೂರು ಚರಿತ್ರೆಯ ಮೇಲೆ ಕಾದಂಬರಿಗಳನ್ನು ಬರೆಯುವುದಕ್ಕೆ ಮೊದಲು ಸಾಮಗ್ರಿ ಬೇಕು; ಆಮೇಲೆ ಅದನ್ನು ಉಪಯೋಗಿಸಬಲ್ಲ ಕವಿಯಾಗಬೇಕು; ಅದನ್ನು ಉಪಯೋಗಿಸುವ ರೀತಿ ಯಾವುದೆಂದು ಅವನು ತಿಳಿದಿರಬೇಕು. ಇದರಲ್ಲಿ ಮೊದಲನೆಯ ವಿಚಾರವನ್ನು ತೆಗೆದುಕೊಂಡು, ಇಂಥ ಗ್ರಂಥಗಳಿಗೆ ಏನೇನು ಸಾಮಗ್ರಿಗಳಿವೆ ಎಂಬುದನ್ನು ಈ ಉಪನ್ಯಾಸದಲ್ಲಿ ಸೂಚಿಸುತ್ತೇನೆ. ಏಕೆಂದರೆ ಅನೇಕರಿಗೆ ಮ.ಶ್ಯಾಮರಾಯರ ಚರಿತ್ರೆಯನ್ನು ಬಿಟ್ಟರೆ ಬೇರೆ ಮೈಸೂರು ಚರಿತ್ರೆಯೇ ಇಲ್ಲವೆಂದು ಭಾವನೆ. ಕೊನೆಗೆ ಅವರ ಗ್ರಂಥದ ಎರಡನೆಯ ಭಾಗ ವೊಂದುಂಟೆಂಬುದೂ ಅವರಿಗೆ ಗೊತ್ತಿಲ್ಲ. ಹೀಗಿರಲು ಅದು ಎಷ್ಟು ಆವಶ್ಯಕವೆಂದು ಹೇಳಬೇಕಾಗಿಲ್ಲ. ಸಮರ್ಥರಾದ ಬಂಕಿಮಚಂದ್ರರಂಥ ಗ್ರಂಥಕರ್ತರಿಗೆ ಚರಿತ್ರೆಯಲ್ಲಿ ಸರಿಯಾದ ಒಂದು ವಾಕ್ಯ ಸಿಕ್ಕಿದರೂ ಸಾಕು, ಅದರ ಮೇಲೆ ತಮ್ಮ ಪ್ರತಿಭಾಶಕ್ತಿಯಿಂದ, ರೇಷ್ಮೆ ಹುಳುವು ತಳತಳಿಸುವ ಗೂಡನ್ನು ಕಟ್ಟುವಂತೆ, ಹೇಗೋ ಸಾಮಗ್ರಿಯನ್ನು ಕಲ್ಪಿಸಿಕೊಂಡು ಒಂದು ದಿವ್ಯಸುಂದರವಾದ ಕಾವ್ಯಭವನವನ್ನು ಕಟ್ಟಿಬಿಡುತ್ತಾರೆ. ಇಂಥವರಿಗೆ ಸೊಗಸಾದ ಕಥೆಗಳು ಸಿಕ್ಕಿದರೆ, ಅವು ನಡೆದ ಸ್ಥಳಗಳು ತಿಳಿದರೆ, ಆ ಕಾಲದ ಜನರ ನಡೆನುಡಿಗಳು ಗೊತ್ತಾದರೆ, ಏಳು ಅಂತಸ್ತಿನ ಉಪ್ಪರಿಗೆಯ ಮನೆಯನ್ನೇ ಕಟ್ಟಿಬಿಡುತ್ತಾರೆ. ಇಂಥ ಆಭರಣಗಳನ್ನು ಪಡೆಯುವುದಕ್ಕೆ ಕನ್ನಡ ಮಾತೆಗೆ ಪ್ರಾಪ್ತಿ ಬೇಕು. ಆಕೆಗೆ ಅಂಥ ಆಭರಣಗಳನ್ನು ಒದಗಿಸಿಕೊಡುವ ಮಕ್ಕಳಿಗೂ ಪೂರ್ವಜನ್ಮ ಸುಕೃತದ ಫಲ ಬೇಕು. ಇಂಥವರು ನಮ್ಮಲ್ಲಿ ಯಾರಾದರೂ ಇದ್ದಾರೆಯೆ? ಇರಬಹುದು. ಮುಂದಂತೂ ಆಗಿಯೇ ಆಗುವರು; ಆಗಲೇಬೇಕು. ಈಗಲೂ ಕೆಲವರು ಚಟ್ಚಾಕವಾಗಿ ಬೇಜಾರಾಗದಂತೆ ಅನಂತವೂ ಸುಂದರವೂ ಆದ ನದಿಯ ಪ್ರವಾಹದಂತೆ ಮಾತನಾಡುವುದು ವಾಠಕರ ಲಕ್ಷ್ಯಕ್ಕೆ ಬಂದಿರಬಹುದು. ಅಂಥವರು ಒಂದು ರವೆಯನ್ನು ಒಂದು ಬೆಟ್ಟವನ್ನಾಗಿ ಮಾಡುವರು. ಅರೇಬಿಯನ್ ನೈಟ್ಸಿನ ಒಂದು ಕಥೆಯಲ್ಲಿ ಬಾಯಿಕಟ್ಟಿದ ಒಂದು ಪಾತ್ರೆಯ ಮುಚ್ಚಳು ತೆರೆದ ಕೂಡಲೆ ಅದರಿಂದ ಹೊರಟ ಹೊಗೆಯು ಭೂಮ್ಯಾಕಾಶ ಗಳನ್ನು ಏಕರೀತಿಯಾಗಿ ಆವರಿಸಿಕೊಂಡು ಅದರೊಳಗಿನಿಂದ ವಿಚಿತ್ರವಾದ ಒಂದು ಭೂತಾ ಕಾರವು ಗೋಚರವಾಗುತ್ತದೆ. ಇವರು ಮಾತನಾಡಿ ಮುಗಿಸಿದ ಮೇಲೆಯೂ ನಮಗೆ ಹಾಗೇ

ಆಗುತ್ತದೆ. ಇಂಥವರನ್ನು ಕಂಡರೆ ಇವರೇಕೆ ಕಥೆಗಳನ್ನು ಬರೆಯಬಾರದೆಂದು ನನ್ನ ಮನಸ್ಸಿಗೆನ್ನಿಸುತ್ತದೆ.

ಈಗ ಮೈಸೂರು ಚರಿತ್ರೆಯ ಮೇಲೆ ಇರುವ ಕಾದಂಬರಿಗಳೆಂದರೆ-ನನಗೆ ತಿಳಿದಿರುವವು-ಮ.ಪುಟ್ಟಣ್ಣನವರ "ಮಾಡಿದ್ದುಣ್ಣೋ ಮಹಾರಾಯ" ಮತ್ತು ಕೆರೂರು ವಾಸುದೇವಾಚಾರ್ಯರ "ಯದುಮಹಾರಾಜ". ಇವು ಮೊದಲನೆಯ ತರಗತಿಗೆ ಸೇರಿದವುಗಳಲ್ಲ. ಆದರೂ ಮೈಸೂರು ಚರಿತ್ರೆಯ ಮೇಲೆ ಎರಡು ಐತಿಹಾಸಿಕ ಕಾದಂಬರಿಗಳಿವೆ ಎಂದು ನಾವು ಹೆಮ್ಮೆಪಡಬಹುದು. ಮುಂದೆ ಇಂಥ ಕಾದಂಬರಿಗಳನ್ನು ಬರೆಯತಕ್ಕವರು ಇಂಗ್ಲಿಷ್ ಮತ್ತು ಇತರ ಭಾಷೆಗಳಲ್ಲಿ ಶಕ್ತರಾದ ಗ್ರಂಥಕರ್ತರು ಬರೆದಿರುವ ಐತಿಹಾಸಿಕ ಕಾದಂಬರಿಗಳನ್ನು ಓದಿ ಅವುಗಳಲ್ಲಿ ವ್ಯಕ್ತವಾಗಿರುವ ಕಲಾಕೌಶಲ್ಯವನ್ನೂ ಕವಿಸಾಮರ್ಥ್ಯವನ್ನೂ ಚೆನ್ನಾಗಿ ಗಮನಕೊಟ್ಟು ವ್ಯಾಸಂಗ ಮಾಡಬೇಕು. ತಾವು ಬರೆದ ಗ್ರಂಥಗಳು ಅವುಗಳ ಸರಿಸಮಕ್ಕೆ ಬರುತ್ತವೆಯೇ ಎಂದು ಹೋಲಿಸಿ ನೋಡಬೇಕು. ಅಷ್ಟೇ ಅಲ್ಲ; ತಮಗೆ ಮೇಲ್ಪಂಕ್ತಿಯಾಗಿರಬಹುದಾದ ಗ್ರಂಥಗಳಲ್ಲಿ ಏನಾದರೂ ಕುಂದು ಕೊರತೆಗಳು ಇದ್ದರೆ ಅವು ತಮ್ಮ ಗ್ರಂಥಗಳಲ್ಲಿ ಪರಿಹೃತವಾಗಿಯೇ ಎಂದು ನೋಡಬೇಕು. ಮುಖ್ಯವಾಗಿ ಅವಕ್ಕೆ ಕಾವ್ಯವೆನ್ನಿಸಿಕೊಳ್ಳುವ ಯೋಗ್ಯತೆ ಇದೆಯೇ ಎಂದು ವಿಚಾರಮಾಡಬೇಕು. ಇಲ್ಲದಿದ್ದರೆ ಅಂಥ ಗ್ರಂಥಗಳಿಂದ ಲೇಖಕನಿಗೆ ಸುಖವಿಲ್ಲ; ಪಾಠಕನಿಗೆ ಆನಂದವಿಲ್ಲ. ಅವಕ್ಕೆ ಬದಲಾಗಿ ಕೇವಲ ದೇಹಶ್ರಮ, ಅರ್ಥವ್ಯಯ, ಕಾಲಹರಣ, ಕನ್ನಡ ಭಾಷಾ ಸಾಹಿತ್ಯಗಳಲ್ಲಿ ಅನಾದರಣೆ ಇವೇ ಫಲಿಸುವುವು.

**ಒಡೆಯರ ಕಾಲ**

ಮೈಸೂರು ಚರಿತ್ರೆಯ ಮೇಲೆ ಕನ್ನಡ, ಇಂಗ್ಲಿಷ್, ಫ್ರೆಂಚ್, ಪಾರ್ಸಿ, ಉರ್ದು, ಈ ಭಾಷೆಗಳಲ್ಲಿ ಬರೆದ ಅನೇಕ ಗ್ರಂಥಗಳಿವೆ. ಇವುಗಳಲ್ಲಿ ಕೆಲವು ತೀರ ಸಣ್ಣ ಗ್ರಂಥಗಳು. ಆದರೂ ಅವುಗಳಲ್ಲಿ ಮಿಕ್ಕ ಗ್ರಂಥಗಳಲ್ಲಿಲ್ಲದ ಅಪೂರ್ವವಾದ ಕೆಲವು ವಿಷಯಗಳು ದೊರಕುತ್ತವೆ. (ಅವುಗಳ ಹೆಸರನ್ನೆಲ್ಲ ಪರಿಶಿಷ್ಟರೂಪವಾಗಿ ಈ ಉಪನ್ಯಾಸದ ಕೊನೆಯಲ್ಲಿ ಕೊಟ್ಟಿದ್ದೇನೆ.) ಇವುಗಳಲ್ಲಿ ಅನ್ಯಭಾಷೆಗಳಲ್ಲಿರತಕ್ಕ ಗ್ರಂಥಗಳು ವಿಶೇಷವಾಗಿ ಹೈದರಲಿ ಟಿಪುಸುಲ್ತಾನರ ಆಳಿಕೆಗಳ ವಿಚಾರವಾಗಿವೆ. "ವಂಶರತ್ನಾಕರ" "ವಂಶಾವಳಿ" ಮುಂತಾದ ಗ್ರಂಥಗಳೂ ಮೈಸೂರು ರಾಜರಿಗೆ ಮೂಲಪುರುಷರಾದ ಯದುರಾಯರಿಂದ ಆರಂಭವಾಗುತ್ತವೆ (ಸು.೧೪೦೦). ಈ ಗ್ರಂಥಗಳು ಇವರಿಗಿಂತಲೂ ಪೂರ್ವದಲ್ಲಿದ್ದ ಗಂಗರು, ಪಲ್ಲವರು, ಚಾಳುಕ್ಯರು, ಹೊಯಿಸಳರು ಮುಂತಾದ ಕನ್ನಡ ದೇಶದ ರಾಜರುಗಳ ವಿಚಾರವನ್ನು ಹೇಳುವುದಿಲ್ಲ. ಇವರಲ್ಲಿ ಹಯಿಸಳ ವಿಷ್ಣುವರ್ಧನನು ಮಹಾ ಪ್ರಸಿದ್ಧನೂ ಶೂರನೂ ಶಕ್ತನೂ ಆದ ರಾಜ. ಅವನೇ ಮೈಸೂರು ದೇಶವನ್ನು ಸ್ಥಾಪಿಸಿದವನೆಂದು ಹೇಳಬಹುದು. ಆದರೂ ಮೈಸೂರಿನ ಒಡೆಯರ ಚರಿತ್ರೆ ಆರಂಭವಾಗುವುದು ಯದುಮಹಾರಾಜರಿಂದ. ಈ ಒಡೆಯರಿಗೆ ಅವರೇ ಮೂಲಪುರುಷರು. ಅವರು ಉತ್ತರ ದೇಶದಿಂದ ಬಂದು ಮಾರನಾಯಕನನ್ನು ಕೊಂದು

ಇಲ್ಲಿಯ ರಾಜರ ಮಗಳನ್ನು ಮದುವೆಯಾಗಿ ರಾಜ್ಯಸಂಪಾದನೆ ಮಾಡಿದ್ದು ಎಲ್ಲರೂ ಓದಿರುವ ವಿಷಯ; ಈ ಕಥೆಯನ್ನೇ ಹಿಂದೆ ಹೇಳಿರುವಂತೆ, ಕೆರೂರ ವಾಸುದೇವಾಚಾರ್ಯರು ಪ್ರತಿಪಾದಿಸಿ ತಮ್ಮ ಗ್ರಂಥವನ್ನು ಬರೆದಿದ್ದಾರೆ. ಅಲ್ಲಿಂದ ಮುಂದಕ್ಕೆ ಹೈದರನು ಸಿಂಹಾಸನವನ್ನು ಆಕ್ರಮಿಸುವವರೆಗೆ ಆಳಿದ ರಾಜರಲ್ಲಿ ರಾಜವೊಡೆಯರು, ಕಂಠೀರವ ನರಸರಾಜವೊಡೆಯರು, ಚಿಕ್ಕದೇವರಾಜವೊಡೆಯರು ಇವರು ಪ್ರಸಿದ್ಧರು. ರಾಜವೊಡೆಯರಿಗೂ ಅವರ ಸಹೋದರರಿಗೂ ಇದ್ದ ನಡವಳಿಕೆಯನ್ನು ಕುರಿತು ಒಂದು ಸೊಗಸಾದ ನಾಟಕವನ್ನಾಗಲಿ ಕಾದಂಬರಿಯನ್ನಾಗಲಿ ಬರೆಯಬಹುದು:

ಹಿರಿಯ ಚಾಮರಾಜವೊಡೆಯರು ೧೫೭೬ರಲ್ಲಿ ಕಾಲವಾಗಲು ಅವರ ಅಣ್ಣನ ಮಕ್ಕಳಾದ ಬೆಟ್ಟದ ಚಾಮರಾಜವೊಡೆಯರು ಪಟ್ಟಕ್ಕೆ ಬಂದರು. ಇವರು ಆಳಿದ ಎರಡು ವರ್ಷಗಳಲ್ಲಿ ಖಜಾನೆಯು ಬರಿದಾಗಿ ಸಾಲಸೋಲಗಳಾಗಲು ಹಳೆಯ ಪೈಕದವರು ಅವರನ್ನು ಸಿಂಹಾಸನದಿಂದ ತೆಗೆದು ಆ ಸ್ಥಾನದಲ್ಲಿ ರಾಜವೊಡೆಯರಿಗೆ ಪಟ್ಟಾಭಿಷೇಕ ಮಾಡಬೇಕೆಂದು ಯೋಚಿಸಿದರು. ಆದರೆ ಹಣಕಾಸಿಲ್ಲದ ಈ ರಾಜ್ಯಕ್ಕೆ ದೊರೆಯಾಗಲು ಅವರು ಒಪ್ಪಲಿಲ್ಲ. ಕೊನೆಗೆ ರಾಣಿವಾಸದವರ ನಗನಾಣ್ಯಗಳನ್ನು ಮಾರಿಯೂ, ತಮ್ಮ ತಮ್ಮಲ್ಲಿ ಹಣವನ್ನು ಎತ್ತಿಯೂ ಒಟ್ಟು ಐದು ಸಾವಿರ ವರಹಗಳನ್ನು ಮಾಡಿಕೊಡಲು ರಾಜವೊಡೆಯರು ಒಪ್ಪಿದರು. ಪಟ್ಟಾಭಿಷೇಕವಾಯಿತು. ಬೆಟ್ಟದವೊಡೆಯರು ದರ್ಬಾರಿಗೆ ಬರಲು ಅಲ್ಲಿದ್ದ ಅಧಿಕಾರಿಗಳು ಅವರನ್ನು ಕುರಿತು "ದೇಶದ ಹಣಕಾಸಿನ ಸ್ಥಿತಿಯು ಚೆನ್ನಾಗಿಲ್ಲದಿದ್ದರಿಂದ ಈ ರೀತಿ ಏರ್ಪಾಡು ಮಾಡಬೇಕಾಯಿತು; ಈಗಲೂ ತಾವು ಶ್ರೀರಂಗಪಟ್ಟಣದಲ್ಲಿ ಒಡೆಯರ ಕಡೆಯ ಪ್ರತಿನಿಧಿಗಳಾಗಿದ್ದುಕೊಂಡಿರಬಹುದು; ಅದರಿಂದ ಗೌರವವೂ ಆನುಕೂಲ್ಯವೂ ಉಂಟು. ಅಥವಾ ಸ್ವತಂತ್ರರಾಗಿ ಇರಲು ಇಷ್ಟಪಟ್ಟರೆ ಮೈಸೂರಿನಲ್ಲಿಯೇ ಅದಕ್ಕೆ ತಕ್ಕ ಏರ್ಪಾಡನ್ನೂ ಮಾಡಿದೆ" ಎಂದು ಹೇಳಿದರೆ. ಬೆಟ್ಟದವೊಡೆಯರಿಗೆ ಕೋಪ ಬರಲು 'ನಾನು ಅಲ್ಲಿಯೂ ಇರುವುದಿಲ್ಲ!' ಎಂದು ಗರ್ಜಿಸಿ ಹೊರಟು ಹೋದರು. ಆದರೆ ಮನಸ್ಸು ಸ್ವಲ್ಪ ಶಾಂತವಾದ ಮೇಲೆ ಮೈಸೂರಿನಲ್ಲಿಯೇ ಇದ್ದುಕೊಂಡಿದ್ದರು.

ಹೀಗಿರಲು ಕಾರುಗಹಳ್ಳಿಯ ಪಾಳೆಯಗಾರನು ಅಕಸ್ಮಾತ್ತಾಗಿ ಮೈಸೂರಿನ ಕೋಟೆಗೆ ಮುತ್ತಿಗೆ ಹಾಕಿದನು. ಬೆಟ್ಟದವೊಡೆಯರು ತಮಗೆ ಅದು ಏನೂ ಸಂಬಂಧ ಪಟ್ಟದ್ದಲ್ಲವೆಂಬಂತೆ ನಿಶ್ಚಿಂತೆಯಾಗಿ ಓಡಿಯಾಡುತ್ತಿದ್ದರು. ರಾಜನ ತಲೆಗೆ ಕಟ್ಟಿದ್ದು ತಾನೇ ರಾಜ್ಯದ ಯೋಗಕ್ಷೇಮ - ಎಂಬುದು ಅವರ ಭಾವ. ಇದನ್ನು ನೋಡಿ ಹೆಂಗಸೊಬ್ಬಳು "ಇದೇನು!ಸ್ವಾಮಿಯವರು ಸುಮ್ಮನೆ ಕೈಕಟ್ಟಿಕೊಂಡು ತಿರುಗುತ್ತಿರಬಹುದಾದ ಕಾಲವೇ ಇದು?" ಎಂದು ಸ್ವಲ್ಪ ಮೂದಲಿಸಿದಳು. ಕೂಡಲೇ ಅವರಿಗೆ ವೀರಾವೇಶವುಂಟಾಗಿ ಕತ್ತಿಯನ್ನು ಹಿಡಿದು ಸೈನಿಕರೊಡನೆ ಹೊರಟು ಕೋಟೆಯ ಬಾಗಿಲಿಗೆ ಹಾಕಿದ್ದ ಅಗಳಿಯನ್ನು ಮುರಿದು, ಶತ್ರುಗಳ ಮೇಲೆ ಬಿದ್ದು ಅವರನ್ನು ಪೂರ್ತಿಯಾಗಿ ಸೋಲಿಸಿದರು. ಅಲ್ಲಿಂದ ಮುಂದೆ ಯಾವಾಗ ಯುದ್ಧವಾದರೂ ಸುಮ್ಮನೆ ಕುಳಿತಿರದೆ, ತಮ್ಮನ ಸೇನೆಗೆ ನಾಯಕನಾಗಿದ್ದುಕೊಂಡು ಯುದ್ಧಮಾಡಿ ಜಯದ ಮೇಲೆ

ಜಯವನ್ನು ಪಡೆಯುತ್ತಿದ್ದರು.

ಕೆಲವು ಕಾಲದ ಮೇಲೆ ಅಣ್ಣ ತಮ್ಮಂದಿರಿಗೆ ಮನಸ್ತಾಪವು ಬಂತು. ಬೆಟ್ಟದ ವೊಡೆಯರು ಶ್ರೀರಂಗಪಟ್ಟಣಕ್ಕೆ ಹೋಗಿ ವಿಜಯನಗರದ ಅರಸರ ಸಹಾಯದಿಂದ ಯುದ್ಧಮಾಡಿ ತಮ್ಮ ಪಿತ್ರಾರ್ಜಿತವಾದ ರಾಜ್ಯವನ್ನು ಪುನ: ಪಡೆಯಬೇಕೆಂದು ಪ್ರಯತ್ನಪಡುತ್ತಿರಲು, ಒಂದು ದಿನ ಅಜಾಗರೂಕತೆಯಿಂದ ಸೆರೆಸಿಕ್ಕಿದರು. ಅವರನ್ನು ರಾಜವೊಡೆಯರ ಹತ್ತಿರಕ್ಕೆ ಕರೆದುಕೊಂಡು ಹೋದರು. ಅಣ್ಣನನ್ನು ನೋಡಿದ ಕೂಡಲೆ ಎಲ್ಲವೂ ಮರೆತು ರಾಜವೊಡೆಯರಿಗೆ ಏನೋ ಆನಂದವಾಗಲು ಅವರು ಅಣ್ಣನನ್ನು ಬಾಚ್ಚಿ ತಬ್ಬಿಕೊಳ್ಳಬೇಕೆಂದು ತೋಳುಗಳನ್ನು ನೀಡಿ ಕೊಂಡು ಓಡಿಬಂದರು. ಇದನ್ನು ಕಂಡು, ತಮ್ಮನು ತನ್ನನ್ನು ಕೊಲ್ಲುವುದಕ್ಕೆ ಬರುತ್ತಿದ್ದಾನೆಂದು ಭಯಗ್ರಸ್ತರಾಗಿ ಬೆಟ್ಟದವೊಡೆಯರು ಬಲಪ್ರಕಾಶಮಾಡಿ ರಾಜವೊಡೆಯರನ್ನು ನೆಲಕ್ಕೆ ಹಾಕಿ ಅದಿಮಿದರು. ರಾಜವೊಡೆಯರು ಇದಕ್ಕೆ ಶಿಕ್ಷೆಯಾಗಿ ಅಣ್ಣನನ್ನು ಅರಮನೆಯಿಂದ ಹೊರಡಿಸಿ ದರು. ಅವರ ಕೋಪವು ಅಷ್ಟರಲ್ಲಿಯೇ ಮುಗಿಯಿತು.

ಹೀಗಿರಲು ಕುಮಾರನರಸರಾಜನೆಂಬ ಅರಸು ಮನೆತನದವನೊಬ್ಬನು, ರಾಜನ ಮೆಚ್ಚುಗೆಯನ್ನು ಪಡೆಯಬೇಕೆಂದೋ ಏನೋ, ಒಬ್ಬ ಕಟುಕನಿಗೆ ಹೇಳಿ ಬೆಟ್ಟದೊಡೆಯರ ಎರಡು ಕಣ್ಣುಗಳನ್ನೂ ಕೀಳಿಸಿದನು. ಇದು ರಾಜವೊಡೆಯರ ಕಿವಿಗೆ ಬಿತ್ತು. ಅವರು ಕುದುರೆ ಯನ್ನು ಹತ್ತಿಕೊಂಡು ಎಲ್ಲಿಗೋ ಯುದ್ಧಕ್ಕೆ ಹೊರಡುವವರಾಗಿದ್ದರೂ, ಹಾಗೆಯೇ ನಿಂತು, ಅಲ್ಲಿಂದಲೇ ಕುಮಾರನರಸರಾಜನಿಗೂ ಅವನ ಅಣ್ಣನಿಗೂ ಅಲ್ಲಿಗೆ ಬರುವಂತೆ ಹೇಳಿ ಕಳುಹಿಸಿ, ಅವರು ಬಂದಕೂಡಲೆ ನರಸರಾಜನ ಅಣ್ಣನ ಕಣ್ಣನ್ನು ಕೀಳಿಸಿಬಿಡುವುದಾಗಿ ಹೇಳಿದರು. ನರಸರಾಜನು ತನ್ನ ಅಣ್ಣನು ಮಾಡಿದ್ದ ಅಪರಾಧವೇನೆಂದು ಕೇಳಿದನು. ''ಹಾಗಾದರೆ ಕಟುಕ ರಿಂದ ಕಣ್ಣು ಕೀಳಿಸುವುದಕ್ಕೆ ನಮ್ಮಣ್ಣನು ಮಾಡಿದ ಅಪರಾಧವೇನೋ, ಖೂಳ?' ಎಂದು ರಾಜವೊಡೆಯರು ಪ್ರತಿ ಪ್ರಶ್ನೆಯನ್ನು ಹಾಕಿದರು. ಅವನಿಗೆ ಏನು ಶಿಕ್ಷೆಯಾಯಿತೋ ತಿಳಿದು ಬಂದಿಲ್ಲ. ತಮ್ಮ ಅಣ್ಣನನ್ನು ಮಾತ್ರ ಅವರು ಕೂಡಲೆ ಬಿಡುಗಡೆ ಮಾಡಿಸಿ ಒಂದು ಚೀಲದ ತುಂಬ ವರಹಗಳನ್ನು ತರಿಸಿಕೊಟ್ಟು, ಇಂಥ ಘೋರವಾದ ಸ್ಥಳವನ್ನು ಬಿಟ್ಟು ಮತ್ತೆಲ್ಲಾದರೂ ಹೋಗಿ ಸುರಕ್ಷಿತವಾಗಿರಬೇಕೆಂದು ಪ್ರಾರ್ಥಿಸಿಕೊಂಡರು. ಅದರಂತೆ ಅವರು ರಂಗಸಮುದ್ರಕ್ಕೆ ಹೋಗಿ ತಮ್ಮನ ಮೇಲೆ ಯಾವ ದ್ವೇಷವೂ ಇಲ್ಲದೆ ಸುಖವಾಗಿದ್ದುಕೊಂಡಿದ್ದರು.

ಕಂಠೀರವ ನರಸರಾಜವೊಡೆಯರು ಹಿಂದೆ ಹೇಳಿದ ಬೆಟ್ಟದ ಚಾಮರಾಜವೊಡೆಯರ ಮಕ್ಕಳು: ತಂದೆಯಲ್ಲಿದ್ದ ಕ್ಷಾತ್ರತೇಜವು ಮಗನಲ್ಲಿ ಪೂರ್ತಿಯಾಗಿ ಬಂದಿತ್ತು. ದೊರೆಯಾಗುವು ದಕ್ಕೆ ಮುಂಚೆ ಇನ್ನೂ ಹಳ್ಳಿಯಲ್ಲಿದ್ದಾಗಲೇ ಅವರು ತಿರುಚನಾಪಳ್ಳಿಯ ಜಟ್ಟಿಯನ್ನು ಸೋಲಿಸಿದ್ದರೆಂಬ ಒಂದು ಕಥೆಯಿದೆ. ಇವರ ಶೌರ್ಯದ ಜೊತೆಗೆ ರಾಜ್ಯವಾಳುವ ಸಾಮರ್ಥ್ಯ ವೂ, ಜನರನ್ನು ಮೆಚ್ಚಿಸುವ ಔದಾರ್ಯವೂ ಇದ್ದುವು. ದಳವಾಯಿ ವಿಕ್ರಮರಾಜನ ಸಂಬಂಧ ವಾಗಿ ಒಂದೆರಡು ವಿಷಯಗಳನ್ನು ತಿಳಿಸುತ್ತೇನೆ. ಅವುಗಳಲ್ಲಿ ಒಂದೊಂದೇ ಒಂದೊಂದು ದೊಡ್ಡ ಕಥೆಯಾಗಿ ಪರಿಣಮಿಸಬಹುದು.

ರಾಜವೊಡೆಯರ ಕಾಲಾನಂತರ ಅವರ ಮಗನು ಪಟ್ಟಕ್ಕೆ ಬಂದನು; ಆದರೆ ಅವನು ಆಳಿದ್ದು ಒಂದೂವರೆ ವರ್ಷವೇ; ಹಿಂದಿನಿಂದಲೂ ದಳವಾಯಿಯಾಗಿದ್ದ ವಿಕ್ರಮರಾಜನು ರಾಜನಿಗೆ ವಿಷಹಾಕಿ ಕೊಲ್ಲಿಸಿದನು. ಕಂಠೀರವ ನರಸರಾಜರು ಮೈಸೂರಿಗೆ ಬಂದರು. ಆಗ ವಿಕ್ರಮರಾಜನು ಅವರನ್ನು ಅರಮನೆಯ ಹೊರವಲಯದಲ್ಲಿಯೇ ಒಂದು ಕಡೆ ಇಟ್ಟಿರುವಂತೆ ಏರ್ಪಾಡುಮಾಡಿ, ಅವರ ಮೇಲೆ ಕೆಲವು ಕಾವಲುಗಾರರನ್ನು ನಿಯಮಿಸಿ, ಪಟ್ಟಾಭಿಷೇಕದ ಸುದ್ದಿಯನ್ನೇ ಎತ್ತದೆ ಹತ್ತಿರದಲ್ಲಿದ್ದ ಪಾಳೆಯಪಟ್ಟಿಗೆ ಹೊರಟು ಹೋದನು. "ಒಡೆಯರ ಮನಸ್ಸಿಗೆ ಅಸಮಾಧಾನವಾಗಿರುವಂತಿದೆ; ತಮ್ಮ ರಾಜ್ಯವನ್ನು ಪಡೆದುಕೊಳ್ಳುವುದಕ್ಕಾಗಿ ಅವರು ಪ್ರಯತ್ನಪಡುವ ಹಾಗೆ ತೋರುತ್ತದೆ" ಎಂದು ಯಾರೋ ವಿಕ್ರಮರಾಜನಿಗೆ ತಿಳಿಸಿದರು. ಅದಕ್ಕೆ ವಿಕ್ರಮರಾಜನು 'ಹುಷಾರ್! ಇನ್ನೂ ನಾನು ಅವನಿಗೆ ಪಟ್ಟಾಭಿಷೇಕ ಮಾಡಿಲ್ಲವೆಂಬುದು ಆತನಿಗೆ ಜ್ಞಾಪಕದಲ್ಲಿರಲಿ" ಎಂದು ಉತ್ತರಕೊಟ್ಟನು.

ಹೀಗೆ ವಿಕ್ರಮರಾಜನು ಊರಿನಲ್ಲಿಲ್ಲದಿರುವಾಗ ಕಾವಲುಗಾರರು ಕಂಠೀರವ ನರಸರಾಜರಿಗೆ ಹಿಂದೆ ನಡೆದ ವರ್ತಮಾನಗಳನ್ನೆಲ್ಲಾ ತಿಳಿಸಿ, ಆ ಸ್ವಾಮಿದ್ರೋಹಿಯನ್ನು ನಾಶಪಡಿಸುವುದಕ್ಕೆ ಸಿದ್ಧವಾಗಿದ್ದೇವೆಂದು ಹೇಳಿಕೊಂಡರು. ಒಡೆಯರು ಅದಕ್ಕೆ ಒಪ್ಪಿದರು.

ವಿಕ್ರಮರಾಜನು ಮೈಸೂರಿಗೆ ಹಿಂತಿರುಗಿ ಬಂದ ರಾತ್ರಿಯೇ, ಇಬ್ಬರು ಊಳಿಗದವರು ಅವನ ಮನೆಯ ಗೋಡೆಯನ್ನು ಇಳಿದು ಸಮಯ ಕಾಯುತ್ತಿದ್ದರು. ಸ್ವಲ್ಪ ಹೊತ್ತಿನ ಮೇಲೆ ವಿಕ್ರಮರಾಜನು ಒಂದು ಪಂಜನ್ನು ತೆಗೆಸಿಕೊಂಡು ಹೊರಗೆ ಹೊರಟನು. ಹೊರಟದ್ದೇ ತಡ, ಪಂಜಿನವನು ಹತನಾದನು. ಪಂಜು ಪೂರ್ತಿಯಾಗಿ ಆರಿಹೋಗಿ ಕಗ್ಗತ್ತಲಾಯಿತು. ವಿಕ್ರಮನು "ಯಾರು ನೀವು?" ಎಂದು ಕೂಗಿದನು. ಅದಕ್ಕೆ "ನಿನ್ನ ಶತ್ರು!" ಎಂದು ಹೇಳುತ್ತ ಒಬ್ಬ ಊಳಿಗದವನು ಒಂದು ಗುದ್ದನ್ನು ಕೊಟ್ಟನು. ಆದರೆ ವಿಕ್ರಮರಾಜನು ಬಲಶಾಲಿಯಾಗಿದ್ದುದರಿಂದ ಅವನನ್ನು ಕೆಳಕ್ಕೆ ಹಾಕಿಕೊಂಡು ಮೇಲೆ ಕುಳಿತು ಕುತ್ತಿಗೆಯನ್ನು ಮಿಸುಕುತ್ತ ಯಾರಾದರೂ ಸಹಾಯಕ್ಕೆ ಬರಬೇಕೆಂದು ಕೂಗುತ್ತಿದ್ದನು. ಕೃಷ್ಣಪಕ್ಷದ ಕಗ್ಗತ್ತಲೆ; ಆದ್ದರಿಂದ ಹತ್ತಿರದಲ್ಲಿದ್ದ ಮತ್ತೊಬ್ಬ ಊಳಿಗದವನು ಹೊಡೆಯುವುದಕ್ಕೆ ತೋರದೆ ತನ್ನ ಜೊತೆಗಾರನನ್ನು ಕುರಿತು "ಕೆಳಗಿದ್ದೀಯೊ, ಮೇಲಿದ್ದೀಯೋ?" ಎಂದು ಕೇಳಿದನು. "ಕೆಳಗೆ! ಕೆಳಗೆ!" ಎಂದು ಸಿಕ್ಕಿಕೊಂಡ ಉಸಿರಿನಲ್ಲಿ ಉತ್ತರವು ಬಂತು. ಇದರಿಂದ ವಿಕ್ರಮರಾಜನನ್ನು ಕೊಂದುಹಾಕುವುದು ಸುಲಭವಾಯಿತು.

ಚಿಕ್ಕದೇವರಾಜವೊಡೆಯರ ಆಳಿಕೆಯ ಮೇಲೆ ಬೇಕಾದಷ್ಟು ಬರೆಯಬಹುದು. ಆ ರಾಜರನ್ನು ಕುರಿತೇ ಅನೇಕ ಕಥೆಗಳನ್ನು ಬರೆಯುವುದಕ್ಕೆ ಅವಕಾಶವಿದೆ. ಅದನ್ನು ಬಿಟ್ಟು ಆ ಕಾಲದ ಸ್ಥಿತಿಯನ್ನು ಜ್ಞಾಪಿಸಿಕೊಂಡರೆ ಆ ಸನ್ನಿವೇಶದಲ್ಲಿ ಯಾವ ವಸ್ತುಪಾತ್ರಗಳನ್ನು ಬೇಕಾದರೂ ಕಲ್ಪಿಸಿಟ್ಟು, ಸೊಗಸಾದ ಕಥೆಗಳನ್ನು ಬರೆಯಬಹುದು. ಆ ಕಾಲವು ಸ್ವಲ್ಪಮಟ್ಟಿಗೆ ಇಂಗ್ಲೆಂಡಿನಲ್ಲಿ ರಾಜನಾಗಿದ್ದ ಎಂಟನೆಯ ಹೆನ್ರಿಯ ಕಾಲದ ಹಾಗೆ; ಆಗ ಮೂರು ಮತದ

ಪ್ರಧಾನಿಗಳು-ಒಂದು ಕಡೆ ಜೈನಮತದ ವಿರೂಪಾಕ್ಷಪಂಡಿತ, ಮತ್ತೊಂದು ಕಡೆ ಲಿಂಗಾಯಿತ ಷಡಕ್ಷರಯ್ಯ, ಇನ್ನೊಂದು ಕಡೆ ಶ್ರೀವೈಷ್ಣವ ತಿರುಮಲಯ್ಯಂಗಾರ್ಯ; ಇವರೆಲ್ಲರಿಗೂ ಒಂದೊಂದು ಕಾಲದಲ್ಲಿ ಕಿವಿಗೊಡುತ್ತಿದ್ದ ರಾಜ, ಇವರ ಕಿರುಕುಳಕ್ಕೆ ಸಿಕ್ಕಿ ನರಳುತ್ತಿದ್ದ ಜನಗಳು. ಈ ಪ್ರಧಾನಿಗಳಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ಕಾಲದಲ್ಲಿ ತಮ್ಮ ತಮ್ಮ ಮತವನ್ನು ಪ್ರಬಲಗೊಳಿಸುತ್ತ ಕೊನೆಗೆ ಎಲ್ಲರಿಗೂ ಶತ್ರುಗಳಾಗಿ ಪರಿಣಮಿಸಿ ಮೂಲೆಗೆ ಬೀಳುವರು. ತಿರುಮಲಯ್ಯಂಗಾರ್ಯನ ವಿಚಾರವಾಗಿ ಈ ಸಂದರ್ಭದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ.*

ಈತನು-ತಿರುಮಲಯ್ಯಂಗಾರ್ಯನು-ರಾಜನಿಗೆ ವಿಷ್ಣುದೀಕ್ಷೆಯನ್ನು ಕೊಟ್ಟು ಅವನನ್ನು ವಿಷ್ಣುಭಕ್ತನನ್ನಾಗಿ ಮಾಡಿದ್ದು ಸಾಲದೆ, ಅವನ ನೆಂಟರಿಷ್ಟರಾದ ಅರಸುಗಳೆಲ್ಲರೂ ವೈಷ್ಣವರಾಗುವ ಹಾಗೆ ಮಾಡುವನು. ಅವರು ಬಲವಂತಕ್ಕೆ ಮಾಘಸ್ನಾನ ಮಾಡುವರು. ತಿರುಮಲಯ್ಯಂಗಾರ್ಯನ ಅಪ್ಪಣೆಯಂತೆ ಇವರೆಲ್ಲರೂ ತಮ್ಮನ್ನು ವೈಷ್ಣವರನ್ನಾಗಿ ಮಾಡಿ ಉದ್ಧಾರ ಮಾಡಿದ್ದಕ್ಕಾಗಿ ತಮ್ಮ ಕೃತಜ್ಞತೆಯನ್ನು ತೋರಿಸಿ ಮಹಾರಾಜರಿಗೆ ಒಂದು ವಿಜ್ಞಾಪನಾ ಪತ್ರಿಕೆಯನ್ನು ಬರೆದು ಒಪ್ಪಿಸುವರು. ಆದರೆ ಈ ಹೊಸ ಸಂಪ್ರದಾಯವು ಅವರಿಗೆ ಒಗ್ಗಿಬರುವುದಿಲ್ಲ-ಒಬ್ಬನ ಮಗ ಸತ್ತು ಹೋಗುವನು, ಮತ್ತೊಬ್ಬನ ಮನೆ ಹಾಳಾಗುವುದು, ಇನ್ನೊಬ್ಬನ ಐಶ್ವರ್ಯವು ಪೋಗುವುದು. ಆದ್ದರಿಂದ ಇವರೆಲ್ಲರೂ ಕೆಲವು ದಿನಗಳ ತರುವಾಯ ಪುನ: ಪುನ: ಮಹಾರಾಜನಿಗೆ ತಾವು ಮತ್ತೆ ಶೈವರೇ ಆಗಬೇಕೆಂದು ವಿಜ್ಞಾಪನಾ ಪತ್ರಿಕೆಯನ್ನು ಸಮರ್ಪಿಸುವರು. ರಾಜನು ಅವರ ಪ್ರಾರ್ಥನೆಯನ್ನು ಸಲ್ಲಿಸುವನು. ಇದರ ವಿಚಾರವು "ವಂಶರತ್ನಾಕರ"ದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಪ್ರಧಾನ ಲಿಂಗಣ್ಣಯ್ಯನನ್ನು ಔರಂಗಸೇಬನ ಹತ್ತಿರಕ್ಕೆ ಕಳುಹಿಸಿ ಅವನಿಂದ ಬಿರುದನ್ನು ಸಂಪಾದಿಸಿದ್ದು, ಅದನ್ನು ವೈಭವದಿಂದ ಮೆರವಣಿಗೆ ಮಾಡಿಸಿದ್ದು, ಪುಂಡರಾದ ಜಂಗಮರನ್ನು ಕೊಲ್ಲಿಸಿದ್ದದು, ಪ್ರತಿದಿನವೂ ನಾಮತೀರ್ಥದ ಕಾಲಕ್ಕೆ ಗೊತ್ತಾದಷ್ಟು ಹಣ ಬರದಿದ್ದರೆ ಊಟ ಮಾಡದಿರುವುದು ಮುಂತಾದ ಈ ಕಾಲದ ಒಂದೊಂದು ಸಂಗತಿಯನ್ನು ತೆಗೆದುಕೊಂಡೂ ಒಂದೊಂದು ಅಧ್ಯಾಯವನ್ನಾದರೂ ಬರೆಯಬಹುದು.

ಹೈದರನ ಕಾಲದಿಂದ ಮುಂದಕ್ಕೆ ಮೈಸೂರು ಚರಿತ್ರೆಗೆ ಬೇಕಾದಷ್ಟು ಸಾಮಗ್ರಿಗಳು ಸಿಕ್ಕುತ್ತವೆ. ಇವುಗಳನ್ನು ಒದಗಿಸಿಕೊಡುವ ಗ್ರಂಥಗಳಲ್ಲಿ ಹೈದರಾಲಿಯ ಮೇಲೆ M.M.D.L.T.ಎಂಬ

* ಇದನ್ನು "ಮಿತ್ರವಿಂದಾ ಗೋಂವಿದ"ದ ವಿಮರ್ಶೆಯಲ್ಲಿ ಸ್ವಲ್ಪ ಸೂಚಿಸಿದ್ದೇನೆ. ವಿಷಯವು ನಿಜವಾದದ್ದಾದರೂ ಅಲ್ಲಿ ನಾನು ಉಪಯೋಗಿಸಿರುವ ಒಂದೆರಡು ಪದಗಳು ಅಕ್ಷೇಪಣೀಯವೆಂದು ನನ್ನ ಮಿತ್ರರು ಅನೇಕರು ಹೇಳಿದರು. ಅನಂತರ ನನಗೂ ಹಾಗೆಯೇ ತೋರಿತು. ಅದು, ಬಂಗಾರದಂಥ ಕಾವ್ಯವು ಕೆಟ್ಟುಹೋಯಿತಲ್ಲ ಎಂಬ ಒಂದು ಅಸಮಾಧಾನಧಿಂದಲೂ ಅಗ್ರಹದಿಂದಲೂ ಬಂದ ಮಾತೇ ಹೊರತು ಮತವೈರದಿಂದಲ್ಲ. ಅದರಿಂದ ನನ್ನ ಶ್ರೀವೈಷ್ಣವ ಮಿತ್ರರಿಗೆ ಯಾರಿಗಾದರೂ ಮನಸ್ಸು ನೊಂದಿದ್ದರೆ ಅವರ ಕ್ಷಮಾಪಣೆಯನ್ನು ಬೇಡುತ್ತೇನೆ.

ಒಬ್ಬ ಫ್ರೆಂಚ್ ಗ್ರಂಥಕರ್ತನು ಬರೆದಿರುವ ಚರಿತ್ರೆಯು ಬಹು ರಸವತ್ತಾಗಿದೆ. ಈ ಗ್ರಂಥವನ್ನು ಓದುತ್ತ ಓದುತ್ತ ಅಲ್ಲಲ್ಲೇ ನೆಪೋಲಿಯನ್ನನ ಜ್ಞಾಪಕ ಬರುತ್ತದೆ. ಮತ್ತೊಬ್ಬ ಗ್ರಂಥಕರ್ತನು ಹೈದರನನ್ನು ನೆಪೋಲಿಯನ್ನಿಗೆ ಹೋಲಿಸಿ ಬರೆದಿದ್ದಾನೆ.

ಕನ್ನಡ ಚರಿತ್ರಕಾರರು ಹೈದರನಿಗೆ ಬಹಳ ಗೌರವ ಕೊಟ್ಟಿದ್ದಾರೆ. ಯಾವಾಗಲೂ ಅವನನ್ನು "ನವಾಬರು" ಎಂದು ಬಹುವಚನದಿಂದ ನಿರ್ದೇಶ ಮಾಡುತ್ತಾರೆ. ಟಿಪ್ಪೂ ಸುಲ್ತಾನನ ಮೇಲೆ ಇವರೇ ವಿಷ ಕಾರುವುದನ್ನು ನೋಡಿದರೆ ಹೈದರನು ಎಂಥ ಗುಣವಂತನಾಗಿರಬೇಕೆಂಬುದು ಗೊತ್ತಾಗುತ್ತದೆ. ಹೈದರನಿಗೆ ಬಂದ ಕೆಟ್ಟ ಹೆಸರಿಗೆ ಬಹಳಮಟ್ಟಿಗೆ ಅವನ ಶತ್ರುಗಳು ಬರೆದ ಚರಿತ್ರೆಯೇ ಕಾರಣವೆಂದು ತೋರುತ್ತದೆ. ಹೈದರನು ಸಾಯುವಾಗ ಪೂರ್ಣಯ್ಯನವರೇ ಮುಂತಾದವರನ್ನು ಕರೆಸಿ ಟಿಪ್ಪೂಸುಲ್ತಾನನಿಗೆ ಅವರ ಮೂಲಕ ಹೀಗೆ ಹೇಳಿಕಳುಹಿಸಿದನಂತೆ: '...ದೊರೆಗಳಾದ ಇಮ್ಮಡಿ ಕೃಷ್ಣರಾಜ ಒಡೆಯರು ಸ್ವಲ್ಪ ಚಾಕರಿಯಲ್ಲಿದ್ದ ನನಗೆ ಸರ್ವಾಧಿಕಾರವನ್ನೇ ಕೊಟ್ಟದ್ದರಿಂದ ನಾನು ನಮ್ಮಕ್ ಹರಾಮನೆಂದೆನ್ನಿಸಿಕೊಳ್ಳದೆ ಇದುವರೆಗೂ ಸ್ವಾಮಿ ಭಕ್ತಿಯಿಂದಲೇ ಚಾಕರಿಮಾಡಿಕೊಂಡು ಬಂದೆನು. ಮುಂದೆ ನನ್ನ ಮಗ ಟಿಪ್ಪೂಸುಲ್ತಾನನು ಇದೇ ಮೇರೆಗೆ ನಡೆದುಕೊಂಡರೆ ಈ ಅಧಿಕಾರವು ನಡೆಯುತ್ತದೆ. ಹಾಗಿಲ್ಲದೆ ದುಷ್ಟರ ಮಾತುಗಳಿಂದಲೂ ಅವನ ದುರ್ನಡತೆಯಿಂದಲೂ ಏನಾದರೂ ಹೆಚ್ಚು ಕಡಮೆಯಾಗಿ ನಡೆದರೆ, ಈ ಅಧಿಕಾರವೂ ಹೋಗಿ ಮುಂದೆ ಅವನೂ ಕೆಟ್ಟುಹೋಗುವನು'...

ಅದು ಹೇಗಾದರೂ ಇರಲಿ; ಕಾದಂಬರೀಕಾರನು ತನ್ನ ಪ್ರತಿಭಾಶಕ್ತಿಯನ್ನು ಇಲ್ಲಿ ಬೇಕಾದಹಾಗೆ ಉಪಯೋಗಿಸಬಹುದು. ಹೈದರನು ರಾಜನಿಗೆ ಕೃತಜ್ಞನಾಗಿದ್ದ ಸತ್ಸೇವಕನೆಂದು ಬೇಕಾದರೂ ವರ್ಣಿಸಬಹುದು; ಇಲ್ಲದಿದ್ದರೆ ಧರ್ಮಬುದ್ಧಿಯೂ ಕರ್ತವ್ಯಪರತೆಯೂ ಇದ್ದತನಕ ಅವನಿಗೆ ಎಲ್ಲವೂ ಒಳ್ಳೆಯದಾಗುತ್ತಿತ್ತೆಂದೂ, ಕೊನೆಗೆ ಅವನಿಗೆ ಧನಲೋಭ ರಾಜ್ಯಲೋಭಗಳು ಹುಟ್ಟಿ ಅದರಿಂದ ಕೇಡಾಯಿತೆಂದೂ ಹೇಳಬಹುದು. ಇಲ್ಲದಿದ್ದರೆ, ಮೊದಲಿನಿಂದಲೂ ತಂತ್ರಿಯಾಗಿದ್ದು "ವಿಷಕುಂಭಂಪಯೋಮುಖಂ" ಎಂಬಂತೆ ಎಲ್ಲರಿಗೂ ಮಂಕುಬೂದಿಯನ್ನೆರಚಿ ಸ್ವಾರ್ಥದಲ್ಲಿ ನಿರತನಾಗಿದ್ದನೆಂದು ಬೇಕಾದರೂ ವರ್ಣಿಸಬಹುದು. ಅಂತ, ನನಗೆ, ಹೈದರನನ್ನೂ ಮುಮ್ಮಡಿ ಕೃಷ್ಣರಾಜವೊಡೆಯರನ್ನೂ ಜನರು ಅನ್ಯಾಯವಾಗಿ ಹೆಚ್ಚು ದೂರುಮಾಡಿರುವರೆಂದು ತೋರುವುದು. ಅವರಲ್ಲಿ ದುರ್ಗುಣಗಳೇನೋ ಇದ್ದುವು; ಆದರೆ ಅವುಗಳನ್ನು ವ್ಯಕ್ತಪಡಿಸಿರುವಂತೆ ಅವರಲ್ಲಿದ್ದ ಔದಾರ್ಯ, ಉದಾತ್ತತೆ, ವಿದ್ಯಾಪಕ್ಷಪಾತ ಮುಂತಾದ ಸುಗುಣಗಳನ್ನೂ ಅವರ ದುರ್ಗುಣಗಳಿಗೆ ಕಾರಣಗಳನ್ನೂ ಸರಿಯಾಗಿ ಯಾರೂ ವ್ಯಕ್ತಪಡಿಸಿಲ್ಲವೆಂದು ಧಾರಾಳವಾಗಿ ಹೇಳಬಹುದು.

## ನವಾಬರ ಕಾಲ

ಹೈದರಾಲಿಯ ಕಾಲದ ಮತ್ತು ಅಲ್ಲಿಂದ ಈಚಿನ ಮೈಸೂರು ಚರಿತ್ರೆಯು ನಮಗೆ ವಿಸ್ತಾರವಾಗಿ ತಿಳಿದುಬಂದಿದೆ. ಈ ಭಾಗಗಳ ಮೇಲೆ ಆಯಾ ಕಾಲದಲ್ಲಿಯೇ ಇದ್ದವರೂ

ಮತ್ತು ಈಚಿನವರೂ ಇಂಗ್ಲೀಷ್ ಫ್ರೆಂಚ್ ಪಾರ್ಸಿ ಮುಂತಾದ ಭಾಷೆಗಳಲ್ಲಿ ಅನೇಕ ಗ್ರಂಥ ಗಳನ್ನು ಬರೆದಿದಾರೆ. ಇವುಗಳನ್ನು ಹುಡುಕಿದರೆ ಕಾದಂಬರಿಗೆ ಯಥೇಚ್ಛವಾಗಿ ಸಾಮಗ್ರಿಗಳು ಸಿಕ್ಕುವುವು. ಅವುಗಳೆಲ್ಲವನ್ನೂ ಈ ಉಪನ್ಯಾಸದಲ್ಲಿ ತಿಳಿಸುವುದು ಅಸಾಧ್ಯ. ಆದ್ದರಿಂದ ಉದಾಹರಣೆಗಾಗಿ ಹೈದರನ ಆಳಿಕೆಯಿಂದ ಒಂದು ಸಂಗತಿಯನ್ನು ಮಾತ್ರ ಇಲ್ಲಿ ಸೂಚಿಸು ತ್ತೇನೆ:- ಬಿದರೂರಿನ ಬಸಪ್ಪನಾಯಕನು ೧೭೫೫ರಲ್ಲಿ ಕಾಲವಾಗಲು ಅವನ ಹೆಂಡತಿಯೂ ಚೆನ್ನಬಸವಯ್ಯನೆಂಬ ಅವನ ದತ್ತುಪುತ್ರನೂ ರಾಜ್ಯವನ್ನು ನೋಡಿಕೊಳ್ಳುತ್ತಿದ್ದರು. ರಾಣಿಯು ನಿಂಬಯ್ಯನೆಂಬವನನ್ನು ಕಟ್ಟಿಕೊಂಡು ದುರ್ನಡತೆಗೆ ಬಿದ್ದಿದ್ದಳು. ಇದು ಆಕೆಯ ಮಗನಿಗೆ ತಿಳಿದು ಅವನು ಆಕ್ಷೇಪಿಸಿದನು. ಆದ್ದರಿಂದ ಇವನ ಕಾಟವೇ ಇಲ್ಲದಂತೆ ಮಾಡಿಕೊಳ್ಳುವುದು ಉತ್ತಮವೆಂದು ಯೋಚಿಸಿ ಅವರಿಬ್ಬರೂ ಒಬ್ಬ ಜಟ್ಟಿಯನ್ನು ಗೊತ್ತುಮಾಡಿ ಅವನಿಂದ ಚೆನ್ನಬಸವಯ್ಯನನ್ನು ಕತ್ತು ಮುರಿಸಿ ಕೊಲ್ಲಿಸಿದರು. ಸೋಮಶೇಖರನೆಂಬ ಮತ್ತೊಬ್ಬ ಹುಡುಗನು ದತ್ತುವಾದನು.

ಹೀಗಿರಲು ಒಬ್ಬನು ಹೈದರನನ್ನು ಕಂಡು ತಾನು ಚೆನ್ನಬಸವಯ್ಯನೆಂದೂ ಜಟ್ಟಿಯು ತನ್ನನ್ನು ಕೊಲ್ಲದೆ ಬಿಡಲು ತಾನು ಬದುಕಿ ಬಂದೆನೆಂದೂ ತನಗೆ ಸಹಾಯಮಾಡಿ ಬಿದರೂರಿನ ಸಂಸ್ಥಾನವನ್ನು ಕೊಡಿಸಬೇಕೆಂದೂ ಬಂದು ಹೇಳಿಕೊಂಡನು. ಹೈದರನಿಗೆ ಇಷ್ಟು ನೆಪ ಸಿಕ್ಕದ್ದೇ ಸಾಕು, ಅವನು ಸೈನ್ಯವನ್ನು ತೆಗೆದುಕೊಂಡು ಹೊರಟು ಚೆನ್ನಬಸವಯ್ಯನನ್ನು ಉದ್ಧಾರ ಮಾಡುವೆನೆಂದು ಹೇಳುತ್ತ ಬಿದರೂರು ಸಂಸ್ಥಾನದ ಹತ್ತಿರಕ್ಕೆ ಬಂದು ಅಲ್ಲಿನ ಪ್ರಜೆಗಳಿಗೆ ತಮ್ಮ ರಾಜನನ್ನು ಸ್ವೀಕರಿಸಬೇಕೆಂದು ಹೇಳಿ ಕಳುಹಿಸಿದನು. ಶಿವಮೊಗ್ಗೆಯು ಹೈದರನ ಸ್ವಾಧೀನವಾಯಿತು. ಅಲ್ಲಿ ಅವನಿಗೆ ಸುಮಾರು ಒಂದು ಲಕ್ಷ ವರಹವುಳ್ಳ ನಿಧಿಯು ಸಿಕ್ಕಲು ಅದರಲ್ಲಿ ಒಂದು ಲಕ್ಷ ರೂಪಾಯಿಗಳಷ್ಟನ್ನು ತನ್ನ ಸೈನಿಕರಿಗೆ ಹಂಚಿ ಅವರನ್ನು ಉತ್ಸಾಹ ಗೊಳಿಸಿದನು. ಈಗ ಅವನು ಹಿಂತಿರುಗಿ ಹೊರಟು ಹೋಗುವುದಾದರೆ ನಾಲ್ಕು ಲಕ್ಷ ವರಹಗಳನ್ನು ಕೊಡುವುದಾಗಿ ರಾಣಿಯು ಹೇಳಿ ಕಳುಹಿಸಿದಳು. ಆದರೆ ಅದಕ್ಕೆ ನವಾಬನು ಒಪ್ಪಲಿಲ್ಲ. ಕುಂಸಿಗೆ ಬಂದಾಗ ಅಲ್ಲಿ ಹಿಂದಿನ ರಾಜನ ಹತ್ತಿರ ಮಂತ್ರಿಯಾಗಿದ್ದು ಈಗ ಸೆರೆಯಲ್ಲಿದ್ದ ಲಿಂಗಣ್ಣನು ದೊರಕಿ ತಾನು ದೇಶದ ಸ್ವರೂಪ ಸ್ವಭಾವಗಳನ್ನೆಲ್ಲ ತಿಳಿಸುವು ದಾಗಿಯೂ ಯಾವ ತೊಂದರೆಯೂ ಇಲ್ಲದಂತೆ ಅವನನ್ನು ಗುಪ್ತಮಾರ್ಗದಿಂದ ಬಿದರೂರಿನ ಕೋಟೆಯೊಳಕ್ಕೆ ಕರೆದುಕೊಂಡು ಹೋಗುವುದಾಗಿಯೂ ಮಾತು ಕೊಟ್ಟನು. ಮುಂದಕ್ಕೆ ಏಟೂರಿನ ಮೇಲೆ ಹೋಗುತ್ತಿರಲು ಅಲ್ಲಿದ್ದ ಕಾವಲುಗಾರರು ಸೈನ್ಯದ ಮೇಲೆ ಗುಂಡುಹಾರಿಸಿದರು. ಹೈದರನು ಅವರನ್ನು ಸೋಲಿಸಿ ಅವರ ಕಿವಿ ಮೂಗುಗಳನ್ನು ಕುಯ್ಯಿಸಿ ಓಡಿಸಿದನು. ಅವನು ಅನಂತಪುರದ ಹತ್ತಿರಕ್ಕೆ ಬಂದಾಗ ರಾಣಿಯು ಹನ್ನೆರಡು ಲಕ್ಷ ವರಹಗಳನ್ನು ಕೊಡುವುದಾಗಿಯೂ ರಾಜಧಾನಿಯ ಹತ್ತಿರಕ್ಕೆ ಬಂದಾಗ ಹದಿನೆಂಟು ಲಕ್ಷ ವರಹಗಳನ್ನು ಕೊಡುವುದಾಗಿಯೂ ಅದನ್ನು ತೆಗೆದುಕೊಂಡು ಅವನು ಹೊರಟು ಹೋಗ ಬೇಕೆಂದೂ ಹೇಳಿ ಕಳುಹಿಸಿದಳು. ಆದರೆ ಹೈದರನು ಇದು ಯಾವುದಕ್ಕೂ ಒಪ್ಪಲಿಲ್ಲ.

ಇದರಿಂದ ರಾಣಿಗೂ ಅವಳ ಇನಿಯನಿಗೂ ಹೆದರಿಕೆಯುಂಟಾಗಿ ಇಬ್ಬರೂ ಬಲ್ಲಾಳರಾಯನ ದುರ್ಗಕ್ಕೆ ಓಡಿ ಹೋದರು. ಆದರೆ ಹೋಗುವುದಕ್ಕೆ ಮುಂಚೆ ರಾಣಿಯು ಅಲ್ಲಿದ್ದ ಭಂಡಾರವನ್ನು ಬೇರೆ ಕಡೆಗೆ ಸಾಗಿಸಬೇಕೆಂದೂ ಅಷ್ಟಕ್ಕೆ ಅವಕಾಶವಿಲ್ಲದಿದ್ದರೆ ಅರಮನೆಗೂ ಖಜಾನೆಗೂ ಬೆಂಕಿ ಇಡಬೇಕೆಂದೂ ಹೇಳಿ ಅದೇ ಕೆಲಸಕ್ಕೆ ಕೆಲವರನ್ನು ನೇಮಕಮಾಡಿ ಹೋಗಿದ್ದಳು.

ಹೈದರನು ಬಂದು ರಾಜಧಾನಿಯನ್ನು ಮುಂದುಗಡೆಯಿಂದ ಮುತ್ತುವಂತೆ ನಟಿಸುತ್ತ ಲಿಂಗಣ್ಣ ತೋರಿಸಿದ ಗುಪ್ತಮಾರ್ಗವನ್ನು ಹಿಡಿದು ಹಿಂದುಗಡೆಯಿಂದ ಊರಿಗೆ ಪ್ರವೇಶಮಾಡಿದನು. ಕೂಡಲೆ ರಾಣಿಯು ಗೊತ್ತುಮಾಡಿದ್ದ ಜನರು ಅರಮನೆಗೆ ಬೆಂಕಿಯನ್ನು ಹತ್ತಿಸಿಬಿಟ್ಟರು. ಹಿಂದೆ ಇಂಥ ಅವಾಂತರವೇ ಕಂಡು ಅರಿಯದ ಪ್ರಜೆಗಳು ಈಗ ಗಾಬರಿಯಿಂದ ಚೆಲ್ಲಾಪಿಲ್ಲಿಯಾಗಿ ಹತ್ತಿರದಲ್ಲಿದ್ದ ಕಾಡುಗಳಿಗೂ ಗುಡ್ಡಗಳಿಗೂ ಓಡಿಹೋಗಿ ಅವಿತುಕೊಂಡರು. ಕುಬೇರನ ಪಟ್ಟಣದಂತಿದ್ದ ಆ ಊರು ದಿಕ್ಕೇ ಇಲ್ಲದಂತಾಗಿ ಹೈದರನ ಕೈವಶವಾಯಿತು. ಅಲ್ಲಿ ಅವನಿಗೆ ಸುಮಾರು ಒಂದು ಕೋಟಿ ಇಪ್ಪತ್ತು ಲಕ್ಷ ಪೌಂಡಿನಷ್ಟು ದ್ರವ್ಯ ಸಿಕ್ಕಿತೆಂದು ಹೇಳುತ್ತಾರೆ.

ಅನಂತರ ಚೆನ್ನಬಸವಯ್ಯನು ನಿಜವಾದವನಲ್ಲವೆಂದು ತಿಳಿದುಬಂದಂತೆ ಮಾಡಿ, ಹೈದರನು ಅವನನ್ನೂ ರಾಣಿ ನಿಂಬಯ್ಯ ಸೋಮಶೇಖರ ಇವರನ್ನೂ ಮದ್ದಗಿರಿಯ ದುರ್ಗದಲ್ಲಿ ಸೆರೆಯಿಡಿಸಿದನು.

ಈ ವೃತ್ತಾಂತವನ್ನು, ಬೇಕಾದರೆ, "ಹ್ಯಾಂಲೆಟ್" ನಂಥ ಕಥೆಯಾಗಿ ಮಾಡಬಹುದಲ್ಲವೇ?

ಟಿಪ್ಪೂಸುಲ್ತಾನನಾದ ಮೇಲೆ ಮುಮ್ಮಡಿ ಕೃಷ್ಣರಾಜ ಒಡೆಯರು. ಅವರ ಆಳಿಕೆಯ ವಿಚಾರವನ್ನು ಆಗಲೇ ಸ್ವಲ್ಪ ಹೇಳಿದ್ದೇನೆ. ಇದನ್ನು ಕಣ್ಣಾರ ಕಂಡು ಬಲ್ಲ ಅನೇಕ ಜನ ವೃದ್ಧರು ಈಗಲೂ ಜೀವಂತರಾಗಿದ್ದಾರೆ. ಅವರೊಡನೆ ಆಗಿನಕಾಲದ ಪ್ರಸ್ತಾಪವನ್ನೆತ್ತಿದರೆ ಸಾಕು, ಅನಾಯಾಸವಾಗಿ ಎಷ್ಟೋ ಸಂಗತಿಗಳು ತಿಳಿಯಬರುವುವು. ಇಲ್ಲಿ ಅಂಥ ವಿಷಯಗಳನ್ನು ತೆಗೆದುಕೊಳ್ಳದೆ ಮೈಸೂರು ಚರಿತ್ರೆಯ ಮೇಲೆ ಈಗ ದೊರೆಯುವ ಗ್ರಂಥಗಳಲ್ಲಿ ಬರುವ ಕೆಲವು ದೊಡ್ಡ ದೊಡ್ಡ ಕಥೆಗಳನ್ನು ಮಾತ್ರ ಸೂಚಿಸಿದ್ದೇನೆ. ಈ ಸಿದ್ಧವಾದ ಕಥೆಗಳನ್ನು ಬಿಟ್ಟರೂ ಕಾದಂಬರಿಯನ್ನು ಬರೆಯುವುದಕ್ಕೆ ಸಾಮರ್ಥ್ಯವಿರತಕ್ಕವನು ಸುಲಭವಾಗಿ ಬೆಳೆಸಬಹುದಾದ ಅನೇಕ ಸಂಗತಿಗಳು ದೊರೆಯುತ್ತವೆ. ಗಂಗರಾಜ (ವಿಷ್ಣುವರ್ಧನನ ಮಂತ್ರಿ), ಖಂಡೇರಾಯ, ಪೂರ್ಣಯ್ಯ, ಜಗದೇವರಾಯ, ಮಾಗಡಿಯ ಕೆಂಪೇಗೌಡ, ಬಸವಾಪಟ್ಟಣದ ಕೆಂಗೇಹನುಮ, ಇಕ್ಕೇರಿಯ ಶಿವಪ್ಪನಾಯಕ, ಅಂಚೆ ಶ್ಯಾಮಯ್ಯ, ಕೃಷ್ಣರಾಯ (ಟಿಪ್ಪುವಿನ ಕಾಲ), ಮೀರ್ ಸಾದಕ್, ಮದಕೆರಿ ನಾಯಕ, ಮಿರ್ಜ ಅಲಿಖಾನ್, ಮುಂತಾದ ಒಬ್ಬೊಬ್ಬರೂ ಒಂದೊಂದು ಸೊಗಸಾದ ಕಥೆಗೆ ನಾಯಕರಾಗಬಹುದು. ಅವರು ಮಾಡುವ ಒಂದೊಂದು ಕೆಲಸವೇ ಅದಕ್ಕೆ ವಸ್ತುವಾಗಬಹುದು.

ಇವೆಲ್ಲಕ್ಕಿಂತಲೂ ಮುಂಚೆ ನಡೆದ ಮತ್ತೊಂದು ಕಥೆಯಿದೆ. ಕಾವ್ಯದೃಷ್ಟಿಯಿಂದ ಅದು ಬಹಳ ಉತ್ತಮವಾಗಿರುವುದರಿಂದ ಅದನ್ನು ಕೊನೆಗೆ ಇಟ್ಟುಕೊಂಡಿದ್ದೇನೆ. ಇದು ಗಂಗರಾಜನ

ಕಥೆ. ಅದನ್ನು ಬುಕನನ್ ಸಾಹೇಬನ ಗ್ರಂಥದಿಂದ ತರ್ಜುಮೆಮಾಡಿ ಇಲ್ಲಿ ಬರೆದಿದ್ದೇನೆ:

"ಸುಮಾರು ಆರುನೂರು ವರ್ಷಗಳ ಕೆಳಗೆ ಆನೆಗೊಂದಿ ವಂಶದವನಾದ ಗಂಗರಾಜನು ವಿಜಯನಗರದ ರಾಜಿನಿಂದ ಆ (ಶಿವಸಮುದ್ರ) ಪ್ರಾಂತವನ್ನು ಆಳುವುದಕ್ಕಾಗಿ ಕಳುಹಿಸಲ್ಪಟ್ಟನು; ಅದರಹತ್ತಿರವಿದ್ದ ಸ್ಥಳಗಳನ್ನೆಲ್ಲಾ ಪರೀಕ್ಷಿಸಿ ನೋಡಲು, ವಾಸಕ್ಕೆ ಯೋಗ್ಯವಾದ ನಗರವನ್ನು ಸ್ಥಾಪಿಸುವುದಕ್ಕೆ ಶಿವಸಮುದ್ರ ದ್ವೀಪವು ಉತ್ತಮವಾದದ್ದೆಂದು ಕಂಡುಬಂತು. ಆಗ ಅಲ್ಲಿ ಎರಡು ಮೂರು ಸಣ್ಣ ಹಳ್ಳಿಗಳಿದ್ದುವು. ಅಲ್ಲಿನ ಜನರು ಆ ರಾಜಪುತ್ರನಿಗೆ ತಾವು ಮುನೀಶ್ವರನ ಅಪ್ಪಣೆಯಿಂದ ಅಲ್ಲಿ ವಾಸಮಾಡುತ್ತಿದ್ದರೆಂದೂ ಅವನ ಅಪ್ಪಣೆಯಿಲ್ಲದೆ ಪಟ್ಟಣವನ್ನು ಕಟ್ಟಿದರೆ ಅದು ಹಾಳಾಗುವುದು ಖಡಿತವೆಂದೂ ಹೇಳಿದರು. ಅದರಂತೆ ಆತನು ಮುನೀಶ್ವರನ ಅನುಗ್ರಹವನ್ನು ಪಡೆಯುವ ಉದ್ದೇಶದಿಂದ ಬಲಿಪೂಜೆ ನೈವೇದ್ಯಗಳನ್ನು ಮಾಡಿ ಪ್ರಾರ್ಥಿಸುತ್ತಿರಲು, ಮುನೀಶ್ವರನು ಕಾಣಿಸಿಕೊಂಡು ಶಂಕದ ಸದ್ದನ್ನು ಕೇಳಿದಕೂಡಲೆ ಹೊಸಪಟ್ಟಣವನ್ನು ಸ್ಥಾಪನೆ ಮಾಡಬಹುದೆಂದು ಅಪ್ಪಣೆಯನ್ನಿತ್ತನು. ನಗರಸ್ಥಾಪನೆಗೆ ಎಲ್ಲಾ ಸಲಕರಣೆಗಳೂ ಸಿದ್ಧವಾಗಿರಲು ಒಂದು ದಿನ ನತದೃಷ್ಟನಾದ ದಾಸಯ್ಯನೊಬ್ಬನು ಆ ಕಡೆ ಹೋಗುತ್ತಾ ತಮ್ಮ ಪದ್ಧತಿಯಂತೆ ಶಂಖವನ್ನು ಊದಿದನು. ಇದೇ ಮುನೀಶ್ವರನು ಹೇಳಿದ ಶಂಖದ ಸದ್ದೆಂದು ಎಲ್ಲರೂ ಭಾವಿಸಿ ನಗರಸ್ಥಾಪನೆಯನ್ನು ಮಾಡಿದರು. ಸುಮಾರು ಅರ್ಧ ಗಂಟೆಯ ಮೇಲೆ ಮುನೀಶ್ವರನು ಶಂಖವನ್ನೂದಿದನು. ಅದನ್ನು ಕೇಳಿ ರಾಜನು ಗಾಬರಿಯಾಗಿ ಮುನೀಶ್ವರನನ್ನು ಪ್ರಾರ್ಥಿಸಲು ಅವನು ಪ್ರತ್ಯಕ್ಷನಾಗಿ ಆ ನಗರವು ಶುಭಮುಹೂರ್ತದಲ್ಲಿ ಪ್ರತಿಷ್ಠಿತವಾಗದೆ ಇದ್ದದ್ದರಿಂದ ಅದು ಬಹುಕಾಲ ನಿಲ್ಲಲಾರದೆಂದೂ ಆದರೂ ಮೂರು ತಲೆಯವರೆಗೂ ನಡೆದು ಬರುವುದೆಂದೂ ವರ ಕೊಟ್ಟನು. ಗಂಗರಾಜನು ಅದರಂತೆ ಆ ನಗರದಲ್ಲಿ ಸುಖದಿಂದಾಳುತ್ತ ಕಾಲಗತಿಯನ್ನೈದಲು ಅವನ ಮಗ ನಂಜರಾಜನು ಪಟ್ಟಕ್ಕೆ ಬಂದನು. ಇವನು ತಿರಸ್ಕರಣೀ ವಿದ್ಯೆಯನ್ನರಿತ ಒಬ್ಬ ಹೊಲೆಯ ಸೇವಕನೊಡನೆ ಊಟ ಮಾಡಿಬಿಟ್ಟನು. ಬ್ರಾಹ್ಮಣರನ್ನು ಇದಕ್ಕೇನು ಮಾಡಬೇಕೆಂದು ಕೇಳಲು ಅವರು ದೇಹತ್ಯಾಗವೇ ಇದಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ಹೇಳಿದರು. ಅದಕ್ಕೆ ಅನುಸಾರವಾಗಿ ಅವನು ತನ್ನ ಮಗನ ವಶಕ್ಕೆ ರಾಜ್ಯವನ್ನು ಕೊಟ್ಟು ತನ್ನ ಹೆಂಡತಿಯನ್ನು ಜೊತೆಯಲ್ಲಿ ಕರೆದುಕೊಂಡು ಕುದುರೆಯನ್ನು ಹತ್ತಿಕೊಂಡು ಹೋಗಿ ಆ ಕುದುರೆಗೆ ಕಣ್ಣುಕಟ್ಟಿ ಗಂಗನಚುಕ್ಕಿಯೊಳಕ್ಕೆ ಹಾರಿಸಿ ಬಿದ್ದು ದೇಹತ್ಯಾಗ ಮಾಡಿದನು.

ಅವನ ಮಗ ಗಂಗರಾಜನು ನಗರವನ್ನು ವಿಸ್ತರಿಸಿ ಅಟ್ಟಹಾಸದಿಂದ ಆಳುತ್ತಿದ್ದನು. ಅವನಿಗೆ ಇಬ್ಬರು ಹೆಣ್ಣುಮಕ್ಕಳು; ಅವರಲ್ಲಿ ಒಬ್ಬಳನ್ನು ಸತ್ಯಾಗಾಲದ ಹತ್ತಿರ ಈಗ ಪಾಳಾಗಿರುವ ಕಿಲಿಮಲ್ಲಿಯ ರಾಜನಿಗೂ ಮತ್ತೊಬ್ಬಳನ್ನು ಮದ್ದೂರಿನ ಹತ್ತಿರವಿರುವ ನಗರಕೆರೆಯ ಬುಕ್ಕರಾಜನಿಗೂ ಮದುವೆಮಾಡಿಕೊಟ್ಟಿದ್ದನು. ಇವರು ತಮ್ಮ ತಂದೆಯ ಐಶ್ವರ್ಯ ಸಾಮರ್ಥ್ಯಗಳು ತಮ್ಮ ಗಂಡಂದಿರಿಗಿಲ್ಲವೆಂದು ಅವರನ್ನು ಪದೇ ಪದೇ ಮೂದಲಿಸುತ್ತ ಇದ್ದರು. ಆದ್ದರಿಂದ ಅವರು ಹೆಂಡಿರ ಕಾಟವನ್ನು ತಡೆಯಲಾರದೆ ತಾವು ಗಂಗರಾಜನಿಗೆ

ಯಾವುದರಲ್ಲಿಯೂ ಕಡಮೆಯಿಲ್ಲವೆಂದು ತೋರಿಸುವುದಕಕಾಗಿ ದೊಡ್ಡ ಸೈನ್ಯವನ್ನು ಸೇರಿಸಿ ಶಿವಸಮುದ್ರಕ್ಕೆ ಮುತ್ತಿಗೆ ಹಾಕಿದರು. ಈ ಮುತ್ತಿಗೆಯು ಹನ್ನೆರಡು ವರ್ಷಗಳ ಕಾಲ ನಡೆಯಿತು. ಆದರೂ ಶಿವಸಮುದ್ರದ ಕೋಟೆಯೊಳಗೆ ಹೋಗುವುದು ಸಾಧ್ಯವಾಗಲಿಲ್ಲ. ಆಗ ಇವರು ಗಂಗರಾಜನ ದಳವಾಯಿಯೊಡನೆ ಒಳಸಂಚುಮಾಡಿ ಅವನನ್ನು ಸ್ವಾಮಿದ್ರೋಹಕ್ಕೆ ಪ್ರೇರೇಪಿಸಿದರು. ಈ ದ್ರೋಹಿಯು ಕೋಟೆಗೆ ಹೋಗುತ್ತಿದ್ದ ಒಂದೇ ಒಂದು ಸೇತುವೆಯ ಮೇಲಿದ್ದ ಕಾವಲುಗಾರರನ್ನು ತೆಗೆಸಿಬಿಟ್ಟನು. ಆದ್ದರಿಂದ ಇವರು (ಶತ್ರುಗಳು) ಒಂದು ದಿನ ಊರೊಳಗೆ ಹಠಾತ್ತಾಗಿ ನುಗ್ಗಿಬಿಟ್ಟರು. ಆಗ, ದಳವಾಯಿಯು ರಾಜನೊಡನೆ ಚತುರಂಗವನ್ನು ಆಡುತ್ತ ಅವನ ಮನಸ್ಸನ್ನು ಆಟದಲ್ಲಿಯೇ ನೆಟ್ಟಿರುವಂತೆ ನೋಡಿಕೊಳ್ಳುತ್ತಿದ್ದನು. ಕೊನೆಗೆ ಸಿಪಾಯಿಗಳ ಅವಾಂತರ ಕಿವಿಗೆ ಬೀಳಲು ರಾಜನು ಆಟವನ್ನು ಬಿಟ್ಟೆದ್ದನು. ಅವನು ಸೆರೆಸಿಕ್ಕಬೇಕೆಂದು ಏರ್ಪಾಡು ಮಾಡಿದ್ದ ಮಂತ್ರಿಯು ಅದೆಲ್ಲಾ ಮಕ್ಕಳ ಆಟಪಾಟದ ಗದ್ದಲವಿರಬಹುದೆಂದು ಸೂಚಿಸಿ ಅಲ್ಲಿಯೇ ಅವನನ್ನು ನಿಲ್ಲಿಸಿಕೊಳ್ಳುವುದಕ್ಕೆ ಪ್ರಯತ್ನಪಟ್ಟನು. ಆದರೆ ರಾಜನು ಕತ್ತಿಯನ್ನು ಹಿರಿದು ನುಗ್ಗಿ ತನ್ನ ಹೆಂಗಸರು ಮಕ್ಕಳನ್ನೆಲ್ಲಾ ಕೊಂದು ಶತ್ರುಗಳ ಸೈನ್ಯಕ್ಕೆ ನುಗ್ಗಿ ಕಾದಿ ವೀರಸ್ವರ್ಗವನ್ನು ಪಡೆದನು.

ಇದಾದ ಮೇಲೆ ಅಳಿಯಂದಿರು ತಮ್ಮ ದುಷ್ಕೃತ್ಯಕ್ಕೆ ಹೇಸಿ ಗಂಗನಚುಕ್ಕಿಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಂಡರು. ಅವರ ಹೆಂಡಿರು ಇಷ್ಟೆಲ್ಲಾ ಅನರ್ಥಕ್ಕೆ ತಾವೇ ಕಾರಣರೆಂಬುದನ್ನು ಅರಿತು ಸಂಕಟಪಟ್ಟು ತಮ್ಮ ಗಂಡಂದಿರನ್ನು ಹಿಂಬಾಲಿಸಿದರು. ಅನಂತರ ನೆರೆಯ ರಾಜ್ಯಗಳಲ್ಲಿದ್ದ ಚನ್ನಪಟ್ಟಣದ ಜಗದೇವರಾಯನೂ ತಲಕಾಡಿನ ಶ್ರೀರಂಗರಾಜನೂ ಬಂದು ಅಲ್ಲಿಯ ಐಶ್ವರ್ಯವನ್ನು ತಮ್ಮ ರಾಜ್ಯಕ್ಕೆ ಗುಡಿಸಿಕೊಂಡುಹೋದರು. ಅಲ್ಲಿಂದ ಈಚೆಗೆ ಮುನೀಶ್ವರನು ಒಬ್ಬರ ಆತಂಕವೂ ಇಲ್ಲದೆ ಆ ದ್ವೀಪದಲ್ಲಿ ವಾಸಮಾಡಿಕೊಂಡಿದ್ದಾನೆ."

ಈ ಕಥೆಯು ರೈಸ್ ಸಾಹೇಬರ ಮೈಸೂರು ಗೆಜೆಟಿಯರ್‌ನಲ್ಲಿಯೂ ಮ. ಶಾಮರಾಯರ ಮೈಸೂರು ಚರಿತ್ರಸಾರದಲ್ಲಿಯೂ ಕಂಡುಬರುತ್ತದೆ. ಮೊದಲು ನಾನು ಈ ಕಥೆಯನ್ನು ಓದಿದ್ದು ಈ ಕನ್ನಡ ಪುಸ್ತಕದಲ್ಲಿಯೇ; ಆದರೆ ಅದರಲ್ಲಿ ಇದು ಅಷ್ಟು ವಿಸ್ತಾರವಾಗಿಲ್ಲ. ಅಲ್ಲಿಂದ ಮುಂದಕ್ಕೆ, ಇಂಥ ಕಥೆಗಳು ಇನ್ನೂ ಅನೇಕವಾಗಿ ಸಿಕ್ಕಬಹುದೆಂದೂ, ಇಂಥ ವಸ್ತುಗಳು ಸಿಕ್ಕಿದರೆ ಷೇಕ್ಸ್‌ಪಿಯರಿನ ನಾಟಕಗಳಿಗೂ ಸರ್ ವಾಲ್ಟರ್ ಸ್ಕಾಟ್‌ನ ಕಾದಂಬರಿಗಳಿಗೂ ಯಾವು ಅಂಶದಲ್ಲಿಯೂ ಕಡಮೆಯಲ್ಲದ ಗ್ರಂಥಗಳು ಆಗಬಹುದೆಂದೂ ಮನಸ್ಸಿಗೆ ತೋರಿ ಮೈಸೂರು ಚರಿತ್ರೆಯ ಮೇಲಣ ಗ್ರಂಥಗಳನ್ನೆಲ್ಲ ಓದುತ್ತ ಬಂದೆನು. ಈ ಉಪನ್ಯಾಸವು ಆ ಓದಿನ ಫಲವಾಗಿದೆ.

ಇದುವರೆಗೆ ಮೈಸೂರು ಚರಿತ್ರೆಯ ಮೇಲೆ ಬರೆಯಬಹುದಾದ ಕಾದಂಬರಿಗಳಿಗೆ ಇರತಕ್ಕ ಸಾಮಗ್ರಿಗಳನ್ನು ಸೂಚಿಸಿದ್ದಾಯಿತು. ಇಷ್ಟರಿಂದಲೇ ಕಾದಂಬರಿಗಳಾಗುವುದಿಲ್ಲ. ಇವೆಲ್ಲಾ ಸುಣ್ಣ ಮಣ್ಣು ಕಲ್ಲುಗಳ ಹಾಗೆ; ಇವುಗಳಿಂದ ದಿವ್ಯಭವನವಾಗಬೇಕಾದರೆ ಕುಶಲನಾದ

ಗಾರೇಕಾರನಾಗಬೇಕು. ಇಲ್ಲದಿದ್ದರೆ ಅವು ಸುಣ್ಣ ಮಣ್ಣು ಕಲ್ಲುಗಳೇ. ಇಂಥವರು ಕನ್ನಡ ದೇಶದ ಭಾಗ್ಯೋದಯದಿಂದ ಹುಟ್ಟಬೇಕು. ಅಂಥವರಿಗಾಗಿ ಯಾವ ನಿಯಮಗಳನ್ನೂ ವಿಧಿಸಕೆಲಸವಿಲ್ಲ. ಅಂಥವರು ಹುಟ್ಟುವವರೆಗೆ "ಚಪಲಾಯ ಪ್ರಚೋದಿತ"ರಾಗಿ ಮೈಸೂರು ಚರಿತ್ರೆಯ ಮೇಲೆ ಕಥೆಗಳನ್ನು ಬರೆಯುವುದಕ್ಕೆ ಹೊರಡುವವರು ಮುಂದೆ ಹೇಳುವ ಕೆಲವು ಸಲಹೆಗಳನ್ನು ಗಮನಿಸಬಹುದು:-

(೧) ಮೊದಲು ಒಳ್ಳೆಯ ಸಾಹಿತ್ಯವನ್ನು, ಅದರಲ್ಲಿಯೂ ಪ್ರಸಿದ್ಧವಾಗಿರುವ ಐತಿಹಾಸಿಕ ಕಾದಂಬರಿಗಳನ್ನು, ಸರಿಯಾಗಿ ವ್ಯಾಸಂಗಮಾಡಿ ಅವುಗಳ ರಮಣೀಯತೆಯ ಗುಟ್ಟನ್ನು ಗ್ರಹಿಸಬೇಕು. ಸತ್ಸಂಗದಿಂದಲೂ ಸಜ್ಜನರ ಉದಾಹರಣೆಯಿಂದಲೂ ಧರ್ಮವು ತಿಳಿಯುವಂತೆ ಸ್ಮೃತಿ ಸೂತ್ರಗಳಿಂದೆಂದಿಗೂ ತಿಳಿಯುವುದಿಲ್ಲ.

(೨) ಮೈಸೂರಿನ ಚರಿತ್ರೆಯ ಮೇಲೆ ದೊರಕುವ ಗ್ರಂಥಗಳನ್ನೆಲ್ಲಾ ಚೆನ್ನಾಗಿ ವ್ಯಾಸಂಗ ಮಾಡಬೇಕು; ಒಂದರಲ್ಲಿಲ್ಲದ ವಿಷಯವು ಮತ್ತೊಂದರಲ್ಲಿ ಸಿಕ್ಕುವುದು.

(೩) ಕೆಲವು ಸಣ್ಣ ಸಣ್ಣ ಸಾಮಾಜಿಕ ಧಾರ್ಮಿಕ ಮುಂತಾದ ಸಂಗತಿಗಳು ಕಥೆಯನ್ನು ಪುಷ್ಟೀಕರಿಸಿ ಅದಕ್ಕೆ ನೈಸರ್ಗಿಕ ಗುಣವನ್ನು ಕೊಡುವುದಕ್ಕೆ ಸಹಕಾರಿಯಾಗುತ್ತವೆ. ಇಂಥವುಗಳನ್ನು ಸಂಗ್ರಹಿಸಿ ಸಮಯೋಚಿತವಾಗಿ ಉಪಯೋಗಿಸಬೇಕು.

(೪) ಕೈಲಾದಮಟ್ಟಿಗೆ, ತಾವು ಬರೆಯತಕ್ಕ ಗ್ರಂಥಗಳಲ್ಲಿ ಬರತಕ್ಕ ಸ್ಥಳಗಳನ್ನು ನೋಡಿಕೊಂಡು ಬರಬೇಕು. ಅವು ಹಿಂದಿನ ಕಥೆಯನ್ನು ಕಣ್ಣಿಗೆ ಕಟ್ಟುವುವಲ್ಲದೆ, ಅನೇಕ ಭಾವವಿಶೇಷಗಳು ಹೊಸ ಹೊಸದಾಗಿ ಉದ್ಭವಿಸುವಂತೆ ಮಾಡುವುವು.

(೫) ಕರ್ಣಾಟಕ ದೇಶದ ಪ್ರಸಿದ್ಧ ಸ್ಥಳಗಳಲ್ಲಿಯಾದರೂ ಸಂಚಾರಮಾಡಿ ಜನಜೀವನವನ್ನೂ ದೇಶಸ್ಥಿತಿಯನ್ನೂ ಸ್ವಂತವಾಗಿ ನೋಡಿ ಅನುಭವಕ್ಕೆ ತಂದುಕೊಳ್ಳಬೇಕು. ಇಷ್ಟು ಹೊರತು "ಕಾದಂಬರಿಯಾಗಬೇಕಾದರೆ ಹೀಗೆ ಬರೆಯಬೇಕು. ಹಾಗೆ ಬರೆಯಬೇಕು" ಎಂದು ವಿಧಿಸುತ್ತಾ ಹೋದರೆ ಅದರಿಂದ ಹೆಚ್ಚು ಉಪಯೋಗವಾಗಲಾರದು. ಅದರಿಂದ ಒಂದು ವಿಧದಲ್ಲಿ ಕವಿಗಳಿಗೆ ಮಾರ್ಗತೋರುವುದಕ್ಕೆ ಬದಲು ಬಂಧನಗಳೇ ಕಲ್ಪಿತವಾದಂತಾಗುತ್ತದೆ. ಪ್ರತಿಭಾಶಾಲಿಗಳೂ ರಸಿಕರೂ ಆದ ಕವಿಪುಂಗವರು ಸೂತ್ರನಿಯಮಗಳನ್ನು ಲಕ್ಷ್ಯವೇ ಮಾಡರು. "ಸ್ವತಂತ್ರರಾದ ಗ್ರಂಥಕರ್ತರಿಗೆ ಮೇಲುಪಂಕ್ತಿಯನ್ನು ಹಾಕುವ ಧೈರ್ಯ ಯಾರಿಗಿದೆ? ಅದರಲ್ಲೂ ಮಹಾಕವಿಗಳಿಗೆ ಬುದ್ಧಿ ಹೇಳುವವರಾರು?" ಅವರು ನಮ್ಮ ನಿಯಮಗಳನ್ನು ಕೇಳಲಿ, ಕೇಳದಿರಲಿ, ಅವರ ಕೈಗೆ ಸಿಕ್ಕಿದ ಕಸವೂ ರಸವಾಗುವುದು. ಅಂಥವರ ಪ್ರತಿಭೆಗೆ ಗೋಚರವಾದ ಕೂಡಲೆ, ನಿರ್ಜೀವವಾದ ಅಸ್ಥಿಪಂಜರದಂತಿರುವ ತುಂಡುತುಂಡು ಐತಿಹಾಸಿಕ ವೃತ್ತಾಂತಗಳು ಪುಷ್ಟವಾದ ದೇಹವನ್ನು ಪಡೆದು ಜೀವಕಳೆಯಿಂದ ತುಂಬಿ ದೇದೀಪ್ಯಮಾನವಾಗಿ ಬೆಳಗುವುವು. ಆದರೆ ಅದರಲ್ಲಿ ಚರಿತ್ರ ಶಾಸ್ತ್ರಜ್ಞರು ಮೆಚ್ಚುವ ಶುಷ್ಕತತ್ವವು ಇರುವುದಿಲ್ಲ. ನಿಜ: ಇಂಥ ನಿರ್ಜೀವವಾದ ಚರಿತ್ರೆಗಳು ನಿರ್ಜೀವರಾದ ಪಂಡಿತರಿಗೆ ಆನಂದದಾಯಕವಾಗುವುವೇ ಹೊರತು

ಸಂಸಾರ ಸುಖವನ್ನನುಭವಿಸುತ್ತಿರುವ ಜನಸಾಮಾನ್ಯಕ್ಕಲ್ಲ. ವಿನ್‌ಸೆಂಟ್ ಸ್ಮಿತ್ ಸಾಹೇಬರು ಬರೆದ ಹಿಂದೂ ದೇಶದ ಚರಿತ್ರೆಯನ್ನು ಓದುವವರು ಯಾರು? ಕಣ್ಣಿಗೆ ಕನ್ನಡಕವನ್ನು ಕಟ್ಟಿಕೊಂಡು ಪ್ರತಿಷ್ಠೆಯನ್ನು ಸಂಪಾದಿಸುವುದಕ್ಕೆ "ರಿಸರ್ಚ್" (ಸಂಶೋಧನಕಾರ್ಯ)ನ್ನೂ ದೊಡ್ಡ ತರಗತಿಗಳಿಗೆ ಪಾಠ ಹೇಳುವುದಕ್ಕೆ ಟಿಪ್ಪಣಿಯನ್ನೂ ಮಾಡುವ ಚರಿತ್ರ ವಿದ್ಯಾವಿಶಾರದರು; ಜನಸಾಮಾನ್ಯರಲ್ಲ. ಇವರಿಗೆ ರುಚಿಸುವ ಹಿಂದೂ ದೇಶದ ಚರಿತ್ರೆಯು ರಾಮಾಯಣ ಭಾರತ ಗಳಲ್ಲಿದೆ. ಇವರು ವಿನ್‌ಸೆಂಟ್ ಸ್ಮಿತ್ ಸಾಹೇಬರಿಗೆ ಗೌರವಕೊಡರು. ಆತನು ಬರೆದ ಚರಿತ್ರೆಯನ್ನೂ ಟಿಪ್ಪಣಿಗಳನ್ನೂ ಓದರು. ಆದರೆ ರಾಮಾಯಣ ಭಾರತಗಳನ್ನು ಪೂಜಿಸಿ ಶ್ರೀರಾಮನಿಗೆ ಪಟ್ಟಾಭಿಷೇಕಗಳ ಮೇಲೆ ಪಟ್ಟಾಭಿಷೇಕಗಳನ್ನು ಮಾಡಿಬಿಡುವರು; ತಮಗೇ ಪಟ್ಟಾಭಿಷೇಕವಾದಷ್ಟು ಉತ್ಸಾಹದಿಂದ ಗಂಧ ಪುಷ್ಪ ವಸ್ತ್ರ ಭಕ್ಷ್ಯಭೋಜ್ಯಾದಿಗಳಲ್ಲಿ ನಿರ್ದಾಕ್ಷಿಣ್ಯವಾಗಿ ನಿಸ್ಸಂಕೋಚವಾಗಿಯೂ ಸುಖಪಟ್ಟುಬಿಡುವರು.

ಕನ್ನಡಿಗರು ಹೀಗೆ ಮೈಸೂರು ದೇಶದ "ಚರಿತ್ರೆ"ಯನ್ನು ಅಸಡ್ಡೆಮಾಡಿಯಾದರೂ ಅದರ ಮೇಲಣ ಕಥೆಗಳನ್ನೂ ಕಾದಂಬರಿಗಳನ್ನೂ ಓದಬೇಕೆನ್ನುವ ಹಾಗಾಗುವುದೇ? ಆ ಕಾಲವು ಬರುವುದು ಯಾವಾಗ?

(೧೯೨೦)

ಅನುಬಂಧ

ಈ ಉಪನ್ಯಾಸವನ್ನು ಬರೆಯುವುದಕ್ಕಾಗಿ ನೋಡಿದ ಮೈಸೂರು ಚರಿತ್ರೆಯ ಮೇಲಣ ಗ್ರಂಥಗಳು.

೧. The History of the reign of Tippu Sultan being a Continuation of the Neshani Hydari written by Mir Hussein Alikhan Kirmani (1802 A.D.) Translated from an original Persian Manuscript by Col. W. Miles (1864).

೨. The History of Hyder Shah (alias Hyder Ali Bahadur) and an abridged account of the life of his son Tippu Sultan (First edition 1784) by M.M.D.L.T

೩. An account of the Campaign in Mysore (1799) by Sri Alexander Allan.

೪. Buchanan's Travels (1807, 1870).

೫. Stewarts' Descriptive Catalogue of the oriental library of the Late Tippu Sultan of Mysore (to which are Prefixed memoirs of Hyder Ali Khan and his son Tippu Sultan).

೬. Select letters of Tippu Sultan, arranged and translated by William Kirkpatrick (1811).

೭. The life of Hyder Ali by Francis Robson (1786).

೮. Hyder Ali and Tippu Sultan by L.B. Bowring (Rulers of India Series).

೯. Memoris of Tippu Sultan - by an officer in the East India Service (1819).

೧೦. A Review of the Origin Progress and Result of the decisive war with the late Tippu Sultan in Mysore - by James Salmond (London 1800).

೧೧. A Review of the origin and conduct of the war with Tippu Sultan - by Alexander Beatson.

೧೨. Narrative of the Campaign in India terminating with war with Tippu Sultan in 1792 - by Major Dirom.

೧೩. Wilks's History of Mysore. 2 Vols (1810).

೧೪. Mysore Gazetteer.

೧೫. ಚಾಮರಾಜೇಂದ್ರ ಒಡೆಯರವರ ವಂಶರತ್ನಾಕರ.

೧೬. ಮ.ರಾ. ಶಾಮರಾಯರ ಮೈಸೂರು ಚರಿತ್ರಸಾರ.

೧೭. ಹೈದರ್ ನಾಮ.

ಕನ್ನಡಿ

# ನ್ಯೂಯಾರ್ಕಿನಲ್ಲಿ ಕನ್ನಡ

ಮೂಲ: ಕಮಲ್ ಕೆ. ಶ್ರೀಧರ್
ಅನು: ಪಟ್ಟಾಭಿರಾಮ ಸೋಮಯಾಜಿ

## ೧. ಪೀಠಿಕೆ

ಇದೊಂದು ಸಾಮಾಜಿಕ ಭಾಷಾಶಾಸ್ತ್ರದ ದೃಷ್ಟಿಕೋನದಿಂದ ಭಾಷೆಯ ಉಳಿಯುವಿಕೆ ಮತ್ತು ಕದಲುವಿಕೆಗಳನ್ನು ಕುರಿತು ಸಮಕಾಲಿಕ ಸಮೀಕ್ಷಾತ್ಮಕ ಅಧ್ಯಯನ. ಇಲ್ಲಿ ಅಧ್ಯಯನ ಕ್ಕೊಳಗಾಗಿರುವ ಭಾಷಾಸಮೂಹವು, ಅಮೆರಿಕಾ ಸಂಯುಕ್ತ ಸಂಸ್ಥಾನಕ್ಕೆ ೧೯೬೫ರ ನಂತರ ಬಂದ, ಕೆಲವೊಮ್ಮೆ 'ಹೊಸಕುಲ' ಎಂದು ಕರೆಯಲ್ಪಡುವ ಕನ್ನಡ ಮಾತಾಡುವ ನ್ಯೂಯಾರ್ಕಿನ ಭಾರತೀಯರದ್ದಾದ್ದರಿಂದ, ಈ ಅಧ್ಯಯನ ಸಮಕಾಲಿಕವಾಗಿರುವುದು ಅನಿವಾರ್ಯವಾಗಿದೆ. ಈ ಅನಿವಾರ್ಯತೆಯನ್ನೇ ಒಂದು ಮೌಲ್ಯವನ್ನಾಗಿ ಮಾಡಿಕೊಂಡು, ಮೊದಲ ತಲೆಮಾರಿನ ವಲಸೆಗಾರರ ಭಾಷಾ ಸನ್ನಿವೇಶವನ್ನು ಕುರಿತಂತೆ ಒಂದು ವಿವರವಾದ ಪಾರ್ಶ್ವದೃಶ್ಯವನ್ನು ಇಲ್ಲಿ ಕೊಡಲಾಗಿದೆ. ಹಿರಿಯರಲ್ಲಿ ಹಾಗೂ ಮಕ್ಕಳಲ್ಲಿ ತಮ್ಮ ಕುಲದ ಭಾಷೆಯಲ್ಲಿ ಇರುವ ಭಾಷಾ ಸಾಮರ್ಥ್ಯದ ಸೂಕ್ಷ್ಮ ವಿವರಗಳನ್ನು ಕಾಣಲು, ಸಾಹಿತ್ಯಿಕ ದೃಷ್ಟಿಕೋನದ ಮೂಲಕ ಸಾಮಾನ್ಯವಾಗಿ ಸಾಧ್ಯವಾಗಬಹುದಾದ್ದಕ್ಕಿಂತ ಹೆಚ್ಚಿನ ಅವಕಾಶ, ಇಲ್ಲಿನ ಸಾಮಾಜಿಕ ಭಾಷಾ ಶಾಸ್ತ್ರೀಯ ದೃಷ್ಟಿಕೋನದಲ್ಲಿ ಇದೆ. ಮಾತುಕತೆಗಳ ವೈವಿಧ್ಯಮಯ ಸನ್ನಿವೇಶದಲ್ಲಿ ದ್ವಿಭಾಷಾ ನಡವಳಿಕೆಗಳ ಚಲನಶೀಲತೆಯನ್ನು ಕುರಿತು, ಅದರಲ್ಲೂ ಮುಖ್ಯವಾಗಿ ಯುವಪೀಳಿಗೆಗೆ ಒದಗುವ ಭಾಷಾದ್ರವ್ಯದ ಸ್ವರೂಪವನ್ನು ಕುರಿತು, ಒಳನೋಟಗಳನ್ನು ಈ ಅಧ್ಯಯನ ಕೊಡುತ್ತದೆ. ಹಾಗೆಯೇ, ವಲಸೆಯಿಂದಾಗಿ ಭಾರತದ ಒಳಗೆ ಮತ್ತು ಹೊರಗೆ ಉಂಟಾದ ಪರಿಣಾಮಗಳನ್ನು ವಿವರಿಸುವ ಮೂಲಕ ತುಲನಾತ್ಮಕ ದೃಷ್ಟಿಕೋನದ ಮಹತ್ವಕ್ಕೆ ಈ ಅಧ್ಯಯನ ದೃಷ್ಟಾಂತವಾಗಿದೆ.

ವಲಸೆ ಬಂದ ಸಮೂಹವೊಂದು ತನ್ನ ನೆಲೆಗೊಳ್ಳುವಿಕೆಯ ಮೊದಲ ಪೀಳಿಗೆಯಲ್ಲಿ ಮಾಡುವ ಭಾಷಾ ಉಪಯೋಗದ ಸ್ವರೂಪ ವಿಶಿಷ್ಟವಾದುದು. ಈ ಕುರಿತ ಅಧ್ಯಯನಕ್ಕೆ

ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಭಾರತೀಯರ ಸಮೂಹ ಒಂದು ಉತ್ತಮ ಅವಕಾಶ ಒದಗಿಸಿ ಕೊಡುತ್ತದೆ. ಈ ಸಮೂಹದ ವಿಶಿಷ್ಟರಚನೆಯು, ಭಾಷಾ ಉಳಿಯುವಿಕೆಯ ಹಲವು ಸಂಭಾವ್ಯ ವ್ಯತ್ಯಾಸ-ಸಾಧ್ಯತೆಗಳ ಅಧ್ಯಯನಕ್ಕೆ ಅವಕಾಶ ಮಾಡಿಕೊಡುತ್ತದೆ; ಅವುಗಳಲ್ಲಿ ಕೆಲವು: ಅ) ವಲಸೆಯ ಮೊದಲೇ ಮುಖ್ಯಪ್ರವಾಹದ ಭಾಷೆಯಲ್ಲಿ ಪ್ರಾವಿಣ್ಯ ಹಾಗೂ ಗೌರವ; ಆ) ವಲಸೆ ಬರುತ್ತಿದ್ದಂತೆ, ಮಧ್ಯಮ ಹಾಗು ಮೇಲ್ಮಧ್ಯಮ ವರ್ಗದ ಸಾಮಾಜಿಕ ಪಾತ್ರಗಳಿಗೆ ಪ್ರವೇಶ; ಇ) ವಲಸೆಗಾರ ಕುಲ-ಸಮೂಹದೊಳಗೆ ಭಾಷಾನಿಷ್ಠೆಯ ತೀವ್ರತೆಯನ್ನು ಒಳಗೊಂಡಂತೆ, ಸ್ಥಳೀಯ ಸಂಸ್ಕೃತಿ ಪ್ರಭೇದಗಳ ಹಾಗು ಭಾಷೆಗಳ ವೈವಿಧ್ಯ. ಇದಲ್ಲದೇ ಭಾರತೀಯ ದ್ವಿಭಾಷಿಕತೆಯು ಕದಲುವಿಕೆಗಿಂತ ಉಳಿಯುವಿಕೆಗೇ ಹೆಚ್ಚು ಪಕ್ಕಾಗುವಂಥದ್ದು ಎಂಬ ವಾದವೊಂದನ್ನು ಪರಿಶೀಲಿಸುವುದೂ ಈ ಅಧ್ಯಯನದಿಂದ ಸಾಧ್ಯವಾಗುತ್ತದೆ.

## ೨. ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಭಾರತೀಯರು

೧೯೮೦ರ ಜನಗಣತಿಯ ಪ್ರಕಾರ ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಸುಮಾರು ೩೬೧,೫೦೦ ಜನ ಭಾರತೀಯರಿದ್ದಾರೆ. ೬೫,೦೦೦ದಷ್ಟು ಜನ ನ್ಯೂಯಾರ್ಕ್, ನ್ಯೂಜೆರ್ಸಿ, ಕನೆಟಿಕಟ್‌ಗಳ ತ್ರಿ-ರಾಜ್ಯ ಪ್ರದೇಶದಲ್ಲೇ ವಾಸಿಸುತ್ತಾರೆ; ಇವರಲ್ಲಿ ೨೭,೦೦೦ ಜನ ನ್ಯೂಯಾರ್ಕ್ ನಗರ(ಹೆಚ್ಚಿಗೆ ಕ್ವೀನ್ಸ್ ನಲ್ಲಿ) ಹಾಗೂ ಲಾಂಗ್ ಐಲಂಡಿನಲ್ಲಿ ನೆಲಸಿದ್ದಾರೆ.

ಇವರು ಭಾರತದ ಎಲ್ಲ ಭಾಗಗಳಿಂದಲೂ ಬಂದವರಾಗಿದ್ದು, ಅವರಲ್ಲಿ ಹಿಂದೂ, ಮುಸ್ಲಿಂ, ಸಿಖ್, ಕ್ರಿಶ್ಚಿಯನ್, ಜೈನ ಹಾಗೂ ಇತರ ಧರ್ಮಗಳವರು ಇದ್ದಾರೆ. ಇವರಲ್ಲಿ ಅತ್ಯಂತ ದೊಡ್ಡ ಗುಂಪೊಂದು ಉದ್ಯೋಗಿಗಳದ್ದು (ಡಾಕ್ಟರುಗಳು, ಇಂಜಿನಿಯರುಗಳು, ವಿಜ್ಞಾನಿಗಳು, ಶಿಕ್ಷಣ ತಜ್ಞರು) ಸಾಕಷ್ಟು ದೊಡ್ಡ ಗುಂಪೊಂದು ವ್ಯಾಪಾರಿಗಳು ಮತ್ತು ಉದ್ಯಮಿಗಳದ್ದು. ಉನ್ನತ ಶಿಕ್ಷಣ ಮಟ್ಟ, ಇಂಗ್ಲಿಷ್‌ನಲ್ಲಿರುವ ಪ್ರಾವೀಣ್ಯ ಹಾಗೂ ಅತಿಥೇಯ (ಅಮೆರಿಕನ್) ಸಮಾಜ ತೋರುವ ಸೌಹಾರ್ದದಿಂದಾಗಿ ಇವರಿಗೆ ಉದ್ಯೋಗ ಮತ್ತು ವಸತಿಗಳ ವಿಷಯದಲ್ಲಿ ಸ್ವಲ್ಪಮಟ್ಟಿನ ಸ್ವಾತಂತ್ರ್ಯವಿದೆ. ಇದರಿಂದ, ಇವರ ಪ್ರತ್ಯೇಕೀಕರಣದ ಸಾಧ್ಯತೆಗಳು ಕಡಿಮೆ ; ಅಂಥ ಸಮಸ್ಯೆ ಕಡಿಮೆ ವಿದ್ಯಾವಂತರೂ ಕಡಿಮೆ ನುರಿತವರೂ ಆಗಿ, ಈಗಾಗಲೇ ಬಂದು ನೆಲಸಿರುವವರ ಸಂಬಂಧಿಗಳಾಗಿ, ಬರುವವರಿಗೆ ಮಾತ್ರ ಆಗುವುದು. ಇವರಲ್ಲಿ ಹಲವಾರು ಸಂಯುಕ್ತ ಸ್ಥಳೀಯ ಸಂಘಟನೆಗಳಿವೆ. ಆದರೂ, ಮುಖ್ಯವಾಗಿ ಇವರು ಸ್ಥಳೀಯ(ಭಾಷಾ) ಹಾಗೂ ಧಾರ್ಮಿಕ ಸಂಬಂಧಗಳ ಆಧಾರದ ಮೇಲೆ ತಮ್ಮನ್ನು ಸಂಘಟಿಸಿಕೊಳ್ಳುತ್ತಾರೆ.

ಹೀಗೆ, ಹೊಂದಾಣಿಕೆಯ ಸ್ವರೂಪಕ್ಕೆ ಸಂಬಂಧಿಸಿದಂತೆ, ಅವರು ಐರಿಷ್ ಅಮೆರಿಕನ್ನರಂತೆ ಸಂಪೂರ್ಣ ಹೊರಗಿನದನ್ನು ಅರಗಿಸಿಕೊಳ್ಳುವವರೂ ಅಲ್ಲ; ಬ್ರಿಟನ್ನಿನ ಸಿಖ್‌ರಂತೆ ತಮ್ಮ ಉಳಿವಿಗೆ ಅಗತ್ಯವಾದ ಕನಿಷ್ಟ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದರ ಹೊರತಾಗಿ ತಮ್ಮ ಕುಲದ ಜೀವನಕ್ರಮವನ್ನು ಉಳಿಸಿಕೊಂಡು, ಹೊಂದಿಕೊಳ್ಳುವವರು ಅಲ್ಲ. ಬದಲಿಗೆ ಅವರು, ಸುಮಾರಾಗಿ ಕೀನ್ಯಾದ ಭಾರತೀಯರಂತೆ, ಅತಿಥೇಯ ಸಮಾಜದ ಆಯ್ದ ಕೆಲವು ಗುಣಗಳನ್ನು

ಅನುಕರಿಸುತ್ತಾರೆ; ತಮ್ಮ ಭಾರತೀಯ ಸಂಸ್ಕೃತಿ ಪ್ರಭೇದದ ವಿಶಿಷ್ಟತೆಯನ್ನು ಉಳಿಸಿಕೊಂಡು, ಹೊಂದಿಕೊಳ್ಳುತ್ತಿದ್ದಾರೆ.

ಭಾರತೀಯ ಸಮುದಾಯದ ವೈವಿಧ್ಯಮಯತೆ, ಪ್ರಾಂತೀಯ ಭಾಷೆಗಳು ಹಾಗೂ ಸಂಸ್ಕೃತಿಗಳ ಪ್ರಮುಖಾಂಶಗಳು ಮೇಳಯಿಸುವ ಸಂದರ್ಭ ಇಲ್ಲಿದೆ. ಇಂಥ ಕಡೆ ಭಾಷೆಯ ಉಳಿಯುವಿಕೆ ಅಥವಾ ಕದಲುವಿಕೆಯನ್ನು ಯಾವುದಾದರು ಪ್ರಾಂತೀಯ ಗುಂಪನ್ನು ವಿಶೇಷವಾಗಿ ಗಮನಿಸಿ ಅಧ್ಯಯನ ಮಾಡಿ, ಅನುಗಮನ ಕ್ರಮದಲ್ಲಿ ಸಾಧಾರಣೀಕರಣಗಳನ್ನು ಮಾಡುವುದು ಹೆಚ್ಚು ಸೂಕ್ತ. ಭಾಷೆಯ ಉಳಿಯುವಿಕೆ-ಕದಲುವಿಕೆಯನ್ನು ಅಧ್ಯಯನ ಮಾಡಲು ನಾನು ಅಮೆರಿಕಾದ ಕನ್ನಡ ಮಾತಾಡುವ ಭಾರತೀಯರಿಂದ ಆರಂಭಿಸಿರುವೆ. ಇದಕ್ಕೆ ಎರಡು ಕಾರಣಗಳಿವೆ; ಒಂದು, ದಕ್ಷಿಣ ಭಾರತದ ಎರಡು ಪಟ್ಟಣಗಳಲ್ಲಿ ಕನ್ನಡ ಮಾತಾಡುವವರ ಭಾಷಾ ಬಳಕೆಯ ಕುರಿತ ನನ್ನ ಈ ಹಿಂದಿನ ಅಧ್ಯಯನಗಳು, ಇಂಗ್ಲಿಶ್-ಕನ್ನಡ ದ್ವಿಭಾಷಿತ್ವವನ್ನು ಚೆನ್ನಾಗಿ ವ್ಯಾಖ್ಯಾನಿಸಲು ನನಗೆ ಸಹಾಯಕವಾಗಬಹುದು; ಎರಡು, ದೆಹಲಿಯ ಕನ್ನಡಿಗರಲ್ಲಿ ಭಾಷೆಯ ಉಳಿಯುವಿಕೆ-ಕದಲುವಿಕೆಯನ್ನು ಕುರಿತಂತೆ ವ್ಯವಸ್ಥಿತವಾದ ಅಧ್ಯಯನ ಇರುವುದರಿಂದ, ಭಾರತದ ಒಳಗೆ ಮತ್ತು ಹೊರಗೆ ಭಾಷೆಯ ಉಳಿಯುವಿಕೆಯ ಸ್ವರೂಪವನ್ನು ಹೋಲಿಸಿ ನೋಡಲು ಅವಕಾಶವಾಗುತ್ತದೆ.

ನ್ಯೂಯಾರ್ಕ್ ಪ್ರದೇಶದಲ್ಲಿರುವ ಕನ್ನಡ ಮಾತಾಡುವವರ ಸಮೂಹದಲ್ಲಿ ೩೦೦ರಿಂದ ೪೦೦ರಷ್ಟು ಇಂಥ ಕುಟುಂಬಗಳಿವೆ. ಭಾರತದ ಪ್ರಾಂತೀಯ ಗುಂಪುಗಳನ್ನು ಸಾಕಷ್ಟು ಮಟ್ಟಿಗೆ ಪ್ರತಿನಿಧಿಸುವಂತೆ ಕಾಣುತ್ತದೆ. ಭಾರತದ ಸಂವಿಧಾನವು ಗುರುತಿಸಿರುವ ೧೫ ಪ್ರಮುಖ ಪ್ರಾಂತೀಯ ಭಾಷೆಗಳನ್ನು ಕೂಡಾ ಕನ್ನಡ ಪ್ರತಿನಿಧಿಸುತ್ತದೆ. ಭಾಷಾವಾರು ಆಧಾರದ ಮೇಲೆ ಸಂಘಟಿಸಲ್ಪಟ್ಟ ಭಾರತದ ೨೨ ರಾಜ್ಯಗಳಲ್ಲಿ ಒಂದಾದ ಕರ್ನಾಟಕದಲ್ಲಿ ಕನ್ನಡವು ಅಧಿಕೃತ ಭಾಷೆ. ಸುಮಾರು ೨೫ ಮಿಲಿಯ ಜನ ಈ ಭಾಷೆಯನ್ನು ಮಾತನಾಡುತ್ತಾರೆ; ಈ ಭಾಷೆಗೆ ೯ನೆಯ ಶತಮಾನದಷ್ಟು ಹಳೆಯ ಗೌರವಾನ್ವಿತ ಸಾಹಿತ್ಯಿಕ ಪರಂಪರೆಯಿದೆ. ಕನ್ನಡ ಮಾತಾಡುವವರು ಭಾಷಾನಿಷ್ಠೆಯ ತಕ್ಕಡಿಯಲ್ಲಿ ಅತಿನಿಷ್ಠೆಗೂ (ಉದಾ: ತಮಿಳರು, ಬಂಗಾಲಿಗಳು) ಕೀಳರಿಮೆ(ಉದಾ: ಬುಡಕಟ್ಟು ಭಾಷೆಗಳನ್ನಾಡುವ ಭಾರತದ ಬಹಳಷ್ಟು ಜನರು) ನಡುವೆ ಇದ್ದಾರೆ.

**೩. ಸೈದ್ಧಾಂತಿಕ ಮಾದರಿ**

ಭಾಷೆಯ ಉಳಿಯುವಿಕೆ-ಕದಲುವಿಕೆಯನ್ನು ಕುರಿತ ಈ ಅಧ್ಯಯನಕ್ಕೆ ಸೈದ್ಧಾಂತಿಕ ಮಾದರಿಯಾಗಿ ಸ್ವೀಕರಿಸಿರುವುದು ಫಿಶ್‌ಮನ್‌ರ(೧೯೬೬) ಮಾದರಿಯನ್ನು. ಇದರಲ್ಲಿ ಮೂರು ಮುಖ್ಯ ಉಪವಿಭಾಗಗಳಿವೆ: ಅ) ಗುಂಪೊಂದರ ಅಂತರ್‌ಸಂಪರ್ಕದ ಸನ್ನಿವೇಶದಲ್ಲಿ, ಒಂದಕ್ಕಿಂತ ಹೆಚ್ಚು ಕಾಲ ಅಥವಾ ಸ್ಥಳದಲ್ಲಿ, ದಿನನಿತ್ಯದ ಭಾಷಾ ಬಳಕೆ; ಆ) ಪೂರ್ವಗಾಮಿ, ಸಹಗಾಮಿ, ಅಥವಾ ಅನುಗಾಮಿಯಾದ ಮನಶ್ಶಾಸ್ತ್ರೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಕ್ರಿಯೆಗಳು

ಮತ್ತು ದಿನನಿತ್ಯದ ಭಾಷಾ ಬಳಕೆಯ ಬದಲಾವಣೆಗೆ ಅವು ಹೊಂದಿರುವ ಸಂಬಂಧ; ಇ) ಭಾಷೆಯ ಉಳಿಯುವಿಕೆ ಅಥವಾ ಕದಲುವಿಕೆಗೆಂದು ನಿರ್ದೇಶಿತವಾದ ಪ್ರಯತ್ನಗಳನ್ನು ಒಳಗೊಂಡಂತೆ ಸಂಪರ್ಕ ಸನ್ನಿವೇಶದಲ್ಲಿ ಭಾಷೆಯ ಬಗ್ಗೆ ನಮ್ಮ ವರ್ತನೆ. ಅಮೆರಿಕಾದ ಭಾರತೀಯರಲ್ಲಿ ಭಾಷೆಯ ಉಳಿಯುವಿಕೆ-ಕದಲುವಿಕೆಯ ವಿಷಯ ಮೊದಲ ಬಾರಿಗೆ ಅಧ್ಯಯನಕ್ಕೊಳಪಡುತ್ತಿದೆ. ಇದರಿಂದ ಮತ್ತು ಅಧ್ಯಯನಕ್ಕೊಳಪಡುತ್ತಿರುವ ಗುಂಪು ತೀರ ಈಚೆಗಷ್ಟೇ ವಲಸೆ ಬಂದವರಾದ್ದರಿಂದ, ಕಾಲಾನುಕ್ರಮದ ಹೋಲಿಕೆಗಳು ಸಾಧ್ಯವಿಲ್ಲವೆನ್ನುವುದು ಸ್ಪಷ್ಟ. ಹೀಗಿದ್ದರೂ, ಕರ್ನಾಟಕದ ಕನ್ನಡಿಗರು, ದೆಹಲಿಗೆ ವಲಸೆಹೋದ ಕನ್ನಡಿಗರು, ಮತ್ತು ತಮ್ಮ ಮೂಲ ಭಾರತೀಯ ಭಾಷಾ ಪ್ರದೇಶಗಳಿಂದ ಹೊರಗಡೆ ವಾಸಿಸುತ್ತಿರುವ ಇತರ ಭಾರತೀಯ ಭಾಷೆಗಳವರು-ಇವರಿಗೆ ಸಂಬಂಧಿಸಿ ಸ್ಥಳಾಂತರದ ಹೋಲಿಕೆಗಳನ್ನು ಮಾಡಲಾಗಿದೆ. (ಭಾಗ ೬ ನೋಡಿ)

### ೪. ಅಧ್ಯಯನದ ವಿನ್ಯಾಸ

ಅಧ್ಯಯನ ವಿಧಾನದ ದೃಷ್ಟಿಯಿಂದ ಹೇಳುವುದಾದರೆ, ಈ ಅಧ್ಯಯನವನ್ನು ಹಲವಷ್ಟು ಕನ್ನಡಿಗರ, ಭಾಷಾ ಬಳಕೆ, ಧೋರಣೆಗಳು, ಸಾಮಾಜಿಕ-ಸಾಂಸ್ಕೃತಿಕ ರೂಢಿಗಳು ಮತ್ತು ಭಾಷೆಯ ಉಳಿಸುವಿಕೆಯ ಪ್ರಯತ್ನಗಳು- ಇವುಗಳನ್ನು ಕುರಿತ ವರದಿಗಳ ಮೇಲೆ ಮಾಡಲಾಗಿದೆ; ಹಲವಾರು ಅನೌಪಚಾರಿಕ ಮತ್ತು ಸಾಂಸ್ಥಿಕ ಪರಿಸರಗಳಲ್ಲಿ ಕನ್ನಡಿಗರ ನಡುವಿನ ಪರಸ್ಪರ ಸಂಪರ್ಕಗಳನ್ನು ಕುರಿತ ಅವಲೋಕನಗಳ ಆಧಾರದ ಮೇಲೆ ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ವಿನ್ಯಾಸದಲ್ಲಿ ಬಳಸಿರುವ ಮುಖ್ಯ ಲಕ್ಷಣಗಳು ಇವು: ೧) ಮುಖ್ಯ ಪ್ರವಾಹದ ಭಾಷೆಯಾದ ಇಂಗ್ಲೀಷ್ ಹಾಗೂ ಕುಲದ ಭಾಷೆಯಾದ ಕನ್ನಡ- ಇವುಗಳ ವಿವಿಧ ಕ್ಷೇತ್ರಗಳಲ್ಲಿನ ಬಳಕೆಯನ್ನು ಕುರಿತ, ವಿವರವಾದ ಮಾಹಿತಿಗಳನ್ನು, ಹಿರಿಯರು ಮಕ್ಕಳು- ಇಬ್ಬರಿಂದಲೂ ಪಡೆಯಲಾಗಿದೆ. (೨) ತಮ್ಮ ಕುಲ ಭಾಷೆಯಲ್ಲಿ ಮಕ್ಕಳಿಗಿರುವ ಪ್ರಾವೀಣ್ಯದ ಮಟ್ಟದ ಬಗ್ಗೆ ವಿಶೇಷ ಗಮನವನ್ನು ಕೊಡಲಾಗಿದೆ.

೫೫ ವಿಷಯಗಳ ಮೇಲೆ ಪ್ರಶ್ನಾವಳಿಯೊಂದನ್ನು ಕನ್ನಡ ಮಾತಾಡುವ ೨೧ ಕುಟುಂಬಗಳಿಗೆ ಕೊಟ್ಟು ಪಡೆದ ಪ್ರತಿಕ್ರಿಯೆಗಳೇ ಈ ಅಧ್ಯಯನಕ್ಕೆ ಮುಖ್ಯವಾದ ದ್ರವ್ಯ. ಪ್ರಶ್ನಾವಳಿಯ ಮೂಲಕ ಈ ಕೆಳಗಿನ ವಿಭಾಗಳಿಗೆ ಸಂಬಂಧಿಸಿ ಮಾಹಿತಿಗಳನ್ನು ಪಡೆಯಲಾಯಿತು: ಅ)ಜನಾಂಗ ಸ್ಥಿತಿ ವಿವರಗಳು; ಆ) ಅಮೆರಿಕಾದಲ್ಲಿ ಕನ್ನಡದ ಬಳಕೆಯ (ಉದಾಹರಣೆಗೆ ಸಂಬಂಧಿಕರು, ಸ್ನೇಹಿತರು ಮತ್ತು ಕನ್ನಡ ಕೂಟಗಳಲ್ಲಿ) ಅವಕಾಶಗಳು; ಇ) ತಮ್ಮ ಕುಲದ ಸಂಪ್ರದಾಯಗಳಲ್ಲಿ ಬೇರು ಬಿಟ್ಟಿರುವಿಕೆಗೆ ಪ್ರಮಾಣಗಳು; ಈ) ವಿವಿಧ ಕ್ಷೇತ್ರಗಳಲ್ಲಿ ಬಂಧುಗಳಿಂದ ಭಾಷೆಗಳ ಬಳಕೆ, ಉ) ಕನ್ನಡದಲ್ಲಿ ಮಕ್ಕಳ ಪ್ರಾವೀಣ್ಯ; ಊ) ವಿವಿಧ ಸನ್ನಿವೇಶಗಳಲ್ಲಿ ಮಕ್ಕಳಿಂದ ಕನ್ನಡ ಬಳಕೆ ಮತ್ತು ಕನ್ನಡದ ಬಗ್ಗೆ ಅವರ ಧೋರಣೆ; ಋ) ಭಾಷೆಯ ಉಳಿಸುವಿಕೆಯಲ್ಲಿ ಹಿರಿಯರ ಪ್ರಯತ್ನಗಳು; ಮತ್ತು ಎ) ಅಮೆರಿಕದಲ್ಲಿ ಕನ್ನಡದ ಭವಿಷ್ಯದ ಬಗ್ಗೆ ಹಿರಿಯರ ಧೋರಣೆಗಳು.

ಇದೊಂದು ಪ್ರಾಯೋಗಿಕ ಅಧ್ಯಯನವಾಗಿದೆ. ಇದರಿಂದ, ಸಂಪರ್ಕಿಸಲು ಸಾಧ್ಯರಾದ ಮತ್ತು ಈ ಅಧ್ಯಯನದಲ್ಲಿ ಭಾಗಿಗಳಾಗಲು ತಯಾರಿದ್ದವರಿಂದಲೇ ಉತ್ತರಗಳನ್ನು ಪಡೆಯಲಾಗಿದೆಯಲ್ಲದೇ, ಸಂಖ್ಯಾ ಪರಿಶೀಲನದ ಯಾದೃಚ್ಛಿಕ ಮಾದರಿಗನುಗುಣವಾಗಿ ಅಲ್ಲ. ಸ್ನೇಹಿತರು ಮತ್ತು ಅವರ ಸಂಬಂಧಿಗಳ ಸಣ್ಣ ಗುಂಪೊಂದನ್ನು ಪ್ರಯೋಗಪೂರ್ವ ಗುಂಪನ್ನಾಗಿ ಸೇರಿಸಿ, ಈ ಪ್ರಶ್ನಾವಳಿಯನ್ನು ಮೊದಲು ಅವರಿಗೆ ಕೊಟ್ಟು ನೋಡಲಾಯಿತು. ಇವರು ಬೇರೆ ಕುಟುಂಬಗಳ ಜೊತೆ ಸಂಪರ್ಕವನ್ನು ಸಾಧ್ಯ ಮಾಡಿಕೊಟ್ಟದ್ದಲ್ಲದೇ ಆ ಕುಟುಂಬಗಳವರು ಈ ಪ್ರಶ್ನಾವಳಿಗೆ ಉತ್ತರಿಸಬಹುದಾದ ಇತರರನ್ನು ಸೂಚಿಸುವಂತಾಯಿತು. ಈ ಪ್ರಶ್ನಾವಳಿಗೆ ಉತ್ತರಿಸಿದವರಲ್ಲಿ ಕೆಲವರನ್ನು ಸಂಪರ್ಕಿಸಿದ್ದು, ನ್ಯೂಯಾರ್ಕ್ ನಗರ ಪ್ರಾಂತದ ಕನ್ನಡಿಗರ ಸಾಂಸ್ಕೃತಿಕ ಸಂಘಟನೆಯಾದ ''ಕನ್ನಡ ಕೂಟ''ದಲ್ಲಿ.

ಹೆಚ್ಚಿನ ಸಂದರ್ಭಗಳಲ್ಲಿ ಲೇಖಕಿಯೇ ಹಲವು ಕುಟುಂಬಗಳವರನ್ನು ಮನೆಯಲ್ಲಿ ಭೇಟಿಯಾದದ್ದು; ಕುಟುಂಬದ ಹಿರಿಯರಲ್ಲೊಬ್ಬರು-ಸಾಮಾನ್ಯವಾಗಿ ತಾಯಿ- ಕುಟುಂಬದ ಇತರರ ಜೊತೆಗೆ ಪ್ರತಿ ವಿಷಯದ ಮೇಲೂ ಚರ್ಚೆ ನಡೆಸಿದ ನಂತರ, ಪ್ರಶ್ನಾವಳಿಯನ್ನು ತುಂಬಿಸಿಕೊಡುತ್ತಿದ್ದರು. ಕನ್ನಡಿಗರು ಆತಿಥ್ಯಕ್ಕೆ ಹೆಸರಾದವರಾದುದರಿಂದ ಹೆಚ್ಚೂ ಕಡಿಮೆ ಎಲ್ಲ ಸಂದರ್ಭಗಳಲ್ಲೂ ಈ ಲೇಖಕಿಗೆ ಅವರು ಕೇವಲ ಕಾರ್ಯನಿಮಿತ್ತ ಭೇಟಿಗೆ ಅವಕಾಶ ಕೊಡದೇ ಊಟಕ್ಕೂ ಉಳಿಸಿಕೊಂಡದ್ದರಿಂದ, ಈ ಕುಟುಂಬದ ಸದಸ್ಯರ ನಡುವಿನ ಭಾಷಾ ಬಳಕೆಯ ಸ್ವರೂಪವನ್ನು ಬಹಳ ಹತ್ತಿರದಿಂದ ನೋಡುವಂತೆಯೂ ಆಯಿತು. ಕೇವಲ ಕೆಲವೇ ಸಂದರ್ಭಗಳಲ್ಲಿ ಮಾತ್ರ ಮಾಹಿತಿಯನ್ನು ಅಂಚೆಯ ಮೂಲಕ ಪಡೆಯಲಾಯಿತು.

### ೫. ಫಲಿತಾಂಶ ಮತ್ತು ಚರ್ಚೆ

### ಅ) ಉತ್ತರಿಸಿದವರ ಹಿನ್ನೆಲೆ

ಉತ್ತರಿಸಿದ ೨೧ ಕುಟುಂಬಗಳವರು ನ್ಯೂಯಾರ್ಕ್ ನಗರ ಪ್ರಾಂತದಲ್ಲಿ ವಾಸಿಸುವವರು (ಕ್ವೀನ್ಸ್‌ನಲ್ಲಿ ೧೧, ನ್ಯೂಜೆರ್ಸಿಯಲ್ಲಿ ೬, ಬ್ರಾಂಕ್ಸ್‌ನಲ್ಲಿ ೧, ಬ್ರೂಕ್ಲಿನ್‌ನಲ್ಲಿ ೧, ಇತರ ಹೊರವಲಯಗಳಲ್ಲಿ ೨) ಇವುಗಳಲ್ಲಿ ಎರಡು ಏಕಬಂಧು ಕುಟುಂಬಗಳು ಸೇರಿದ್ದು, ಒಂದು ಕುಟುಂಬವನ್ನು ಗಂಡಸೂ, ಇನ್ನೊಂದನ್ನು ಹೆಂಗಸೂ ನೋಡಿಕೊಳ್ಳುತ್ತಿದ್ದರು. ಹಾಗಾಗಿ ಈ ಕೆಳಗೆ ಕೊಟ್ಟಿರುವ ಅಂಕಿ ಅಂಶಗಳಲ್ಲಿ ಹಿರಿಯರು ಎಂಬ ಪದ ೨೦ ಜನ ಗಂಡಸರು ಮತ್ತು ೨೦ ಜನ ಹೆಂಗಸರಿಗೆ ಅನ್ವಯಿಸುತ್ತದೆ.

ವಯಸ್ಸು, ವಿದ್ಯೆ, ಪೌರತ್ವ ಇತ್ಯಾದಿಗಳ ಮಾಹಿತಿಯನ್ನು ಗಂಡಹೆಂಡಿರಿಬ್ಬರಿಗೂ ಸಂಬಂಧಿಸಿ ಸಂಗ್ರಹಿಸಲಾಯಿತು. ಉತ್ತರಿಸಿದವರಲ್ಲಿ ಬಹಳಷ್ಟು ಜನ ೩೧-೫೦ರ ವಯೋಮಾನದವರಾಗಿದ್ದರು. ಅವರಲ್ಲಿ ಗಂಡಸರ ಸರಾಸರಿ ವಯಸ್ಸು ೪೩.೫ ಹಾಗು ಹೆಂಗಸರ ಸರಾಸರಿ ವಯಸ್ಸು ೩೮.೫ ವರ್ಷಗಳಾಗಿತ್ತು. ಈ ಅಧ್ಯಯನದ ಸಮಯಕ್ಕೆ (ಮೇ ೧೯೮೫) ಅಮೆರಿಕಾದಲ್ಲಿ ಅವರ ಸರಾಸರಿ ವಾಸದ ಅವಧಿ-ಗಂಡಸರಿಗೆ ೧೪.೯ ಹೆಂಗಸರಿಗೆ ೧೩.೭ ಹಾಗೂ

ಇಬ್ಬರಿಗೂ ಒಟ್ಟಿನಲ್ಲಾದರೆ ೧೪.೮ ವರ್ಷ. ಒಟ್ಟಿನಲ್ಲಿ ಹೇಳುವುದಾದರೆ, ಗಂಡಸರು ಮತ್ತು ಹೆಂಗಸರು ತುಂಬಾ ವಿದ್ಯಾವಂತರು; ಅವರಲ್ಲಿ ಎಲ್ಲ ೨೦ ಗಂಡಸರೂ ಔದ್ಯೋಗಿಕ ಪದವಿಗಳನ್ನು ಪಡೆದವರು, ವೈದ್ಯಕೀಯದಲ್ಲಿ ೪, ಇಂಜಿಯರಿಂಗ್‌ನಲ್ಲಿ ೧೧, ಬೇರೆ ಶಾಸ್ತ್ರಗಳಲ್ಲಿ ೫. ೨೦ ಹೆಂಗಸರಲ್ಲಿ ೧೨ ಜನ ಸ್ನಾತಕ ಪದವೀಧರೆಯರು, ೫ ಜನ ಸ್ನಾತಕೋತ್ತರ ಪದವೀಧರೆಯರು, ಇಬ್ಬರು ವೈದ್ಯಕೀಯ ಪದವೀಧರೆಯರು. ಮನೆವಾರ್ತೆ ನಡೆಸುವ ೫ ಜನ ಹೆಂಗಸರನ್ನು ಬಿಟ್ಟರೆ, ಎಲ್ಲಾ ಗಂಡಸರು ಮತ್ತು ಹೆಂಗಸರು ಪೂರ್ಣಕಾಲದ ಉದ್ಯೋಗಿಗಳು. ಕೆಲ ಗೃಹಿಣಿಯರು ಅರೆಕಾಲಿಕ ಉದ್ಯೋಗಗಳಲ್ಲೂ (ಉದಾಹರಣೆಗೆ, ಪದ ಸಂಸ್ಕರಣಾಕಾರರಾಗಿ, ಟಿ.ವಿ. ನಿರ್ಮಾಪಕರಾಗಿ, ಇತ್ಯಾದಿ) ಇದ್ದಾರೆ. ಅವರ ಉದ್ಯೋಗಗಳು ಇಂತಿವೆ: ೩೦ ಪ್ರತಿಶತ ಇಂಜಿನಿಯರುಗಳು, ೧೫ ಪ್ರತಿಶತ ಡಾಕ್ಟರುಗಳು, ೫೫ ಪ್ರತಿಶತ ಇತರ ಉದ್ಯೋಗಿಗಳು (ಅಂದರೆ ಉದ್ಯಮಗಳಲ್ಲಿ ಕಾರ್ಯನಿರ್ವಾಹಕರು, ಕಂಪ್ಯೂಟರ್ ವಿಜ್ಞಾನಿಗಳು, ಗ್ರಂಥಾಲಯಾಧಿಕಾರಿಗಳು, ಸರಕಾರೀ ಸೇವೆಯಲ್ಲಿರುವವರು, ಇತ್ಯಾದಿ).

ಪ್ರತಿಶತ ಸಾಂಸ್ಕೃತಿಕ ಕಾರಣಗಳಿಂದಾಗಿ ಅವರ ಆದಾಯದ ಬಗ್ಗೆ ಮಾಹಿತಿಯನ್ನು ಪ್ರಶ್ನಾವಳಿಯ ಮೂಲಕ ಪಡೆಯಲಾಗದಿದ್ದರು, ಅವರ ಕುಟುಂಬದ ವಾರ್ಷಿಕ ಆದಾಯ ೩೦,೦೦೦ದಿಂದ ೧೫೦,೦೦೦ ಡಾಲರುಗಳ ವ್ಯಾಪ್ತಿಯಲ್ಲಿತ್ತು. ಸರಾಸರಿ ಆದಾಯ ಸುಮಾರು ೪೦,೦೦೦ದಿಂದ ೫೦,೦೦೦ ಡಾಲರುಗಳಷ್ಟಿದೆಯೆಂದು ಅಂದಾಜು ಮಾಡಬಹುದು; ಈ ಸರಾಸರಿ, ಅಮೆರಿಕಾದ ರಾಷ್ಟ್ರೀಯ ಸರಾಸರಿಗಿಂತ ಸಾಕಷ್ಟು ಹೆಚ್ಚಿದೆ. ಪ್ರತಿಶತ ೮೦ ಹೆಂಗಸರು ಮತ್ತು ಗಂಡಸರು ತಮ್ಮ ಹೈಸ್ಕೂಲು ಶಿಕ್ಷಣವನ್ನು ಪಡೆದದ್ದು (ಭಾರತದಲ್ಲಿ). ಇಂಗ್ಲೀಶ್ ಮಾಧ್ಯಮದಲ್ಲಿ ಹಾಗು ೯೫ ಪ್ರತಿಶತ ಕಾಲೇಜಿನಲ್ಲೂ ಇಂಗ್ಲೀಷ್ ಮುಖಾಂತರ ಓದಿದವರು. ಅವರಲ್ಲಿ ೮೯ ಪ್ರತಿಶತ ಭಾರತದ ಪಟ್ಟಣ ಅಥವಾ ನಗರ ಪ್ರಾಂತಗಳಲ್ಲಿ ಹುಟ್ಟಿದವರು. ಅಷ್ಟೇ ಸಂಖ್ಯೆಯ ಜನ ನಗರ ಪ್ರಾಂತಗಳಾದ ಬೆಂಗಳೂರು, ಮೈಸೂರು, ಬೊಂಬಾಯಿ ಮತ್ತು ನವದೆಹಲಿಗಳನ್ನು ಭಾರತದಲ್ಲಿ ತಮ್ಮ ಕೊನೆಯ ವಾಸಸ್ಥಳಗಳನ್ನಾಗಿ ಹೆಸರಿಸಿದರು.

ಈ ಮೇಲಿನ ಅಂಶಗಳು, ಪ್ರಶ್ನಾವಳಿಗೆ ಉತ್ತರಿಸಿದವರ ಭಾಷಾನಿಧಿಗೆ ಅವು ಕೊಡುವ ಕೊಡುಗೆಯ ದೃಷ್ಟಿಯಿಂದ ಮುಖ್ಯವಾದವುಗಳು. ಅವರ ಪಟ್ಟಣದ ಹಿನ್ನೆಲೆ ಹಾಗು ಇಂಗ್ಲಿಷ್ ಮಾಧ್ಯಮದ ಶಿಕ್ಷಣಗಳು ಅವರಿಗೆ ಇಂಗ್ಲಿಷ್ ಭಾಷೆಯಲ್ಲಿರುವ ಉಚ್ಚ ಪ್ರಾವೀಣ್ಯದ ಸೂಚಕಗಳು. ಇವರಲ್ಲಿ ಬಹಳಷ್ಟು ಕುಟುಂಬಗಳಲ್ಲಿ ಗಂಡಹೆಂಡಿರಿಬ್ಬರೂ ವಿದ್ಯಾವಂತರಾಗಿದ್ದು ಮನೆಯ ಹೊರಗೆ ಉದ್ಯೋಗದಲ್ಲಿರುವುದು, ಅನೌಪಚಾರಿಕ ಮಾತುಕತೆಗಳ ನೆಲೆಯಲ್ಲೂ ಕೂಡ ಪದೇ ಪದೇ ಇಂಗ್ಲಿಷ್ ಮತ್ತು ಮಾತೃಭಾಷೆಯ ನಡುವೆ ಭಾಷೆಯನ್ನು ಬದಲಾಯಿಸುತ್ತಿರುವುದನ್ನು ಸೂಚಿಸುತ್ತದೆ. ಈ ಭಾಷಾ ಪಲ್ಲಟದ ಸ್ವರೂಪದ ಒಂದು ಪರಿಣಾಮವೆಂದರೆ, ಸಾಂಪ್ರದಾಯಿಕ ವಲಸೆಗಾರ ಗುಂಪುಗಳಲ್ಲಿ ಕಾಣುವ 'ಮನೆಯಲ್ಲಿ ಕುಲದ ಭಾಷೆ- ಹೊರಗೆ ಇಂಗ್ಲೀಷ್, ಎಂಬ ಕ್ರಮ ಕನ್ನಡಿಗ ಕುಟುಂಬಗಳಲ್ಲಿ ಅಷ್ಟು ಪ್ರಖರವಾಗಿ ಕಾಣಿಸದಿರಬಹುದು.

ಬದಲಿಗೆ, ಬಹುಮಟ್ಟಿಗೆ ಇಂಗ್ಲಿಷ್ ಮತ್ತು ಕನ್ನಡಗಳೆರಡರ ಮಿಶ್ರಣವಾದ ಭಾಷಾದ್ರವ್ಯಕ್ಕೆ ಮಕ್ಕಳು ಒಡ್ಡಲ್ಪಡುತ್ತಾರೆ.

**ಆ) ಕನ್ನಡವನ್ನು ಬಳಸಲು ಅವಕಾಶಗಳು**

ಕನ್ನಡದ ಬಳಕೆಗೆ ದೊರೆಯುವ ಅವಕಾಶಗಳ ಸ್ವರೂಪವನ್ನು ಕುರಿತಂತೆ ಒಂದಷ್ಟು ಪ್ರಶ್ನೆಗಳನ್ನು ಕೇಳಲಾಗಿತ್ತು. ಸರಾಸರಿಯಂತೆ ಪ್ರತಿ ಕುಟುಂಬಕ್ಕೂ ಅಮೆರಿಕಾದಲ್ಲಿ ೧೧ ಜನ ಸಂಬಂಧಿಕರಿದ್ದಾರೆ; ಅವರ ಹುಟ್ಟೂರಿನಿಂದ ಬಂದ ಸುಮಾರು ೨೦ರಿಂದ ೩೦ರಷ್ಟು ಕುಟುಂಬಗಳು ನ್ಯೂಯಾರ್ಕ್ ಪ್ರದೇಶದಲ್ಲಿ ವಾಸಿಸುತ್ತವೆ. ೫ ರಿಂದ ೧೦ರಷ್ಟು ಕುಟುಂಬಗಳು ಕರ್ನಾಟಕದಲ್ಲಿ ಅವರ ಆಸುಪಾಸಿನಿಂದ ಬಂದವರೇ ಆಗಿದ್ದು, ೧೫ರಿಂದ ೨೦ ಕುಟುಂಬಗಳು ಒಂದೇ ಕಾಲೇಜಿನ ಹಿನ್ನೆಲೆಯನ್ನು ಹಂಚಿಕೊಂಡವರು. ೩೮ ಜನ ವಯಸ್ಕರಲ್ಲಿ ಸುಮಾರು ೨೬ ಜನ ಕರ್ನಾಟಕದ ಎರಡು ದೊಡ್ಡ ನಗರಗಳಾದ ಮೈಸೂರು ಹಾಗೂ ಬೆಂಗಳೂರುಗಳಲ್ಲಿ ಹುಟ್ಟಿದವರೆಂಬುದರಿಂದ ಈ ಅಂಶ ವಿದಿತವಾಗುತ್ತದೆ. (ಇಬ್ಬರು ಈ ಪ್ರಶ್ನೆಗೆ ಉತ್ತರಿಸಲಿಲ್ಲ)

೬ ಕುಟುಂಬಗಳು (ಅಥವಾ ೨೬.೬ ಪ್ರತಿಶತ) ತಮ್ಮ ಜೊತೆ ತಮ್ಮ ಸಂಬಂಧಿಕರೂ ವಾಸಿಸುತ್ತಿದ್ದಾರೆ ಎಂದರು. ಬಹುಸಂಖ್ಯೆಯ ಕುಟುಂಬಗಳು (೫೫ ಪ್ರತಿಶತ) ತಮ್ಮ ಸಂಬಂಧಿಗಳು ಭಾರತದಿಂದ ಎರಡು ಮೂರು ವರ್ಷಕ್ಕೊಮ್ಮೆ ಬಂದು ತಮ್ಮನ್ನು ಭೇಟಿಯಾಗುತ್ತಾರೆ ಎಂದರು. ಇನ್ನು ೩೦ ಪ್ರತಿಶತ ಕುಟುಂಬಗಳಿಗೆ ಅವರ ಸಂಬಂಧಿಕರ ಭೇಟಿ ಇನ್ನೂ ಹೆಚ್ಚು. ಒಂದು ಸರಾಸರಿಯಂತೆ, ಈ ಸಂಬಂಧಿಕರು ಎರಡರಿಂದ ನಾಲ್ಕು ತಿಂಗಳ ಕಾಲ ಉಳಿಯುತ್ತಾರೆ. ಅಜ್ಜ ಅಥವಾ ಅಜ್ಜಿಯ ಇರವು ಭಾಷೆಯ ಉಳಿಯುವಿಕೆಗೆ ಪೂರಕವಾದ ಅಂಶಗಳಲ್ಲೊಂದೆಂದು ಆಗಾಗ್ಗೆ ಉದಾಹರಿಸಲ್ಪಡುತ್ತದೆ. ಇದರಿಂದ, ಪ್ರಶ್ನಾವಳಿಗೆ ಉತ್ತರಿಸಿದವರ ಬಂಧುಗಳು ಅಮೆರಿಕಾಕ್ಕೆ ಭೇಟಿ ಕೊಟ್ಟಾಗ ಉಳಿಯುವ ಕಾಲಾವಧಿಯ ಕುರಿತು ಒಂದು ವಿಶೇಷ ಪ್ರಶ್ನೆಯನ್ನು ಕೇಳಲಾಯಿತು. ಒಂದು ಕುಟುಂಬದವರ ಬಂಧುಗಳಲ್ಲೊಬ್ಬರು ಅವರ ಜೊತೆಗೇ ವಾಸಿಸುತ್ತಿದ್ದಾರೆ; ಇನ್ನೊಂದು ಕುಟುಂಬದವರ ಬಂಧುಗಳು ಎಂದೂ ಅವರನ್ನು ಭೇಟಿಯಾಗಲು ಬಂದಿಲ್ಲ; ಈ ಎರಡು ಕುಟುಂಬಗಳನ್ನು ಬಿಟ್ಟರೆ, ಉಳಿದವರಿಗೆ ಸಂಬಂಧಿಸಿದಂತೆ, ಅವರ ಬಂಧುಗಳ ಭೇಟಿಯ ಕಾಲಾವಧಿ ಸರಾಸರಿಯಲ್ಲಿ ೫ ತಿಂಗಳಿಗಿಂತ ಸ್ವಲ್ಪ ಹೆಚ್ಚು.

**ಇ) ಪರಸ್ಪರ ಒಡನಾಟ ಹಾಗೂ ಸಾಮಾಜೀಕರಣದ ಸ್ವರೂಪ**

ಸ್ನೇಹಿತರು ಮತ್ತು ಸಂಬಂಧಿಕರ ಇರವಿನ ಬಗೆಗಿನ ಅಂಕೆಸಂಖ್ಯೆಗಳಿಗೆ ಪೂರಕವಾಗಿ ಕುಟುಂಬಗಳ ನಡುವಿನ ಪರಸ್ಪರ ಒಡನಾಟದ ತ್ವರಿತತೆಯನ್ನು ಕುರಿತ ಮಾಹಿತಿಯೂ ಇದೆ. ಈ ಪ್ರಶ್ನೆಗೆ ಎರಡು ಕುಟುಂಬಗಳವರು ಉತ್ತರಿಸಲಿಲ್ಲ. ಉತ್ತರಿಸಿದವರ ಒಟ್ಟು ಸಂಖ್ಯೆ ೧೯. ಉತ್ತರಿಸಿದವರಲ್ಲಿ ಅರ್ಧಭಾಗ ಕುಟುಂಬಗಳು (೧೧ ಅಥವಾ ೫೭.೮ ಪ್ರತಿಶತ) ತಮ್ಮ ಪ್ರದೇಶದಲ್ಲೇ ಇರುವ ಕನ್ನಡಿಗ ಸ್ನೇಹಿತರನ್ನು ಸುಮಾರಾಗಿ ಎರಡು-ಮೂರು ವಾರಗಳಿಗೊಮ್ಮೆ

ಭೇಟಿಯಾಗುತ್ತಾರೆ. ಉಳಿದವರು (೮ ಜನ ಅಥವಾ ೪೨.೧ ಪ್ರತಿಶತ) ವಾರಕ್ಕೊಮ್ಮೆ ಭೇಟಿಯಾಗುತ್ತಾರೆ.

ಕನ್ನಡಿಗರ ಸಾಮಾಜೀಕರಣ ಸ್ವರೂಪವು, ಭಾಷೆಯ ಉಳಿಯುವಿಕೆಯ ಬಗೆಗಿನ ತನ್ನ ಒಳಧ್ವನಿಗಳ ಕಾರಣದಿಂದ ಬೋಧಪ್ರದವಾಗಿದೆ. ೪೨.೯ ಪ್ರತಿಶತದಷ್ಟು ಜನ ತಮ್ಮ ಮನೆಗಳಿಗೆ ಹೆಚ್ಚಾಗಿ ಕನ್ನಡಿಗರನ್ನೇ ಅಮಂತ್ರಿಸುತ್ತಾರೆ; ೬೬.೭ ಪ್ರತಿಶತದಷ್ಟು ಜನ ಹೆಚ್ಚಾಗಿ ಕನ್ನಡಿಗರನ್ನೇ ಅಮಂತ್ರಿಸುವವರಾದರೂ, ಉಳಿದ ಭಾರತೀಯರನ್ನು ಸಹ ಅಮಂತ್ರಿಸುವಂಥವರು ಕೇವಲ ೧೯.೫ ಪ್ರತಿಶತದಷ್ಟು ಜನ ಮಾತ್ರ. ಕನ್ನಡಿಗರು, ಇತರ ಭಾರತಿಯರು, ಮತ್ತು ಅಮೆರಿಕನ್ನರು ಎಲ್ಲರನ್ನೂ ಒಟ್ಟಾಗಿಯೇ ಪ್ರತಿಸಾರಿಯೂ ಅಮಂತ್ರಿಸುತ್ತೇವೆಂದು ಹೇಳಿಕೊಂಡರು. ಯಾರೂ ಅಮೆರಿಕನ್ನರನ್ನೇ ತಮ್ಮ ಮನೆಗಳಿಗೆ ಹೆಚ್ಚಾಗಿ ಅಮಂತ್ರಿಸುತ್ತೇವೆಂದು ಹೇಳಿಕೊಳ್ಳಲಿಲ್ಲ. (ಕೆಲವರು ಪ್ರತಿಕ್ರಿಯೆಗೆ ಒಂದಕ್ಕಿಂತ ಹೆಚ್ಚು ವಿಭಾಗಗಳನ್ನು ಆರಿಸಿಕೊಂಡದ್ದರಿಂದ, ಪ್ರತಿಶತ ನೂರನ್ನೂ ದಾಟುತ್ತದೆ.) ಉತ್ತರಿಸಿದವರಲ್ಲಿ ಹೆಚ್ಚಿನ ಸಂಖ್ಯೆಯವರು ಕನ್ನಡಿಗ ಸ್ನೇಹಿತರನ್ನು ತಿಂಗಳಿಗೆ ಒಮ್ಮೆ ಅಥವಾ ಎರಡು ಬಾರಿ ಅಮಂತ್ರಿಸುತ್ತಾರೆ (ಅನುಕ್ರಮವಾಗಿ ೫೮ ಪ್ರತಿಶತ ಹಾಗೂ ೨೧.೫ ಪ್ರತಿಶತ). ೨೧.೫ ಪ್ರತಿಶತದಷ್ಟು ಜನ ತಮ್ಮ ಕನ್ನಡಿಗ ಸ್ನೇಹಿತರನ್ನು ಇದಕ್ಕೂ ಹೆಚ್ಚು ಸಾರಿ ಮನೆಗಳಿಗೆ ಬರಮಾಡಿಕೊಳ್ಳುತ್ತಾರೆ. ಈ ಅಂಕಿ-ಅಂಶಗಳು, ಕನ್ನಡಿಗ ಸಮೂಹದ ಸದಸ್ಯರು ಒಬ್ಬರೊಡನ್ನೊಬ್ಬರು ನಿಕಟ ಸಂಪರ್ಕವನ್ನಿಟ್ಟುಕೊಳ್ಳುತ್ತಾರೆಂಬುದನ್ನೂ ಹಾಗೂ ಅತಿಥೇಯ ಸಮಾಜದ ಜೊತೆಗೆ ಅವರು ಬಹಳಷ್ಟೇನೂ ಬೆರೆತಿಲ್ಲವೆಂಬುನ್ನೂ ಸೂಚಿಸುತ್ತವೆ.

**ಈ) ಕುಲದ ಸಂಸ್ಕೃತಿಯ ಉಳಿಯುವಿಕೆ**

ಹೀಗೆ ಬೆರೆಯದೇ ಉಳಿಯುವ ಪ್ರವೃತ್ತಿ, ಇತರ ಧೋರಣೆ ಮತ್ತು ವರ್ತನೆಗಳ ಜೊತೆಗೂ ತಾಳೆಹೋಗುವಂಥದ್ದು. ಅಮೆರಿಕನ್ ಆಟ ಮತ್ತು ಮನರಂಜನೆಗಳಲ್ಲಿ (ಸಿನೆಮಾವನ್ನು ಬಿಟ್ಟು) ಕನ್ನಡಿಗರು ಅಸಕ್ತಿಯುಳ್ಳವರಲ್ಲ; ಅಲ್ಲದೇ ಸಾಮಾಜಿಕ ಕೂಟಗಳಲ್ಲಿ ರಾಜಕಾರಣ ಪದೇಪದೇ ಚರ್ಚೆಯ ವಿಷಯವಾಗಿರುತ್ತದೆಯಾದರೂ, ಸ್ಥಳೀಯ ಅಥವಾ ರಾಷ್ಟ್ರೀಯ ರಾಜಕಾರಣದಲ್ಲಿ ಅವರು ಸಕ್ರಿಯವಾಗಿ ಭಾಗವಹಿಸುವುದಿಲ್ಲ. ಅವರು ಪ್ರಾಶಸ್ತ್ಯ ಕೊಡುವುದು ಭಾರತೀಯ ನೃತ್ಯ, ಸಂಗೀತ, ಮತ್ತು ಇತರ ರೂಪದ ಮನರಂಜನೆಗಳಿಗೆ. ಸಸ್ಯಾಹಾರಿ ಅಮೆರಿಕನ್ ಆಹಾರ ವನ್ನು ಕೆಲವೊಮ್ಮೆ ಬೆಳಗಿನ ಉಪಹಾರಕ್ಕೆ ಅಥವಾ ಮಧ್ಯಾಹ್ನದ ಊಟಕ್ಕೆ ಬಳಸುತ್ತಾರಾದರೂ, ಅವರ ಆಹಾರಾಭ್ಯಾಸಗಳು ಮೂಲಭೂತವಾಗಿ ಭಾರತೀಯ. ಎಲ್ಲಾ ೨೧ ಕುಟುಂಬಗಳೂ ರಾತ್ರಿಯ ಊಟಕ್ಕೆ ಭಾರತೀಯ ಆಹಾರವನ್ನೇ ತಿನ್ನುವುದಾಗಿ ಹೇಳುತ್ತವೆ. ಮೂರರಲ್ಲಿ ಎರಡರಷ್ಟು ಹಿರಿಯರ ಪ್ರಕಾರ ಅವರ ಮಕ್ಕಳೂ ಅವರು ತಿನ್ನುವ ಆಹಾರವನ್ನೇ ತಿನ್ನುವವರು; ಉಳಿದವರ ಮಕ್ಕಳು ಭಾರತೀಯ ಮತ್ತು ಅಮೆರಿಕನ್ ಆಹಾರಗಳೆರಡನ್ನೂ ತಿನ್ನುವಂಥವರು. ಕೇವಲ ಅಮೆರಿಕನ್ ಅಹಾರವನ್ನಷ್ಟೇ ಒಳಗೊಂಡ ಅಡುಗೆಯನ್ನು ಎಂದೂ ಮಾಡದಿರುವವರು

ಅರ್ಧಕ್ಕಿಂತ ಸ್ವಲ್ಪ ಮಂದಿ (೫೨.೪ ಪ್ರತಿಶತ); ಆಗೊಮ್ಮೆ ಈಗೊಮ್ಮೆ ಹಾಗೆ ಮಾಡುವವರು ೨೮.೬ ಪ್ರತಿಶತ; ವಿರಳವಾಗಿ ಹಾಗೆ ಮಾಡುವವರು ೧೯ ಪ್ರತಿಶತ. ಬಹುಸಂಖ್ಯೆಯ ಕುಟುಂಬಗಳು ಕ್ವೀನ್ಸ್‌ನಲ್ಲಿರುವ ಹಿಂದೂ ದೇವಾಲಯಕ್ಕೆ (ಭಾರತೀಯ ಪ್ರಾಂತಿಯ ಗುಂಪು ಗಳಲ್ಲಿ ಬಹಳಷ್ಟು ಮಂದಿಗೆ ಇದೊಂದು ಮುಖ್ಯವಾದ ಸಕ್ರಿಯ ಸಾಂಸ್ಕೃತಿಕ ಕೇಂದ್ರ) ಸುಮಾರಾಗಿ ಎರಡು ವಾರಕ್ಕೊಮ್ಮೆ ಭೇಟಿಕೊಡುವಂಥವು. ಹೆಚ್ಚೂಕಡಿಮೆ ಎಲ್ಲ ಕುಟುಂಬದವರೂ ಸ್ಥಳೀಯ ಕನ್ನಡ ಸಾಂಸ್ಕೃತಿಕ ಸಂಘಟನೆಯಾದ ಕನ್ನಡ ಕೂಟದ ಕಾರ್ಯಕ್ರಮಗಳಿಗೆ ಹಾಜರಾಗುತ್ತಾರೆ; ಇಂಥ ಕಾರ್ಯಕ್ರಮಗಳು ಸಾಮಾನ್ಯವಾಗಿ ಅವು ಕರ್ನಾಟಕದ ಹಬ್ಬಗಳ ಆಚರಣೆಗಳು, ದೇಶದ ಕಲಾವಿದರ ಭೇಟಿಯ ಕಾರ್ಯಕ್ರಮಗಳು, ವನಭೋಜನಗಳು ಈ ಪ್ರದೇಶದಲ್ಲಿ ತಿಂಗಳಿಗೊಮ್ಮೆಯಂತೆ ನಡೆಯುತ್ತವೆ. ಅದಕ್ಕೆ ಸಾಕಷ್ಟು ಜನ ಸೇರುತ್ತಾರೆ.

ಮೊದಲು ವಲಸೆ ಬಂದ ಇತರ ಹಲವು ಗುಂಪುಗಳ ಮೊದಲ ತಲೆಮಾರಿನವರಂತೆಯೇ ಕನ್ನಡಿಗರೂ ತಾವು ವಲಸೆಹೋದ ಊರಲ್ಲಿ ನೆಲೆನಿಲ್ಲುವ ವಿಷಯದಲ್ಲಿ ಅನಿಶ್ಚಿತ ಮನಸ್ಕರು. ಖಾಯಂ ನೆಲೆ ನಿಲ್ಲಲು ಭಾರತಕ್ಕೆ ಹಿಂದಿರುಗುವ ಯೋಜನೆಯಿದೆಯೇ ಎಂದು ಕೇಳಿದ್ದಕ್ಕೆ ೫೫ ಪ್ರತಿಶತ ಜನರು ಹೌದೆಂದೂ, ೪೫ ಪ್ರತಿಶತ ಗೊತ್ತಿಲ್ಲವೆಂದೂ ಹೇಳಿದರು. ಇಲ್ಲ ಎಂದು ಯಾರೂ ಅನ್ನಲಿಲ್ಲ. ಪೌರತ್ವದ ಸ್ವರೂಪಗಳು ಈ ಅನಿಶ್ಚಿತತೆಯನ್ನು ಪ್ರತಿಬಿಂಬಿಸುತ್ತವೆ. ೪೫ ಪ್ರತಿಶತ ಗಂಡಸರು ಹಾಗೂ ೨೫ ಪ್ರತಿಶತ ಹೆಂಗಸರು ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಪೌರರಾಗಿದ್ದಾರೆ. ಒಟ್ಟಾರೆಯಾಗಿ ೩೫ ಪ್ರತಿಶತದಷ್ಟು ಜನ ಅಮೆರಿಕಾದ ಪೌರತ್ವವನ್ನು ಪಡೆದಿದ್ದಾರೆ. ಅಮೆರಿಕನ್ ಪೌರತ್ವವು ಹತ್ತಿರದ ಸಂಬಂಧಿಗಳಿಗೆ ಖಾಯಂ ಆಗಿ ಉಳಿಯುವ ಸೌಲಭ್ಯವನ್ನು ಒದಗಿಸುವ ಅತಿಸುಲಭ ಮಾರ್ಗವಾಗಿರುವುದರಿಂದ, ಇದು ಅವರು ಅಮೆರಿಕಾದಲ್ಲಿ ಶಾಶ್ವತವಾಗಿ ಉಳಿಯುವುದಕ್ಕೆ ಬದ್ಧರಾಗಿರುವುದರ ಸೂಚನೆಯೇನೂ ಅಗಬೇಕಾಗಿಲ್ಲ. ಕೇವಲ ಎರಡು ಕುಟುಂಬಗಳಲ್ಲಷ್ಟೇ ಗಂಡ ಮತ್ತು ಹೆಂಡತಿ ಇಬ್ಬರೂ ಅಮೆರಿಕಾ ಪೌರರಾಗಿರುವುದು ಒಂದು ಕುತೂಹಲಕರ ಅಂಶ.

**ಉ) ಹಿರಿಯರಿಂದ ಭಾಷೆಯ ಬಳಕೆ**

ವಲಸೆ ಬಂದ ಕನ್ನಡಿಗರ ಮೊದಲ ತಲೆಮಾರಿನವರಲ್ಲಿ ಭಾಷಾ ಬಳಕೆಯ ಸ್ವರೂಪವನ್ನು ಸಾಧ್ಯವಾದಷ್ಟು ವಿವರಗಳಲ್ಲಿ ರುಜುವಾತು ಪಡಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ ಗಳಲ್ಲೊಂದು. ಇದು ಎರಡು ಕಾರಣಗಳಿಗಾಗಿ ಉಪಯುಕ್ತ: ಮುಂದಿನ ತಲೆಮಾರುಗಳಲ್ಲಿ ಭಾಷೆಯ ಉಳಿಯುವಿಕೆ ಮತ್ತು ಕದಲುವಿಕೆಯ ಸ್ವರೂಪವನ್ನು ಅಳೆಯಲು, ಯಥಾರ್ಥವಾದ ಪರಾಮರ್ಶನ ಕೇಂದ್ರವೊಂದನ್ನು ನಿರ್ಧರಿಸಲು ಇದು ಸಹಾಯಕವಾಗುತ್ತದೆ; ಭಾಷೆಯ ಕದಲುವಿಕೆಯು ಮೊದಲ ತಲೆಮಾರಿನಲ್ಲೇ ನಡೆಯುತ್ತದೆಯೇ ಎಂಬುದನ್ನು ಮತ್ತು ಅದರಿಂದಾಗಿ, ಭಾಷೆಯ ಉಳಿಸುವಿಕೆಯ ಅವರ ಪ್ರಯತ್ನದಲ್ಲಿ ಅವರ ಮಕ್ಕಳಿಗೆ ದೊರೆಯುವ ಭಾಷಾದ್ರವ್ಯದ ಗುಣವನ್ನೂ ನಿರ್ಧರಿಸಬಹುದು.

ವಿವಿಧ ಅನೌಪಚಾರಿಕ ಕ್ಷೇತ್ರಗಳಲ್ಲಿ ಹಿರಿಯರು ಮಾತನಾಡುವ ಕನ್ನಡ, ಇಂಗ್ಲಿಶ್ ಅಥವಾ ಅವರೆಡರ ಬಳಕೆಯ ಕುರಿತು ಪ್ರಶ್ನಾವಳಿಯ ಹಲವು ಅಂಶಗಳು ಕೇಂದ್ರೀಕೃತವಾಗಿದ್ದವು. ೫೭.೧ ಪ್ರತಿಶತ ಹಿರಿಯರು ಹೇಳುವಂತೆ ಕನ್ನಡಿಗ ಸ್ನೇಹಿತರನ್ನು ಭೇಟಿಯಾದಾಗ "ತುಂಬಾ ಇಂಗ್ಲಿಶು ಬೆರೆತಿರುವ ಕನ್ನಡದಲ್ಲೇ ಹೆಚ್ಚಾಗಿ" ಅವರ ಸಂಭಾಷಣೆ. ಉಳಿದವರಲ್ಲಿ "ಕನ್ನಡದಲ್ಲೇ ಬಹಳಷ್ಟು" ಮಾತಾಡುವವರು ಕೆಲವರಾದರೆ(೨೩.೮ ಪ್ರತಿಶತ) "ಪೂರ್ತಿ ಕನ್ನಡದಲ್ಲಿ" ಮಾತಾಡುವವರು ಇನ್ನು ಕೆಲವರು(೧೯ ಪ್ರತಿಶತ). ದೂರವಾಣಿ ಸಂಭಾಷಣೆಯಲ್ಲೂ ಭಾಷಾ ಬಳಕೆಯು ಅದೇ ಸ್ವರೂಪದ್ದು. ಕನ್ನಡಿಗ ಸ್ನೇಹಿತರು ದೂರವಾಣಿಯಲ್ಲಿ ಕರೆದಾಗ, ೫೭.೧ ಪ್ರತಿಶತ ಜನರು ಹೇಳುವಂತೆ ಅವರು ಇಂಗ್ಲಿಷ್ ಮತ್ತು ಕನ್ನಡಗಳೆರಡನ್ನೂ ಬಳಸಿದರೆ, ೪೨.೯ ಪ್ರತಿಶತ ಜನರು ಹೆಚ್ಚಾಗಿ ಕನ್ನಡದಲ್ಲೇ ಮಾತಾಡುವವರು.

ಊರಲ್ಲಿರುವ ಸ್ನೇಹಿತರಿಗೆ ಮತ್ತು ಸಂಬಂಧಿಕರಿಗೆ ಪತ್ರಗಳನ್ನು ಬರೆಯುವಾಗ, ಭಾಷಾ ಬಳಕೆಯ ಕುತೂಹಲಕರ ಸ್ವರೂಪವನ್ನು ಪಡೆದಿರುತ್ತದೆ. ತಾಯಿಗೆ ಪತ್ರ ಬರೆಯುವಾಗ ಭಾಷೆಯ ಆಯ್ಕೆಯ ಸ್ವಾತಂತ್ರ್ಯ ಕೇವಲ ಕನ್ನಡಕ್ಕಷ್ಟೇ ಸೀಮಿತವಾಗಿರುವುದು ಹೆಚ್ಚು. ಆದರೆ ತಂದೆಗೆ ಅಥವಾ ಒಡಹುಟ್ಟಿದವರಿಗೆ ಬರೆಯುವಾಗ ಸಾಕಷ್ಟು ಸಾರಿ ಇಂಗ್ಲಿಷಿನ ಬಳಕೆಯಾಗುತ್ತದೆ. ಸ್ನೇಹಿತರಿಗೆ ಬರೆಯುವಾಗ ಇಂಗ್ಲೀಶಿಗೆ ಹೆಚ್ಚು ಪ್ರಾಶಸ್ತ್ಯ. ಆದರೆ ಇಲ್ಲೂ ಕೂಡಾ, ಕೆಳಗೆ ಕಾಣಿಸಿರುವಂತೆ, ಭಾಷಾ ಬದಲಾವಣೆ ನಡೆಯುತ್ತದೆ. (ಈ ಪ್ರಶ್ನೆಗಳಿಗೆ ಉತ್ತರಿಸಿದವರ ಸಂಖ್ಯೆಯನ್ನು ಕೆಳಗಿನ ಸಂಖ್ಯೆಗಳು ತಿಳಿಸುತ್ತವೆ)

**ಹಿರಿಯರ ಪತ್ರ ವ್ಯವಹಾರದ ಭಾಷೆ**

| ಪತ್ರ ಪಡೆಯುವವರು | ಕನ್ನಡ | ಇಂಗ್ಲಿಷ್ | ಕೆಲವೊಮ್ಮೆ ಕನ್ನಡ ಕೆಲವೊಮ್ಮೆ ಇಂಗ್ಲಿಷ್ | ಸಂಖ್ಯೆ |
|---|---|---|---|---|
| ತಂದೆ | ೫೬ ಪ್ರತಿಶತ | ೨೫ ಪ್ರತಿಶತ | ೧೯ ಪ್ರತಿಶತ | ೧೬ |
| ತಾಯಿ | ೯೪ ಪ್ರತಿಶತ | ೦ ಪ್ರತಿಶತ | ೬ ಪ್ರತಿಶತ | ೧೬ |
| ಸಹೋದರರು | ೪೨ ಪ್ರತಿಶತ | ೩೭ ಪ್ರತಿಶತ | ೨೧ ಪ್ರತಿಶತ | ೧೯ |
| ಸಹೋದರಿಯರು | ೫೦ ಪ್ರತಿಶತ | ೨೫ ಪ್ರತಿಶತ | ೨೫ ಪ್ರತಿಶತ | ೧೬ |
| ಸ್ನೇಹಿತರು | ೨೧ ಪ್ರತಿಶತ | ೪೩ ಪ್ರತಿಶತ | ೩೬ ಪ್ರತಿಶತ | ೧೪ |

ಓದುವಿಕೆ ಹಾಗೂ ಮನರಂಜನೆಗಳಲ್ಲಿ ಕನ್ನಡದ ಬಳಕೆ ಎದ್ದು ಕಾಣುವಷ್ಟೇನಿಲ್ಲ. ಸರಾಸರಿಯಂತೆ ಪ್ರಶ್ನಾವಳಿಗೆ ಉತ್ತರಿಸಿದ ಪ್ರತಿಯೊಬ್ಬರೂ, ಕಳೆದೆರಡು ವರ್ಷಗಳಲ್ಲಿ ಕೇವಲ ೨ರಿಂದ ೩ ಪುಸ್ತಕಗಳನ್ನು ಓದಿದ್ದರು; ಕನ್ನಡ ವೃತ್ತಪತ್ರಿಕೆಗಳು ಮತ್ತು ದಿನಪತ್ರಿಕೆಗಳ ಓದುವಿಕೆ ಕುರಿತ ಪ್ರಶ್ನೆಗೆ ಬಹಳಷ್ಟು ಜನ ಉತ್ತರಿಸಲಿಲ್ಲ, ಪ್ರಾಯಶಃ ಅವು ಅಮೆರಿಕದಲ್ಲಿ ಸಿಕ್ಕದಿರುವುದೇ ಅದಕ್ಕೆ ಕಾರಣವಿರಬೇಕು. ಹಾಗಿದ್ದರೂ, ಅಮೆರಿಕಾದಲ್ಲಿ ಕನ್ನಡ ಸಂಸ್ಕೃತಿ ಮತ್ತು ಭಾಷೆಯ

ಬೆಳವಣಿಗೆಗೆ ಮೀಸಲಾಗಿರುವ ಹೊಸ ವೃತ್ತಪತ್ರಿಕೆ ಅಮೆರಿಕನ್ನಡಕ್ಕೆ ೮೫ ಪ್ರತಿಶತದಷ್ಟು ಬಹುಸಂಖ್ಯೆಯ ಜನರು ಚಂದಾದಾರರಾಗಿದ್ದಾರೆ. ಸಿನಿಮಾಗಳ ಮಟ್ಟಿಗೆ ಹೇಳುವುದಾದರೆ, ಬಹಳಷ್ಟು ಜನ ತಾವು ಹಿಂದಿ ಸಿನೆಮಾಗಳನ್ನು ನೋಡುವುದಾಗಿ ಹೇಳಿದರು, ಯಾಕೆಂದರೆ ಅಮೆರಿಕಾದಲ್ಲಿ ತೆರೆಕಾಣುವ ಕನ್ನಡ ಸಿನೆಮಾಗಳು ಇಲ್ಲ ಎನ್ನುವಷ್ಟು ಅತ್ಯಲ್ಪ. ಉತ್ತರಿಸಿದವರಲ್ಲಿ ಅರ್ಧದಷ್ಟು ಜನ ತಾವು ಆಗಾಗ್ಗೆ ವಿಡಿಯೋದಲ್ಲಿ ಕನ್ನಡ ಸಿನೆಮಾಗಳನ್ನು ನೋಡುವುದಾಗಿ ಹೇಳಿದರು. ಹಾಗಾಗಿ ಈ ದೇಶದಲ್ಲಿ ಕನ್ನಡ ಹೆಚ್ಚಾಗಿ ಸ್ನೇಹಿತರು ಮತ್ತು ಸಂಬಂಧಿಕರ ನಡುವೆ ಮುಖಾಮುಖಿಯಾದ ಒಡನಾಟದಲ್ಲಿ ಮಾತ್ರ ಬಳಕೆಯಾಗುವ ಭಾಷೆಯಾಗಿರುವಂತೆ ಕಾಣುತ್ತದೆ. ಕನ್ನಡ ಕೂಟ ಸಂಘಟಿಸುವ ಕಾರ್ಯಕ್ರಮಗಳಲ್ಲಿ ಹಾಗೂ ಸಂಗೀತ ಕಛೇರಿಗಳು, ನಾಟ್ಯ ಪ್ರದರ್ಶನಗಳು ಅಥವಾ ವನಭೋಜನದಂಥ ಇತರ ಅನೌಪ ಚಾರಿಕ ಸಾಂಸ್ಕೃತಿಕ ಘಟನೆಗಳಲ್ಲಿ ಕೂಡಾ ಕನ್ನಡ ಬಳಕೆಯಾಗುತ್ತದೆ. ಔಪಚಾರಿಕ ಸಾಂಸ್ಕೃತಿಕ ಕೂಟಗಳ ಕಾರ್ಯಕ್ರಮಗಳು ಹೆಚ್ಚಾಗಿ ಕನ್ನಡದಲ್ಲೇ ನಡೆಯುತ್ತವೆ.

ಆದರೂ ಪಾರ್ಲಿಮೆಂಟರಿ ಕಾರ್ಯವಿಧಾನಗಳ ಮತ್ತು ಅಂಥ ಕಚೇರಿ ಅಥವಾ ಕಾನೂನಿನ ವಿಷಯಗಳ ಚರ್ಚೆಯಲ್ಲಿ ಭಾಷೆಯನ್ನು ಇಂಗ್ಲಿಷಿಗೆ ಬದಲಾಯಿಸುವುದು ಅಪರೂಪವೇನಲ್ಲ (ಉದಾಹರಣೆಗೆ ಕನ್ನಡ ಸಂಘಗಳ ಸರ್ವಸದಸ್ಯ ಸಭೆಗಳ ವ್ಯಾವಹಾರಿಕ ಭಾಗದಲ್ಲಿ) ಕಾರ್ಯವಿಧಾನಗಳ ಒಂದಂಶವನ್ನು, ಮಕ್ಕಳ ಭಾಗವಹಿಸುವಿಕೆಯನ್ನು ಒಳಗೊಳ್ಳುವ ಹಾಗೂ ಪ್ರೋತ್ಸಾಹಿಸುವ ದೃಷ್ಟಿಯಿಂದ, ಹೆಚ್ಚಿನ ಸಾರಿ ಇಂಗ್ಲಿಶಿನಲ್ಲೇ ನಿರ್ವಹಿಸುತ್ತಾರೆ. ಈ ತೀರ್ಮಾನವನ್ನು ಮೊದಲು ತೆಗೆದುಕೊಂಡಾಗ ಅದು ವಿವಾದಾತ್ಮಕವಾಗಿತ್ತು; ಭಾಷೆಯ ಕದಲುವಿಕೆಯ ಅನಿವಾರ್ಯತೆಯನ್ನು ಒಳಗೊಳಗೇ ಒಪ್ಪಿಕೊಂಡಂತೆಯೂ ಭಾಷೆಯ ಕದಲುವಿಕೆಗೆ ಈ ಕ್ರಮ ಪೂರಕವೆಂದು ಕೆಲವರು ಪರಿಗಣಿಸುತ್ತಾರೆ.

ಮಾಮೂಲಾಗಿ ಕುಲದ ಭಾಷೆಯ ಅತ್ಯಂತ ಪ್ರಬಲ ಕೋಟೆಯೆಂದರೆ ಧರ್ಮ. ಆದರೆ ಹಿಂದೂ ಸಂಪ್ರದಾಯದಲ್ಲಿ ಪ್ರಾರ್ಥನೆಗೂ ಧಾರ್ಮಿಕ ವಿಧಿಗಳಿಗೂ ನಡುವೆ ಮುಖ್ಯವ್ಯತ್ಯಾಸ ವಿರುವುದರಿಂದ, ಕನ್ನಡದ ಉಳಿಯುವಿಕೆಯಲ್ಲಿ ಧರ್ಮದ ಪಾತ್ರ ಅತ್ಯಲ್ಪ. ಶಾಸ್ತ್ರೀಯವಾದ ವಿಧಿಗಳಿಗೆ ಬಳಕೆಯಾಗುವ ಭಾಷೆ ಸಂಸ್ಕೃತವಾದರೆ, ಮಾತೃಭಾಷೆಯ ಬಳಕೆಯಾಗುವುದು ವೈಯಕ್ತಿಕ ಪ್ರಾರ್ಥನೆಗಳಲ್ಲಿ, ಸಮೂಹ ಗಾನದಲ್ಲಿ, ಭಕ್ತಿಗೀತೆಗಳಲ್ಲಿ ಅಥವಾ ಧಾರ್ಮಿಕ ಹಾಗೂ ಪೌರಾಣಿಕ ವಿಷಯಗಳ ವ್ಯಾಖ್ಯಾನದಲ್ಲಿ ಮಾತ್ರ. ನ್ಯೂಯಾರ್ಕಿನ ಹಿಂದೂ ದೇವಾಲಯದಲ್ಲಿ ಧಾರ್ಮಿಕ ವಿಧಿಗಳನ್ನು ನಡೆಸಲು ಉಪಯೋಗವಾಗುವ ಭಾಷೆ ಸಂಸ್ಕೃತ. ಆದರೆ ಉಳಿದ ಎಲ್ಲ ಧಾರ್ಮಿಕ ಕಾರ್ಯಗಳೂ ವ್ಯಕ್ತಿಗಳ ಅಥವಾ ಆಸಕ್ತ ಜನರ ಗುಂಪುಗಳಿಗೆ ಬಿಟ್ಟದ್ದು. ನಮ್ಮ ಈ ಅಧ್ಯಯನದಲ್ಲಿ ಭಾಗಿಗಳಾಗಿರುವವರೆಲ್ಲ ಹಿಂದೂಗಳು; ಬಹಳಷ್ಟು ಜನರು ಧಾರ್ಮಿಕರಾಗಿ ಕಾಣುತ್ತಾರೆ. (ಉದಾಹರಣೆಗೆ, ಹೆಚ್ಚಿನವರ ಮನೆಗಳಲ್ಲಿ ಒಂದು ಕೋಣೆಯ ಒಂದು ಭಾಗವಾಗಿ ದೇವರ ಕೋಣೆ ಇದೆ). ಆದರೆ ಕನ್ನಡ ಬಳಕೆಯಾಗುವ ವಿಶೇಷ ಧಾರ್ಮಿಕ ಸಮಾರಂಭಗಳು ಮಾತ್ರ ಇಲ್ಲ ಎನ್ನುವಷ್ಟು ಕಡಿಮೆ. ಭಕ್ತಿಗೀತೆಗಳ

ಗಾಯನ ಬಹಳ ಜನಪ್ರಿಯವಾಗಿದೆಯಾದರೂ ಇದನ್ನು ಆಗಾಗ್ಗೆ ನಡೆಯುವ ಕರ್ನಾಟಕ ಸಂಗೀತ ಕಛೇರಿಗಳ ಅಂಗವಾಗಿ ನಡೆಸಲಾಗುತ್ತದೆಯೇ ಹೊರತು ಇದಕ್ಕಿರುವ ಧಾರ್ಮಿಕ ಮಹತ್ವ ಅತ್ಯಂತ ಕಡಿಮೆ. ಸಾಂಪ್ರದಾಯಿಕ ಹರಿಕಥೆಯ ಹಾಡುಗಾರ-ನಿರೂಪಕರೂ ಈ ದೇಶಕ್ಕೆ ಭೇಟಿಕೊಡುವುದು ಅತ್ಯಂತ ಕಡಿಮೆ. ಹಾಗಾಗಿ ಕನ್ನಡದ ಉಳಿಯುವಿಕೆಯಲ್ಲಿ ಧರ್ಮದ ಪಾತ್ರ ಅತ್ಯಲ್ಪ.

ಒಟ್ಟಲ್ಲಿ ಹೇಳುವುದಾದರೆ, ಕನ್ನಡದ ಬಳಕೆ ಅತಿ ಹೆಚ್ಚಾಗಿರುವುದು ಕುಟುಂಬದ ವ್ಯಾಪ್ತಿಯಲ್ಲಿ, ಸ್ನೇಹಿತರು ಮತ್ತು ಬಂಧುಗಳ ನಡುವಿನ ಮುಖಾಮುಖಿ ಅಥವಾ ದೂರವಾಣಿ ಸಂಭಾಷಣೆಗಳಲ್ಲಿ, ಹಾಗೂ ಕನ್ನಡ ಕಾರ್ಯಕ್ರಮಗಳಲ್ಲಿ. ಆದರೆ ಕನ್ನಡದ ಈ ಕಾರ್ಯವನ್ನು ಇಂಗ್ಲಿಶು ಆಗಿಂದಾಗ್ಗೆ ಹಂಚಿಕೊಳ್ಳುತ್ತಿರುತ್ತದೆ. ಔಪಚಾರಿಕ ಶಿಕ್ಷಣ ಹಾಗೂ ಕಾರ್ಯಕ್ಷೇತ್ರಗಳ ವ್ಯಾಪ್ತಿಯಲ್ಲಿ ಮಾತ್ರ ಕನ್ನಡಕ್ಕೆ ಸ್ಥಾನ ಇಲ್ಲವೇ ಇಲ್ಲ. ಹಿರಿಯರ ಈ ರೀತಿಯ ಕನ್ನಡದ ಬಳಕೆಯ ಹಿನ್ನೆಲೆಯಲ್ಲಿ ಮಕ್ಕಳ ಭಾಷಾ ಬಳಕೆಯ ಸ್ವರೂಪವನ್ನು ಗಮನಿಸಬಹುದು

**ಊ) ಮಕ್ಕಳಿಂದ ಭಾಷೆಗಳ ಬಳಕೆ**

ಪ್ರಶ್ನಾವಳಿಗೆ ಉತ್ತರಿಸಿದ ಪ್ರತಿ ಕುಟುಂಬದಲ್ಲಿ ಸರಾಸರಿ ಇಬ್ಬರು ಮಕ್ಕಳಿದ್ದಾರೆ. ಮೊದಲ ಮಗು ೧೪.೮ ವರ್ಷ ವಯಸ್ಸಿನದು; ಎರಡನೆಯದು ೧೨.೦೩ ವರ್ಷ ವಯಸ್ಸಿನದು. ಒಟ್ಟು ೩೮ ಮಕ್ಕಳಲ್ಲಿ ೧೭ ಮಕ್ಕಳು ಅಮೆರಿಕಾ ಹೊರಗಡೆ ಜನಿಸಿದವರು ಹಾಗೂ ೭ ಮಕ್ಕಳು ಎರಡು ವರ್ಷ ವಯಸ್ಸಾಗುವ ಮೊದಲೇ ಅಮೆರಿಕಾ ಬಂದವರು. ಅಂದರೆ, ೩೮ ಮಕ್ಕಳಲ್ಲಿ ೨೮ ಮಕ್ಕಳು ಅಥವಾ ೭೩.೭ ಪ್ರತಿಶತ, ತಮ್ಮ ಪ್ರಥಮ ಭಾಷೆಯನ್ನು ಕಲಿತದ್ದು ಅಮೆರಿಕಾದಲ್ಲಿ.

ನಾವು ಈಗಾಗಲೇ ಗಮನಿಸಿರುವಂತೆ, ಹಿರಿಯರು ತಮ್ಮ ಸ್ನೇಹಿತರ ಜೊತೆಗಿನ ಒಡನಾಟದಲ್ಲಿ ಬಳಸುವುದು ಕನ್ನಡ ಮತ್ತು ಇಂಗ್ಲಿಶಿನ ಮಿಶ್ರಣವನ್ನು. ಈಗ ನಾವು ಮಕ್ಕಳ ಕನ್ನಡ ಮತ್ತು ಇಂಗ್ಲಿಶಿನ ಬಳಕೆಯನ್ನು ವಿವರವಾಗಿ ನೋಡೋಣ. ಇಲ್ಲಿನ ಮಾಹಿತಿಗಳು, ತಮ್ಮ ಮಕ್ಕಳ ಭಾಷೆಯ ಬಳಕೆಯ ಬಗೆಗಿನ ಹಿರಿಯರ ವರದಿಗಳ ಮೇಲೆ ಆಧರಿತವಾಗಿವೆ ಅಲ್ಲದೇ, ಮಕ್ಕಳದೇ ಅಭಿಪ್ರಾಯಗಳ ನೇರ ವರದಿಯ ಮೇಲಲ್ಲ ಎಂಬುದನ್ನು ಗಮನಿಸುವುದು ಮುಖ್ಯ. ಹಿರಿಯರ ಈ ವರದಿಗಳ ಯಾಥಾರ್ಥತೆಯನ್ನು ಬಹಳಷ್ಟು ಅವಲೋಕನದಿಂದ ಈ ಲೇಖಕಿ ದೃಢಪಡಿಸಿಕೊಂಡಿದ್ದಾರೆ, ಆದರೂ, ಈ ಬಗ್ಗೆ ಹೆಚ್ಚು ನೇರವಾದ ಅಧ್ಯಯನ ವೊಂದು ಖಂಡಿತವಾಗಿ ಅಗತ್ಯವಾದುದು. ಈ ಅಧ್ಯಯನದ ಒಂದು ವಿಶೇಷ ಲಕ್ಷಣ ಎಂದರೆ ಮಕ್ಕಳಿಗೆ ತಮ್ಮ ಕುಲದ ಭಾಷೆಯಲ್ಲಿ ಇರುವ ಪ್ರಾವೀಣ್ಯದ ಸ್ವರೂಪ ಮತ್ತು ವ್ಯಾಪ್ತಿಯ ವಿವರವಾದ ಚಿತ್ರಣವನ್ನು ಕೊಡುವ ಪ್ರಯತ್ನ. ಈ ಕಾರಣಕ್ಕಾಗಿ ಭಾಷಾ ಪ್ರಾವೀಣ್ಯವನ್ನು, ಮಾತನಾಡುವಿಕೆ, ಅರ್ಥಗ್ರಹಣ, ಓದುವಿಕೆ, ವಿಶಿಷ್ಟ ಸಂದರ್ಭಗಳಲ್ಲಿ ಬರೆಯುವಿಕೆಗಳೆಂಬ ವಿವಿಧ ಕೌಶಲಗಳನ್ನೊಳಗೊಂಡ ಅವಯವ ವಿಭಾಗಗಳನ್ನಾಗಿ ವಿಭಜಿಸಲಾಯಿತು. ಮಕ್ಕಳಲ್ಲಿ ಭಾಷಾ ಮಿಶ್ರಣದ ವ್ಯಾಪ್ತಿ ಮತ್ತು ಉತ್ಪಾದನಾ ಅಥವಾ ಗ್ರಹಣ ಸಾಮರ್ಥ್ಯ ಕುರಿತ ಪ್ರಶ್ನೆಗಳ

ಮೂಲಕ ಭಾಷಾ ಪ್ರಭುತ್ವವನ್ನು ಶೋಧಿಸಲಾಯಿತು. ಮೊದಲನೆಯದಾಗಿ, ಊಟ, ಬಟ್ಟೆ, ಸ್ನೇಹಿತರು ಇತ್ಯಾದಿಗಳ ವಿಷಯದಲ್ಲಿ ನಡೆಯುವ ದೈನಂದಿನ ಸಂಭಾಷಣೆಗಳಲ್ಲಿ ಆಗುವ ಆಡುಕನ್ನಡದ ಉಪಯೋಗವನ್ನು ಮಕ್ಕಳು ಗ್ರಹಿಸುತ್ತಾರೆಯೇ ಎಂಬ ಪ್ರಶ್ನೆಯನ್ನು ಹಿರಿಯರಿಗೆ ಕೇಳಲಾಯಿತು. ಈ ಸಾಮರ್ಥ್ಯ ಎಲ್ಲ ಮಕ್ಕಳಲ್ಲೂ ಇದೆಯೆಂದು ತಿಳಿದುಬಂದಿತು. ಮಾತನಾಡುವ ಶಕ್ತಿ ಕುರಿತಂತೆ, ಈ ಕೌಶಲ್ಯವನ್ನು, ಕನಿಷ್ಠ ಪ್ರಮಾಣದ ಪದಗ್ರಹಣ ಸಾಮರ್ಥ್ಯದಿಂದ ಹಿಡಿದು ಆ ಭಾಷೆಯ ಒಳಗಿನವರಿಗೆ ಸಾಧ್ಯವಾಗುವ ನಿರರ್ಗಳತೆಯವರೆಗಿನ ವ್ಯಾಪ್ತಿಯ, ನಾಲ್ಕು ರೀತಿಯ ವರ್ತನೆಗಳಾಗಿ ವಿಂಗಡಿಸಲಾಯಿತು. ಈ ವಿಂಗಡಣೆಗಳಲ್ಲಿ ನಡುವಿನ ಎರಡು ವಿಭಾಗಗಳೆಂದರೆ, ಬಿಟ್ಟುಬಿಟ್ಟು ಮಾತಾಡುವಿಕೆ ಹಾಗೂ ಸೀಮಿತ ಸಂಭಾಷಣಾ ಸಾಮರ್ಥ್ಯ. ಈ ಕೌಶಲ್ಯಕ್ಕೆ ಸಂಬಂಧಿಸಿದ ಪ್ರತಿ ವಿಭಾಗಕ್ಕೂ ಪ್ರತಿ ಮಗುವನ್ನು ಕುರಿತ ಪ್ರತ್ಯೇಕ ಮಾಹಿತಿಗಳನ್ನು ಪಡೆಯಲಾಯಿತು.

"ನಿಮ್ಮ ಮಕ್ಕಳು ಎಷ್ಟು ಚೆನ್ನಾಗಿ ಕನ್ನಡ ಮಾತಾಡಬಲ್ಲರು?"

| | ಕೌಶಲ್ಯದ ವಿಭಾಗ | ಮಗು ೧ (ಸಂ=೨೧) | ಮಗು ೨ (ಸಂ=೧೨) | ಮಗು ೩ (ಸಂ=೩) | ಮಗು ೪ (ಸಂ=೧) |
|---|---|---|---|---|---|
| ಅ) | ಮುಖ್ಯವಾಗಿ ಮಾತಾಡುವುದು ಇಂಗ್ಲಿಶ್, ಆದರೆ ಕೆಲವೊಮ್ಮೆ ಕನ್ನಡ ಪದಗಳನ್ನು, ಪದಗುಚ್ಛಗಳನ್ನು ಬಳಸುತ್ತಾರೆ | ೬ | ೩ | ೧ | - |
| ಆ) | ಸರಳ ಪ್ರಶ್ನೆಗಳಿಗೆ ಒಂದೊಂದು ಪದಗಳಲ್ಲಿ ಅಥವಾ ಪದಗುಚ್ಛಗಳಲ್ಲಿ ಅಥವಾ ವಾಕ್ಯದಲ್ಲಿ ಉತ್ತರಿಸಬಲ್ಲರು, ಆದರೆ ಹಲವು ವಾಕ್ಯಗಳನ್ನು ಏಕಕಾಲಕ್ಕೆ ಬಳಸಲಾರರು | ೫ | ೫ | ೦ | |
| ಇ) | ತಮ್ಮ ಹವ್ಯಾಸ ಅಥವಾ ಆಸಕ್ತಿಗಳ ಬಗ್ಗೆ ಚಿಕ್ಕ ಸಂಭಾಷಣೆಯನ್ನು ನಡೆಸಬಲ್ಲರು | ೫ | ೪ | ೧ | ೧ |
| ಈ) | ಕರ್ನಾಟಕದ ಹುಟ್ಟಾ ಕನ್ನಡಿಗರಷ್ಟೇ ಚೆನ್ನಾಗಿ ಮಾತಾಡಬಲ್ಲರು | ೫ | - | ೧ | - |

ವಲಸೆಗಾರ ಕುಟುಂಬಗಳ ಮೊದಲ ತಲೆಮಾರಿನ ಹಿರಿಯ ಮಕ್ಕಳು ತಮ್ಮ ಒಡಹುಟ್ಟಿದ ಕಿರಿಯರಿಗಿಂತ ತಮ್ಮ ಕುಲದ ಭಾಷೆಯಲ್ಲಿ ಹೆಚ್ಚು ಪ್ರಾವೀಣ್ಯ ಪಡೆದಿರುತ್ತಾರೆ. ಆಡುಭಾಷೆಯಲ್ಲಿ ತಮ್ಮ ನಾಡಿಗರ ಸಾಮರ್ಥ್ಯವನ್ನು ಹೆಚ್ಚಿನ ಮಟ್ಟಿಗೆ ಮೊದಲು ಹುಟ್ಟಿದ ಮಕ್ಕಳು ಹೊಂದಿರುತ್ತಾರೆಯೆಂಬ ಮೇಲ್ಕಂಡ ಸಂಗತಿ, ಈ ವಾದವನ್ನು ಸಮರ್ಥಿಸುವಂತೆ ತೋರುತ್ತದೆ. ಇದಕ್ಕೆ ಹಲವು ವಿವರಣೆಗಳಿರಬಹುದು. ಮೊದಲು ಹುಟ್ಟಿದ ಮಗುವಿಗೆ ದೊರೆಯುವ

ಭಾಷಾದ್ರವ್ಯದ ಮೇಲೆ ಹಿರಿಯರಿಗೆ ಹೆಚ್ಚಿನ ಹತೋಟಿಯಿರುತ್ತದೆ. ಹಾಗೇಯೇ ಮುಖ್ಯ ಪ್ರವಾಹದ ಭಾಷೆಯು ತಮ್ಮ ಒಡಹುಟ್ಟಿದ ಹಿರಿಯರ ಭಾಷೆಯ ಮೇಲೆ ಮಾಡುತ್ತಿರುವ ಪ್ರಭಾವ ಏರುತ್ತಲೇ ಇದ್ದು, ಕಿರಿಯ ಮಕ್ಕಳಿಗೆ ತಮ್ಮ ಕುಲದ ಭಾಷೆಯಲ್ಲಿರುವ ಹತೋಟಿಯನ್ನು ಅಭದ್ರಗೊಳಿಸಬಹುದು.

ಮಕ್ಕಳು ತಮ್ಮ ತಂದೆತಾಯಿಯರ ಜೊತೆಗೆ ಬಳಸುವುದಕ್ಕಿಂತ ಜಾಸ್ತಿ ಕನ್ನಡವನ್ನು ಉಪಯೋಗಿಸುವುದು ತಮ್ಮ ಅಜ್ಜ ಅಜ್ಜಿಯರ ಜೊತೆ (ಅವರು ಕೆಲವೊಮ್ಮೆ ಕನ್ನಡ ಒಂದೇ ಬಲ್ಲವರಾಗಿರುತ್ತಾರೆ). ೮೫.೭ ಪ್ರತಿಶತ ಜನರು ಪರಿಸ್ಥಿತಿ ಇರುವುದು ಹೀಗೆ ಎಂದು ಹೇಳಿದರೆ, ಉಳಿದವರು ಅಂಥ ಯಾವ ವ್ಯತ್ಯಾಸವೂ ಇಲ್ಲ ಎಂದರು.

ಉಳಿದ ಪ್ರಶ್ನೆಗಳು, ಕನ್ನಡದ ಕಥೆಯೊಂದನ್ನು ಓದುವ ಮತ್ತು ಕನ್ನಡದಲ್ಲಿ ಪತ್ರವೊಂದನ್ನು ಬರೆಯುವ ವಿಷಯದಲ್ಲಿ ಮಕ್ಕಳ ಸಾಮರ್ಥ್ಯವನ್ನು ಕುರಿತವು. ಬಹುಸಂಖ್ಯೆಯ ಮಕ್ಕಳಲ್ಲಿ ಈ ಎರಡು ಕೌಶಲಗಳೂ ಇಲ್ಲ: ಆದರೂ ಬರೆಯುವುದಕ್ಕಿಂತ ಓದುವ ವಿಷಯದಲ್ಲಿ ಅವರು ಸ್ವಲ್ಪ ಪರವಾಯಿಲ್ಲ.

'ನಿಮ್ಮ ಮಕ್ಕಳು ಕನ್ನಡದ ಸಣ್ಣಕಥೆಯೊಂದನ್ನು ಓದಬಲ್ಲರೇ?'

ಹೌದು ೨೩.೮ ಪ್ರತಿಶತ          ಇಲ್ಲ ೬೬.೭ ಪ್ರತಿಶತ          ಸ್ವಲ್ಪ ೯.೫ ಪ್ರತಿಶತ

'ನಿಮ್ಮ ಮಕ್ಕಳು ಕನ್ನಡದಲ್ಲಿ ಚಿಕ್ಕ ಪತ್ರವೊಂದನ್ನು ಬರೆಯಬಲ್ಲರೇ?'

ಹೌದು ೧೪.೨೮ ಪ್ರತಿಶತ          ಇಲ್ಲ ೮೦.೯೬ ಪ್ರತಿಶತ          ಸ್ವಲ್ಪ ೪.೭೬ ಪ್ರತಿಶತ

**ಖ) ವಿವಿಧ ಮಾತುಗಾರರ ಜೊತೆ ಮಕ್ಕಳ ಕನ್ನಡ ಬಳಕೆ**

ವಲಸೆಗಾರರ ಸನ್ನಿವೇಶದಲ್ಲಿ, ಮಕ್ಕಳಿಗೆ ತಮ್ಮ ಹಿರಿಯರ ಭಾಷೆಯನ್ನು ಅರ್ಥ ಮಾಡಿಕೊಳ್ಳುವ ಜ್ಞಾನ ಬಹಳಷ್ಟು ಇರುತ್ತದೆಯಾದರೂ, ಸಕ್ರಿಯ ಸಂವಹನಕ್ಕೆ ಅವರು ಅವಲಂಬಿಸುವುದು ಮುಖ್ಯ ಪ್ರವಾಹದ ಭಾಷೆಯನ್ನೆ. ಇದು ಕನ್ನಡ ಮಕ್ಕಳ ವಿಷಯದಲ್ಲೂ ನಿಜವಿರುವಂತೆ ತೋರುತ್ತದೆ. ಮಕ್ಕಳ ಜೊತೆ ಕನ್ನಡದಲ್ಲಿ ಮಾತಾಡಿದಾಗ ಅವರು ಯಾವ ಭಾಷೆಯಲ್ಲಿ ಉತ್ತರಿಸುತ್ತಾರೆ ಎಂದು ಹಿರಿಯರನ್ನು ಕೇಳಿದಾಗ ದೊರೆತ ಪ್ರತಿಕ್ರಿಯೆ ಕೆಳಗಿನಂತಿದೆ:

'ನಿಮ್ಮ ಮಕ್ಕಳ ಜೊತೆ ನೀವು ಕನ್ನಡದಲ್ಲಿ ಮಾತಾಡಿದಾಗ ಅವರು ಉತ್ತರಿಸುವ ಭಾಷೆ'

| ಉತ್ತರಿಸುವ ಭಾಷೆ | ಮಗು ೧ (ಸಂ=೨೧) | ಮಗು ೨ (ಸಂ=೧೩) | ಮಗು ೩ (ಸಂ=೩) | ಮಗು ೪ (ಸಂ=೧) |
|---|---|---|---|---|
| ಇಂಗ್ಲೀಶ್ | ೫ | ೪ | - | - |
| ಕೆಲವು ಕನ್ನಡ ಪದಗಳನ್ನೊಳಗೊಂಡ ಇಂಗ್ಲೀಶ್ | ೬ | ೭ | ೩ | ೧ |
| ಕನ್ನಡ | ೧೦ | ೨ | - | - |

೩೮ ಮಕ್ಕಳಲ್ಲಿ ೨೬ರಷ್ಟು ಮಕ್ಕಳು (ಅಥವಾ ೬೮.೬ ಪ್ರತಿಶತ) ಕನ್ನಡದಲ್ಲಿ ಉತ್ತರಿಸುವುದಿಲ್ಲವೆಂಬ ವಿವರಣೆಯಿದೆಯೆಂಬುದನ್ನು ಗಮನಿಸಿ. ಅಲ್ಲದೇ, ಒಟ್ಟಾರೆ ಸ್ವರೂಪದಲ್ಲಿ ಆಡುಮಾತಿನಲ್ಲಿ ಇಂಗ್ಲೀಶಿಗೆ ಹೆಚ್ಚು ಪ್ರಾಶಸ್ತ್ಯವಾದರೂ, ಹಿರಿಯ ಮಕ್ಕಳಲ್ಲಿ ತಮ್ಮ ಕುಲದ ಭಾಷೆಯ ಮೇಲೆ ಹೆಚ್ಚು ಪ್ರಭುತ್ವವಿರುವುದನ್ನು ನಾವು ಪುನಃ ಗಮನಿಸಬಹುದು.

ಈ ಕುಟುಂಬಗಳು ಸರಾಸರಿ ೩ ವರ್ಷಕ್ಕೊಮ್ಮೆ ಕರ್ನಾಟಕಕ್ಕೆ ಭೇಟಿ ನೀಡುತ್ತವೆ. ಆಗ ಇವರ ಮಕ್ಕಳು, ತಮ್ಮ ಸಂಬಂಧಿಕರು ಮತ್ತು ಸ್ನೇಹಿತರೊಡನೆ ಇಂಗ್ಲಿಶ್ ಹಾಗೂ ಕನ್ನಡಗಳೆರಡನ್ನೂ ಬಳಸಿ ಮಾತಾಡುತ್ತಾರೆ. ಮೂರರಲ್ಲಿ ಒಂದು ಭಾಗದಷ್ಟು ಹಿರಿಯರು ಹೇಳುವಂತೆ ಅವರ ಮಕ್ಕಳು ಹೆಚ್ಚಿನ ಭಾಗ ಕನ್ನಡದಲ್ಲೇ ಮಾತನಾಡುತ್ತಾರೆ. ಇನ್ನು ೨೯ ಪ್ರತಿಶತ ಹಿರಿಯರ ಪ್ರಕಾರ, ಭಾರತೀಯ(ಕನ್ನಡ) ಮಕ್ಕಳು ಅವರ ಮಕ್ಕಳೊಂದಿಗೆ ಇಂಗ್ಲಿಶಿನಲ್ಲಿ ಮಾತನಾಡುತ್ತಾರೆ. ಕೇವಲ ೯.೫೨ ಪ್ರತಿಶತ ಹಿರಿಯರು ಮಾತ್ರ, ತಮ್ಮ ಮಕ್ಕಳು ಇಂಥ ಸಂದರ್ಭಗಳಲ್ಲಿ 'ಹೆಚ್ಚಾಗಿ ಇಂಗ್ಲಿಶಿನಲ್ಲೇ' ಮಾತಾಡುವುದಾಗಿ ತಿಳಿಸಿರುವುದು ಕುತೂಹಲಕರ ಸಂಗತಿ. (ಕೆಲವು ಹಿರಿಯರು ಒಂದಕ್ಕಿಂತ ಹೆಚ್ಚು ಉತ್ತರಗಳನ್ನು ಕೊಟ್ಟರು) ಒಟ್ಟಲ್ಲಿ ಕಾಣುವಂತೆ, ವಲಸೆಗಾರ ಮಕ್ಕಳು ತಮ್ಮ ಭಾಷೆಯನ್ನು ಪೂರ್ತಿಯಾಗಿ ಇಂಗ್ಲಿಶಿಗೆ ಬದಲಾಯಿಸಿಕೊಂಡಿಲ್ಲ.

ಯುವಪೀಳಿಗೆಯವರು ತಮ್ಮತಮ್ಮೊಳಗೇ ಬಳಸುವ ಕುಲದ ಭಾಷೆಯ ವ್ಯಾಪ್ತಿಯೇ, ನಿಜದಲ್ಲಿ, ಭಾಷೆಯ ಉಳಿಯುವಿಕೆಯ ಸೂಕ್ತ ಒರೆಗಲ್ಲು. ಈ ಪ್ರಶ್ನೆಗೆ ಹಿನ್ನೆಲೆಯಾಗಿ, ಹಿರಿಯರಲ್ಲಿ ಕೇಳಲಾದ ಪ್ರಶ್ನೆಯೆಂದರೆ, ಅವರ ಮಕ್ಕಳು ತಾವಾಗಿಯೇ ಇತರ ಕನ್ನಡಿಗ ಮಕ್ಕಳೊಂದಿಗೆ ಸೇರುತ್ತಾರೆಯೇ ಎಂಬುದು. ೮೬ ಪ್ರತಿಶತ ಹಿರಿಯರಂತೆ, (ಕನ್ನಡ ಮಕ್ಕಳೊಡನೆ) ಬೇರೆ ಮಕ್ಕಳ ಜೊತೆಗೆ ಬರೆಯುವುದಕ್ಕಿಂತ ಹೆಚ್ಚೇನೂ ಬೆರೆಯುವುದಿಲ್ಲ'; ೧೪ ಪ್ರತಿಶತ ಹಿರಿಯರು, ತಮ್ಮ ಮಕ್ಕಳು 'ಕನ್ನಡಿಗ ಮಕ್ಕಳ ಒಡನಾಟಕ್ಕೆ ಪ್ರಾಶಸ್ತ್ಯ ಕೊಡುತ್ತಾರೆ' ಎಂದರು. ಮಕ್ಕಳ ಸಾಮಾಜೀಕರಣದ ಸ್ವರೂಪಗಳು ಅವರ ಹಿರಿಯರ ಸಾಮಾಜೀಕರಣದ ಸ್ವರೂಪಗಳಿಗಿಂತ ಹೆಚ್ಚು ವಿಲೀನ ಗುಣವುಳ್ಳದ್ದೆಂಬುದು ಆಶ್ಚರ್ಯದ ಅಂಶವೇನಲ್ಲ. ಕನ್ನಡ ಮಕ್ಕಳು ಸೇರಿದಾಗ ಅವರು ಹೆಚ್ಚೂ ಕಡಿಮೆ ಯಾವಾಗಲೂ (೯೦.೪೮ ಪ್ರತಿಶತ) ಇಂಗ್ಲಿಶನ್ನೆ ಬಳಸುತ್ತಾರೆ ಹಾಗೂ ಕನ್ನಡವನ್ನು ಬಳಸುವುದು ಬಹು ವಿರಳ (೪.೭೬ ಪ್ರತಿಶತ). ಉತ್ತರಿಸಿದ ಹಿರಿಯರಲ್ಲಿ ಅರ್ಧಾಂಶದಷ್ಟು ಜನರು(೪೭.೬೨ ಪ್ರತಿಶತ) ಹೇಳುವಂತೆ ಅವರ ಮಕ್ಕಳು ತಮ್ಮತಮ್ಮೊಳಗೆ 'ಕೆಲವೊಮ್ಮೆ, ಕೇವಲ ಕೆಲವು ಶಬ್ದಗಳಷ್ಟು, ಕನ್ನಡವನ್ನು ಬಳಸುತ್ತಾರೆ. ಹಾಗಾಗಿ, ಯುವ ಪೀಳಿಗೆಯವರಿಗೆ, ಕನ್ನಡವು ಮುಖ್ಯವಾಗಿ ಹಿರಿಯ ತಲೆಮಾರಿನವರಿಂದ ಮಾಹಿತಿಯನ್ನು ಸ್ವೀಕರಿಸುವ ಪ್ರಮುಖ ಸಾಧನವಾಗಿಯೂ, ಇಂಗ್ಲಿಶು ತಮ್ಮ ತಮ್ಮೊಳಗಿನ ಸಕ್ರಿಯ ಸಂವಾದದ ಮೂಲಭೂತ ವಾಹಕವಾಗಿಯೂ, ಇರುವಂತೆ ಕಂಡು ಬರುತ್ತದೆ. ಹೇಗಿದ್ದರೂ, ಕನ್ನಡದಲ್ಲಿ ಮಾತಾಡಿಸಿದಾಗ ಅವರಲ್ಲಿ ಕೊನೆಯ ಪಕ್ಷ ಅಂಗೀಕಾರದ ಧೋರಣೆಯಂತೂ ಇದೆ. ತಮ್ಮ ಮಕ್ಕಳ ಜೊತೆ ಹಿರಿಯರು ಕನ್ನಡದಲ್ಲಿ ಮಾತಾಡಿದಾಗ,

ಮಕ್ಕಳಿಗೆ ಏನನ್ನಿಸುತ್ತದೆಯೆಂದು ಹಿರಿಯರನ್ನು ಕೇಳಿದಾಗ ಅವರ ಪ್ರತಿಕ್ರಿಯೆ ಹೀಗಿತ್ತು: ಅ) 'ಅವರು ಆ ಬಗ್ಗೆ ಚಿಂತಿಸುವುದಿಲ್ಲ' (೯೪.೭ ಪ್ರತಿಶತ), ಆ) 'ಅವರು ಅದನ್ನು ಇಷ್ಟಪಡುತ್ತಾರೆ' (೨೬.೩ ಪ್ರತಿಶತ), ಇ) ಇಂಗ್ಲಿಷಲ್ಲಿ ಮಾತಾಡುವಂತೆ ನಮ್ಮನ್ನು ಕೇಳುತ್ತಾರೆ' (೫.೨ ಪ್ರತಿಶತ).

ಒಟ್ಟಿನಲ್ಲಿ ಹೇಳುವುದಾದರೆ, ಮಕ್ಕಳಲ್ಲಿ ಮೂಲಭೂತವಾಗಿ ಗ್ರಹಣಶಕ್ತಿಯ ಮಟ್ಟದ ಕನ್ನಡ ಜ್ಞಾನವಿದ್ದು, ಅವರು ಆಡುಮಾತಿನ ಮಟ್ಟದಲ್ಲಿ ತುಂಬಾ ಸೀಮಿತವಾದ ಸಾಮರ್ಥ್ಯವನ್ನು ಪಡೆದುವರಾಗಿದ್ದಾರೆ. ಓದುವ ಮತ್ತು ಬರೆಯುವ ಶಕ್ತಿಯುಳ್ಳವರು ತೀರಾ ಕಡಿಮೆ. ಹಿರಿಯ ಮಕ್ಕಳು ತಮ್ಮ ಒಡಹುಟ್ಟಿದ ಕಿರಿಯರಿಗಿಂತ ಕನ್ನಡದಲ್ಲಿ ಹೆಚ್ಚು ಪ್ರಾವೀಣ್ಯ ಹೊಂದಿದ್ದಾರೆ; ಭಾರತದಲ್ಲಿ ತಮ್ಮ ಅಜ್ಜ ಅಜ್ಜಿಯರು ಹಾಗೂ ಸಂಬಂಧಿಕರೊಂದಿಗೆ ಮಕ್ಕಳು ಹೆಚ್ಚು ಕನ್ನಡವನ್ನು ಬಳಸುತ್ತಾರೆ; ಆದರೆ, ಮನೆಯ ಒಳಗು ಹೊರಗೂ ಇಂಗ್ಲಿಶೇ ಅವರಲ್ಲಿ ಅತ್ಯಂತ ಪ್ರಬಲ ಭಾಷೆ ಎನ್ನುವದಂತೂ ಸ್ಪಷ್ಟ.

**ಊ) ಕನ್ನಡವನ್ನು ಉಳಿಸಿಕೊಳ್ಳವಲ್ಲಿ ಹಿರಿಯರ ಧೋರಣೆ ಮತ್ತು ಪ್ರಯತ್ನ**

ತಮ್ಮ ಮನೆಗಳಲ್ಲಿ ಕನ್ನಡವನ್ನು ಉಳಿಸಿಕೊಳ್ಳಲು ಹಿರಿಯರು ವಿವಿಧ ಪ್ರಯತ್ನ ಮಾಡುತ್ತಾ ಇರುವಂತೆ, ಅಥವಾ ಈ ಹಿಂದೆ ಮಾಡಿರುವಂತೆ, ಕಂಡುಬರುತ್ತದೆ. ಪ್ರಶ್ನಾವಳಿಗೆ ಉತ್ತರಿಸಿದ ಮೂರರಲ್ಲಿ ಎರಡು ಭಾಗದಷ್ಟು ಜನ "(ತಾವು) ಕನ್ನಡ ಮಾತಾಡಲು ಅನುಕೂಲವಾಗಲೆಂದು (ತಮ್ಮ) ಮನೆಗಳಲ್ಲಿ ಕನ್ನಡ ಮಾತಾಡುವ ಸ್ನೇಹಿತರನ್ನು ಒಟ್ಟಿಗೆ ತರುವ ವಿಶೇಷ ಪ್ರಯತ್ನಗಳನ್ನು ಮಾಡುತ್ತೇವೆಂದು ತಿಳಿಸಿದರು". ಕೇವಲ ಇಬ್ಬರು (೧೦ ಪ್ರತಿಶತ) ನಕಾರಾತ್ಮಕವಾಗಿ ಉತ್ತರಿಸಿದರೆ, ಐವರು (೨೩ಪ್ರತಿಶತ) ತಾವು 'ಕೆಲವೊಮ್ಮೆ' ಹಾಗೆ ಮಾಡುವುದಾಗಿ ತಿಳಿಸಿದರು. ಈಗಾಗಲೇ ಹೇಳಿರುವಂತೆ, ಅವರಲ್ಲಿ ಬಹಳಷ್ಟು ಜನ ಅಮೇರಿಕನ್ನಡಕ್ಕೆ ಚಂದಾದಾರರಾಗಿದ್ದು, ಅದರಲ್ಲಿ ಮಕ್ಕಳಿಗಾಗಿ ಕನ್ನಡ ಪಾಠಗಳು ಬಿಡದೇ ಪ್ರಕಟವಾಗುತ್ತದೆ. ಅರ್ಧದಷ್ಟು ಜನ ಆಗಾಗ್ಗೆ ವಾರಾಂತ್ಯಗಳಲ್ಲಿ ಹಿಂದೂ ದೇವಾಲಯದಲ್ಲಿ ನಡೆದ ಅನೌಪಚಾರಿಕ ಕನ್ನಡ ತರಗತಿಗಳಿಗೆ ತಮ್ಮ ಮಕ್ಕಳನ್ನು ಸೇರಿಸಿದ್ದಾರೆ. ಈ ತರಗತಿಗಳ ಪರಿಣಾಮವಾಗಿ ಮಕ್ಕಳು ಏನನ್ನು ಕಲಿತರು ಎಂಬುದನ್ನು ವಿವರಿಸುತ್ತಾ, ೫ ಜನ ಹಿರಿಯರು ತಮ್ಮ ಮಕ್ಕಳು ಕೆಲವು ಪದಗಳನ್ನು ಬರೆಯಬಲ್ಲರು ಎಂದು ತಿಳಿಸಿದರೆ, ಕಂಠಪಾಠ ಮಾಡಿ ಕೆಲವು ಪದ್ಯಗಳನ್ನು ಹೇಳಬಲ್ಲರು ಎಂದು ಒಬ್ಬರು, ಕೆಲವು ಪದಗಳನ್ನು ಗುರುತಿಸಬಲ್ಲರು ಎಂದು ಒಬ್ಬರು, ತಿಳಿಸಿದರು. ಆದರೆ ಐವರು ಹಿರಿಯರು ಹೇಳಿಕೊಂಡಂತೆ, ಅವರ ಮಕ್ಕಳು ಈ ಎಲ್ಲವನ್ನೂ ಮಾಡಬಲ್ಲರಲ್ಲದೇ ಕೆಲವು ವಾಕ್ಯಗಳನ್ನು ಓದಲು ಪತ್ರಗಳನ್ನು ಬರೆಯಲೂ ಬಲ್ಲರು. ಈ ಸಾಮರ್ಥ್ಯಗಳನ್ನು ಎಷ್ಟರಮಟ್ಟಿಗೆ ಈ ತರಗತಿಗಳಿಗೆ (ಈ ತರಗತಿಗಳು, ತರಬೇತಿ ಪಡೆದಿಲ್ಲದ ಸ್ವಯಂಸೇವಕರು, ಕಂಠಪಾಠದ ಮೇಲೆ ಒತ್ತುಕೊಟ್ಟು ನಡೆಸಿದಂಥವುಗಳು) ಅಥವಾ ಎಷ್ಟರ ಮಟ್ಟಿಗೆ ಮನೆಯಲ್ಲಿ ಹಿರಿಯರು ತೋರಿದ ಉತ್ಸಾಹ ಹಾಗೂ ಪಟ್ಟ ಪ್ರಯತ್ನಗಳಿಗೆ, ಆರೋಪಿಸತಕ್ಕದ್ದೆಂಬುದು ಸ್ಪಷ್ಟವಿಲ್ಲ. ಏನಿದ್ದರೂ, ಕನ್ನಡದಲ್ಲಿ ಮಕ್ಕಳಿಗಿರುವ ಪ್ರಭುತ್ವ, ಒಟ್ಟಲ್ಲಿ, ಯಾವುದೇ ಅರ್ಥಪೂರ್ಣ ರೀತಿಯಲ್ಲಿ ಉಪಯುಕ್ತವಾಗಲಾರದಷ್ಟು

ದುರ್ಬಲವಾಗಿದೆಯೆಂಬುದು ಅವಲೋಕನಗಳಿಂದ ಸೂಚಿತವಾಗುತ್ತದೆ.

ತಮ್ಮ ಮನೆಗಳಲ್ಲಿ ಕನ್ನಡವನ್ನು ಉಳಿಸಿಕೊಳ್ಳಲು, ಪ್ರಶ್ನಾವಳಿಯಲ್ಲಿ ಸೂಚಿಸಲ್ಪಟ್ಟ ವಿವಿಧ ರೀತಿಯ ಪ್ರಯತ್ನಗಳಲ್ಲಿ ಯಾವುದನ್ನು ಹಿರಿಯರು ಮಾಡಿದ್ದರು ಎಂಬುದನ್ನು ಸೂಚಿಸುವಂತೆಯೂ ಅವರನ್ನು ಕೇಳಲಾಯಿತು. ಉತ್ತರಗಳು ಕೆಳಗಿನಂತಿವೆ.

'ನೀವು ಈಗ, ಅಥವಾ ಯಾವಾಗಲಾದರೂ, ಈ ಕೆಳಗಿನ ಯಾವುದಾದರೂ ಮಾರ್ಗಗಳ ಮೂಲಕ ನಿಮ್ಮ ಮನೆಯಲ್ಲಿ ಕನ್ನಡವನ್ನು ಉಳಿಸಿಕೊಳ್ಳುವ ಪ್ರಯತ್ನಗಳನ್ನು ಮಾಡಿದ್ದೀರಾ?'

| | |
|---|---|
| ಮನೆಯಲ್ಲಿ ಮಕ್ಕಳು ಮತ್ತು ಗಂಡನ/ಹೆಂಡತಿಯ ಜೊತೆ ಕನ್ನಡ ಮಾತ್ರ ಬಳಸಿ | ೧೪ |
| ನಿಮ್ಮ ಮಕ್ಕಳು ಮನೆಯಲ್ಲಿ ಕನ್ನಡ ಮಾತ್ರ ಬಳಸುವಂತೆ ಒತ್ತಾಯಿಸಿ | ೪ |
| ಮಲಗುವಾಗ ಕನ್ನಡದಲ್ಲಿ ಕಥೆಗಳನ್ನು ಹೇಳಿ/ಓದಿ | ೫ |
| ಮಕ್ಕಳಿಗೆ ಕನ್ನಡ ಓದಲು ಕಲಿಸಿ | ೬ |
| ಮಕ್ಕಳಿಗೆ ಕನ್ನಡ ಬರೆಯಲು ಕಲಿಸಿ | ೫ |
| ಬೇರೆ ರೀತಿಗಳಲ್ಲಿ (ಸ್ಪಷ್ಟಪಡಿಸಿರಿ............) | ೩ |

ತಮ್ಮ ಗಂಡ/ಹೆಂಡತಿ ಮತ್ತು ಮಕ್ಕಳ ಜೊತೆಗೆ ಮನೆಯಲ್ಲಿ ಕೇವಲ ಕನ್ನಡವನ್ನು ಮಾತ್ರ ಬಳಸುವುದೇ ಭಾಷೆ ಉಳಿಸುವಿಕೆಯ ಪ್ರಯತ್ನಕ್ಕೆ ಹಿರಿಯರು ಕೈಗೊಂಡಿರುವ ಪ್ರಮುಖ ಮಾರ್ಗ. ಪ್ರಶ್ನಾವಳಿಗೆ ಉತ್ತರಿಸಿದ ಮೂರರಲ್ಲಿ ಎರಡು ಭಾಗ ಜನರಷ್ಟೂ ಈ ರೂಢಿಯನ್ನು ಕುರಿತು ಹೇಳಿದ್ದಾರೆ. ಮೂರರಲ್ಲಿ ಒಂದು ಭಾಗ ಹಿರಿಯರು ತಮ್ಮ ಮಕ್ಕಳಿಗೆ ಓದಲು ಮತ್ತು ಬರೆಯಲು ಹೇಳಿಕೊಡುವ ಪ್ರಯತ್ನ ಕೂಡಾ ಮಾಡುವಂತೆ ಕಂಡು ಬರುತ್ತದೆ. ಅದರೂ, ಬಹಳಷ್ಟು ಜನ ಹಿರಿಯರು ತಿಳಿಸಿದಂತೆ, ಅವರ ಇಂಥ ಪ್ರಯತ್ನಗಳು ಅಯಶಸ್ವಿಯಾಗಿ ಕೊನೆಗೊಂಡದ್ದೇ ಅಲ್ಲದೆ, ಮೊದಮೊದಲು ಪ್ರಾಮಾಣಿಕವಾದ ಪ್ರಯತ್ನಪಟ್ಟ ನಂತರ ಹೆಚ್ಚು ಹೆಚ್ಚಾಗಿ ಅವರೇ ಇಂಗ್ಲಿಶನ್ನು ಬಳಸುವ ಸ್ಥಿತಿ ಉಂಟಾಗುತ್ತಿತ್ತು.

ಅಮೆರಿಕಾದಲ್ಲಿ ಕನ್ನಡದ ಭವಿಷ್ಯದ ಬಗ್ಗೆ ಅವರ ಅಭಿಪ್ರಾಯಗಳನ್ನು ಕೇಳಿದಾಗ, ಎಲ್ಲರೂ ಜನರ ಪುಟ್ಟ ಗುಂಪೊಂದು ಅದನ್ನು ಉಳಿಸಿಕೊಳ್ಳುತ್ತದೆ, ಎಂಬ ಏಕರೂಪೀ ಪ್ರತಿಕ್ರಿಯೆಯನ್ನು ಆಯ್ದರು. ಕುತೂಹಲಕರವೆಂದರೆ, 'ಮುಂದಿನ ತಲೆಮಾರಲ್ಲಿ ಅದು ಕಾಣೆಯಾಗುತ್ತದೆ, ಎಂಬ ಉತ್ತರವನ್ನು ಯಾರೂ ಆಯಲಿಲ್ಲ. ಪ್ರಸಕ್ತ ತಲೆಮಾರಿನ ನಂತರ ಕನ್ನಡ ಉಳಿಯದೇ ಇರುವ ಸಾಧ್ಯತೆಯ ಬಗ್ಗೆ ಇನ್ನೊಂದು ಪ್ರಶ್ನೆಯ ಮುಖಾಂತರ ಕೆದಕಿ ಕೇಳಿದಾಗ, ಆ ಊಹೆಯೊಂದಿಗೆ ಒಮ್ಮತ ವ್ಯಕ್ತಪಡಿಸಿದವರು ಅತ್ಯಲ್ಪ ಜನ. ಮೂರರಲ್ಲಿ ಎರಡು ಭಾಗದಷ್ಟು ಜನರು, ನಮ್ಮ ಸಂಸ್ಕೃತಿಯೊಂದಿಗಿನ ಸಜೀವ ಕೊಂಡಿಯಾಗಿ ಕನ್ನಡವನ್ನು ಉಳಿಸಿಕೊಳ್ಳಬೇಕು ಹಾಗೂ ಪೋಷಿಸಬೇಕು, ಎಂದದ್ದಷ್ಟೇ ಅಲ್ಲದೇ ಅದನ್ನು ಉಳಿಸಲು ಹಾಗೂ ಉತ್ತೇಜಿಸಲು ಸಕ್ರಿಯವಾಗಿ ಸಂಘಟಿತ ಪ್ರಯತ್ನವೊಂದನ್ನು ಮಾಡುವ ಇಚ್ಛೆಯನ್ನೂ ವ್ಯಕ್ತಪಡಿಸಿದರು. ಮೂರರಲ್ಲಿ ಒಂದು ಭಾಗಕ್ಕಿಂತ ಹೆಚ್ಚು ಜನರು (೯), ನಮ್ಮ ಮಕ್ಕಳು ಈ ಭಾಷೆಯನ್ನು

ಕಲಿತು ತಮ್ಮ ತಮ್ಮೊಳಗೆ ಹಾಗೂ ಭಾರತಕ್ಕೆ ಭೇಟಿಕೊಟ್ಟಾಗ ಅದನ್ನು ಉಪಯೋಗಿಸಲಿ ಎಂದೂ ಆಶಿಸಿದರು. ಪರಿಸ್ಥಿತಿ ಶೋಚನೀಯವಾಗಿದೆ, ಆದರೆ ಯಾರೇನು ಮಾಡಲು ಸಾಧ್ಯ ಹೇಳಿ? ಎಂಬ ಎಲ್ಲವೂ ದೈವನಿಶ್ಚಿತವೆಂಬ ವಾದದ ಜೊತೆಗಾಗಲೀ, ಈ ದೇಶದಲ್ಲಿ ಕನ್ನಡ ಯಾವ ವ್ಯಾವಹಾರಿಕ ಉಪಯೋಗಕ್ಕೂ ಬರುವುದಿಲ್ಲ, ಆದ್ದರಿಂದ ನಮ್ಮ ಮಕ್ಕಳು ಹೆಚ್ಚು ಉಪಯೋಗಕ್ಕೆ ಬರುವಂಥ ಭಾಷೆ ಮತ್ತು ಕೌಶಲಗಳನ್ನು ಕಲಿಯುವುದೇ ಒಳ್ಳೆಯದು, ಎಂಬ ಒಡ್ಡು ಪ್ರಾಪಂಚಿಕತೆಯಲ್ಲಾಗಲೀ ಸಹಮತವನ್ನು ಯಾರೂ ತೋರಲಿಲ್ಲ. ತಮ್ಮ ಕುಲದ ಬಗೆಗಿನ ಹೆಮ್ಮೆ ಹಾಗೂ ಭಾಷೆಯ ಉಳಿಯುವಿಕೆಯಲ್ಲಿ ಬದ್ಧತೆಗಳನ್ನು ಅವರು ಸ್ವಲ್ಪಮಟ್ಟಿಗೆ ಹೊಂದಿದ್ದಾರೆಯೆಂಬುದಕ್ಕೆ ಈ ಅಭಿಮತಗಳು ಪುರಾವೆ. ತಮ್ಮ ಗುಂಪಿನ ಒಳಗಿನ ಭಾಷಾ ಬಳಕೆಯ ನಿಜಸ್ವರೂಪದಿಂದಾಗಲೀ ಅಮೆರಿಕಾದಲ್ಲಿ ವಲಸೆ ಬಂದಿರುವವರ ಭಾಷೆಗಳ-ವಿಶೇಷವಾಗಿ, ಅತ್ಯಂತ ಚಿಕ್ಕ ಗುಂಪುಗಳವರ ಭಾಷೆಗಳ-ಇತಿಹಾಸದಿಂದಾಗಲೀ ಪ್ರಚೋದಿತವಲ್ಲದ ಅವರ ಈ ಭಾಷೆಯ ಭವಿಷ್ಯದ ಬಗೆಗಿನ ಆಶಾವಾದ, ಅವರ ಕುಲದ ಬಗ್ಗೆ ಹೆಮ್ಮೆ ಮತ್ತು ಅದರ ಅಭಿವೃದ್ಧಿಗೆ ಬದ್ಧತೆಗಳ ಪ್ರತೀಕ.

### ೬. ಹೋಲಿಕೆಗಳು

ಫಿಶ್‌ಮನ್ (೧೯೬೬)ಗಮನಿಸಿರುವಂತೆ, ಭಾಷೆಯ ಉಳಿಯುವಿಕೆ ಮತ್ತು ಕದಲುವಿಕೆಯ ಮೇಲೆ ಪ್ರಭಾವ ಬೀರುವ ವ್ಯತ್ಯಾಸ-ಸಾಧ್ಯತೆಗಳನ್ನು ಗುರುತಿಸಲು ಪ್ರಮುಖವಾದದ್ದು ತುಲನಾತ್ಮಕ ಕ್ರಮ. ದುರದೃಷ್ಟಕರ ಅಂಶವೆಂದರೆ, ಭಾರತದ ಒಳಗೆ ಅಥವಾ ಹೊರಗೆ ಭಾರತೀಯ ಭಾಷೆಗಳ ಉಳಿಯುವಿಕೆಯ ಬಗೆಗಿನ ಸಂಶೋಧನೆಯ ಪ್ರಸ್ತುತ ಪರಿಸ್ಥಿತಿ ಯಾವುದೇ ಕ್ರಮಬದ್ಧವಾದ ತುಲನೆಗೆ ಅವಕಾಶ ಮಾಡಿಕೊಡಬಲ್ಲಂತೆ ಇಲ್ಲ. ಕೇವಲ ಅನಿಸಿಕೆಗಳ ಆಧಾರದ ಮೇಲೆ ಕುತೂಹಲಕರವಾದ ಹಲವು ವಾದಗಳನ್ನು ಮುಂದಿಡಲಾಗಿದೆ ಯಾದರೂ, ಸಮೀಕ್ಷಾತ್ಮಕವಾಗಿ ನಡೆದಿರುವ ಅಧ್ಯಯನಗಳು ಬೆರಳೆಣಿಕೆಗೆ ಸಿಗಬಹುದಾದ್ದ ಕ್ಕಿಂತಲೂ ಕಡಿಮೆ.

ಇವುಗಳಲ್ಲಿ ಅತ್ಯಂತ ಮುಖ್ಯವಾದ ಒಂದು ವಾದವೆಂದರೆ, ಭಾರತದಲ್ಲಿ ದ್ವಿಭಾಷಿಕತೆಯ ವಿಶಿಷ್ಟ ಲಕ್ಷಣ ಅದರ ಸ್ಥಿರತೆ ಎಂಬುದು; ಅಂದರೆ, ಈ ವಾದದಂತೆ ಭಾರತೀಯ ಭಾಷೆಗಳನ್ನಾಡುವವರು, ಅವರ ಭಾಷೆಗಳು ಪ್ರಭಾವಶಾಲಿಯಾಗಿರುವ ಪ್ರದೇಶಗಳಿಂದ ದೂರದಲ್ಲಿ ವಾಸಿಸುತ್ತಿದ್ದಾಗಲೂ ತಮ್ಮ ಭಾಷೆಗಳನ್ನು ಉಳಿಸಿಕೊಳ್ಳುವ ಒಲವನ್ನು ತೋರುತ್ತಾರೆ. ಈ ಅತಿಶಯಕ್ಕೆ ಹಲವಾರು ಕಾರಣಗಳನ್ನು ಮುಂದೊಡ್ಡಲಾಗಿದೆ. ಅವುಗಳಲ್ಲಿ ಎರಡು ಬಹು ಮುಖ್ಯವಾದವುಗಳು; ಅ) ಭಾರತೀಯ ಸಮಾಜದ, ಸಹಿಷ್ಣುತೆ ಹಾಗೂ ಅನೇಕತಾವಾದಿ ದೃಷ್ಟಿಕೋನ, ಆ) 'ಮನೆಯ ಜೀವನದಲ್ಲಿ ಕುಲದ ಪ್ರತ್ಯೇಕತೆ'ಯನ್ನು ಉಳಿಸಿಕೊಳ್ಳುವಿಕೆ. ಮುಖ್ಯ ಪ್ರಶ್ನೆಯೆಂದರೆ, ಸೌತ್ ವರ್ತ್ ಮತ್ತು ಆಪ್ಟೆ(೧೯೭೪) ಸೂಕ್ತವಾಗಿಯೇ ಗುರುತಿಸುವಂತೆ, ಯಾಕೆ 'ಕುಲದ ಪ್ರತ್ಯೇಕತೆ' ಪ್ರಪಂಚದ ಬೇರೆ ಭಾಗಗಳಿಗೆ ಹೋಲಿಸಿದಾಗ ದಕ್ಷಿಣ

ವಿಷ್ಯಾದಲ್ಲೇ ಅಷ್ಟು ದೃಢವಾಗಿದೆ, ಎಂಬುದು. ಅವರು ಗುರುತಿಸುವಂತೆ, ಭಾಷಾ ಪ್ರತ್ಯೇಕತೆಯನ್ನು ಉಳಿಸಿಕೊಂಡಿರುವ ಗುಂಪುಗಳು, ಹೆಚ್ಚಾಗಿ 'ಪ್ರತ್ಯೇಕವಾಗಿರಲು ವಿಶಿಷ್ಟ ಕಾರಣಗಳಿರುವಂಥ ಪುಟ್ಟ ಗುಂಪುಗಳು', ಆ ಕಾರಣಗಳೆಂದರೆ ಘನತೆ (ಉದಾ: ಬ್ರಾಹ್ಮಣರು) ವಿಶಿಷ್ಟ ಔದ್ಯೋಗಿಕ ಗುರುತು (ಉದಾ: ಚಿನಿವಾರರು, ರೇಶ್ಮೆ ನೇಕಾರರು), ಅಥವಾ ಬಲಾತ್ಕರವಾಗಿ ಹೇರಿದ ಪ್ರತ್ಯೇಕತೆ (ಉದಾ: ಸಾಂಪ್ರದಾಯಿಕ ಅಸ್ಪೃಶ್ಯರ ಸಂದರ್ಭದಲ್ಲಿ).

ನ್ಯೂಯಾರ್ಕ್ ಪ್ರದೇಶದ ಕನ್ನಡಿಗರು 'ಮನೆಯ ಜೀವನದಲ್ಲಿ ಕುಲದ ಪ್ರತ್ಯೇಕತೆ'ಯನ್ನು ಉಳಿಸಿಕೊಳ್ಳುತ್ತಾರೆಯೇ ಎಂಬುದನ್ನು ಈಗ ನೋಡೋಣ. ಈ ಮೊದಲೇ ಗುರುತಿಸಿರುವಂತೆ, ಸಾಮಾಜೀಕರಣ ಹಾಗೂ ವಿಹಾರದಂಥ ಸಮದರ್ಭಗಳಲ್ಲಿ, ಕನ್ನಡಿಗರು ಪ್ರಥಮವಾಗಿ ಒಡನಾಡುವುದು ಸಹ-ಕನ್ನಡಿಗರ ಜೊತೆಗೆ ತರುವಾಯದಲ್ಲಿ ಇತರ ಭಾರತೀಯರ ಜೊತೆಗೆ. ಅವರ ಆಹಾರಾಭ್ಯಾಸಗಳು ಪ್ರಧಾನವಾಗಿ ಭಾರತೀಯ. ಅವರ ಮುಖ್ಯ ಸಾಂಸ್ಕೃತಿಕ ಸಂಬಂಧಗಳಿರುವುದು ಕನ್ನಡಿಗರ ಗುಂಪುಗಳ ಜೊತೆ. ಅವರು ಪರಸ್ಪರರ ಜೊತೆಗೆ ಮಾತ್ರವಲ್ಲದೇ ಊರಲ್ಲಿರುವ ಸ್ನೇಹಿತರು ಹಾಗೂ ಕುಟುಂಬಗಳ ಜೊತೆಗೂ ನಿಕಟ ಸಂಪರ್ಕಗಳನ್ನಿಟ್ಟುಕೊಂಡಿರುತ್ತಾರೆ. ಈ ಲಕ್ಷಣಗಳು, ಬೆರೆಯುವಿಕೆಯ ಸಾಕಷ್ಟು ಕಡಿಮೆ ಮಟ್ಟವನ್ನು ಸೂಚಿಸುವಂತೆಯೇ, ಭಾರತದಲ್ಲಿ ಕುಲದ ದೃಷ್ಟಿಯಿಂದ ಪ್ರತ್ಯೇಕವಾಗಿ ಉಳಿಯುವ ಸಣ್ಣ ಕೋಮುಗಳಲ್ಲಿ ಕಂಡುಬರದ ಹಲವು ಗುಣಗಳನ್ನೂ ಈ ಗುಂಪು ಪ್ರದರ್ಶಿಸುತ್ತದೆ. ಆ ಗುಣಗಳಲ್ಲಿ ಒಂದು, ಮನೆಯಿಂದ ಹೊರಗೆ, ವಿಶೇಷವಾಗಿ ಹೆಂಗಸರಿಗೆ, ಉದ್ಯೋಗವಿರುವುದು. ಉಳಿದ ಗುಣಗಳೆಂದರೆ, ಉನ್ನತ ಮಟ್ಟದ ಶಿಕ್ಷಣ, ಅತಿ ಹೆಚ್ಚು ಮೌಲ್ಯವಿರುವ ಉದ್ಯೋಗಗಳಿಗೆ ಸೇರುವ ಅವಕಾಶಗಳು, ಮೇಲ್ಮುಖ ಚಲನೆಯಲ್ಲಿ ಪ್ರಬಲ ಪ್ರೇರಣೆ (ವಲಸೆಗಾರರಾಗಿರುವ ಅಂಶವೇ ಇದನ್ನು ಸ್ಪಷ್ಟಪಡಿಸುತ್ತದೆ), ವಾಸದ ಸ್ಥಳಗಳಲ್ಲಿ ಗುಂಪುಗುಂಪಾಗಿ ವಾಸಿಸದಿರುವುದು, ಮತ್ತು ಅವರ ಬಾಷೆ ಮತ್ತು ಜಾತಿಧರ್ಮಗಳ ನಡುವೆ ಇರುವ ಸಂಬಂಧ ದುರ್ಬಲವಾಗಿರುವುದು.

ಕುಲದ ಪ್ರತ್ಯೇಕತೆಯನ್ನು ಶಿಥಿಲಗೊಳಿಸುವ ಪ್ರಮುಖ ಅಂಶಗಳೆಂದರೆ, ಬೇರೆಬೇರೆ ಗುಂಪುಗಳ ನಡುವಿನ, ಮಾತುಕತೆಗಳಲ್ಲಿ, ಮನೆಯಲ್ಲೂ ಕೂಡಾ, ಮುಖ್ಯ ಪ್ರವಾಹದ ಭಾಷೆಯನ್ನು ವ್ಯಾಪಕವಾಗಿ ಉಪಯೋಗಿಸುವುದು, ಮತ್ತು ಭಾಷೆಯ ಉಳಿಯುವಿಕೆಗೆ ಅನುಕೂಲವಾದ ಭಾಷೆಯ ಉಪಯೋಗದ ಅಭ್ಯಾಸಗಳನ್ನು, ಅದರಲ್ಲೂ ಮಕ್ಕಳ ಜೊತೆಗೆ, ಅರೆಮನಸ್ಸಿನಿಂದ ಬಳಸುವುದು. ಅದ್ದರಿಂದ ನ್ಯೂಯಾರ್ಕ್‌ನಲ್ಲಿರುವ ಕನ್ನಡಿಗರು ಮನೆಯ ಜೀವನದಲ್ಲಿ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುವುದು ಕೇವಲ ಒಂದು ಸೀಮಿತ ಮಟ್ಟದಲ್ಲಿ ಮಾತ್ರ. ಅತಿಥೇಯ ಸಮಾಜದಲ್ಲಿನ ಅವರ ಪಾತ್ರದ ಬಗೆಗಿನ ಅವರ ತಿಳುವಳಿಕೆ ಹಾಗೂ ಅವರ ಪಾತ್ರದ ವಾಸ್ತವಗಳು, ಅವರ ನಡುವಿನ ಭಾಷಾ ಬಳಕೆಯ ಸ್ವರೂಪಗಳ ಅವಿಭಾಜ್ಯ ಅಂಗಗಳು. ತಮ್ಮ ಮಕ್ಕಳ ಇಂಗ್ಲಿಶ್ ಬಳಕೆಯ ಬಗ್ಗೆ ಹಿರಿಯ ಕನ್ನಡಿಗರು ತೋರುವ ವಿನಾಯತಿ ಹಾಗೂ ಧಾರಾಳತನಗಳು, ಅವರ ಕೋಮಿನ ಸಾಮಾಜಿಕ-ಮನಶ್ಶಾಸ್ತ್ರೀಯ ರಚನೆಯ ಜೊತೆಗೆ ಸಂಬಂಧವನ್ನು ಹೊಂದಿದೆ. ಮೊದಲನೆಯದಾಗಿ, ಕನ್ನಡಿಗರ ಕೋಮು ತನ್ನನ್ನು ತಾನು,

ಸಾಮಾಜಿಕ-ಆರ್ಥಿಕ ಶ್ರೇಣಿಯಲ್ಲಿ ಮೇಲ್ಮುಖ ಚಲನೆಗೆ ಸ್ಪಷ್ಟವಾದ ಸಾಧ್ಯತೆಗಳಿರುವ ಒಂದು ಯಶಸ್ವಿ ಆರ್ಥಿಕ ಗುಂಪೆಂದು ತಿಳಿದುಕೊಂಡಿದೆ. ಜೀವನದಲ್ಲಿ ಅವರ ಯಶಸ್ಸು ಹಾಗೂ ಈ ದೇಶಕ್ಕೆ ವಲಸೆ ಬರಲು ಅವರಿಗೆ ಸಾಧ್ಯವಾದದ್ದು ಇಂಗ್ಲೀಶಿನಲ್ಲಿ ಅವರಿಗಿರುವ ಪ್ರಾವೀಣ್ಯದಿಂದ ಎಂಬ ಕಾರಣದಿಂದಾಗಿ. ಆ ಕೌಶಲವನ್ನು ಅವರು ಈ ಅತಿಥೇಯ ದೇಶದಲ್ಲಿನ ಯಶಸ್ಸಿನ ಕೀಲಿಕೈ ಎಂದು ತಿಳಿಯುತ್ತಾರೆ. ಅಲ್ಲದೇ, ಅಮೆರಿಕಾದಲ್ಲಿರುವ ಭಾರತೀಯರು, ಬ್ರಿಟನ್ ಅಥವಾ ಟ್ರಿನಿಡಾಡ್‌ನಲ್ಲಿಯ ಅವರ ಸಹವರ್ತಿಗಳು ಅತಿಥೇಯ ಸಮಾಜದಿಂದ ಅನುಭವಿಸುವ ತಾರತಮ್ಯ ಭಾವವನ್ನು ಅಷ್ಟೇನೂ ಅನುಭವಿಸುವುದಿಲ್ಲ. (ಅಂದರೆ ತಾರತಮ್ಯದ ಯಾವುದೇ ಸಂದರ್ಭಗಳೂ ಇಲ್ಲವೆಂಬುದು ಇದರ ಅರ್ಥವಲ್ಲ) ತಮ್ಮ ಉತ್ಕೃಷ್ಟ ಔದ್ಯೋಗಿಕ ಕೌಶಲಗಳ ಕಾರಣದಿಂದಾಗಿ ಅತಿಥೇಯ ಸಮಾಜದಲ್ಲಿ ತಮಗೆ ಸ್ವಾಗತವಿದೆಯೆಂದು ಅವರು ಭಾವಿಸುತ್ತಾರೆ. ಮೇಲ್ಮುಖ ಚಲನೆಯ ಸಾಧ್ಯತೆಯ ಬಗೆಗಿನ ಈ ತಿಳಿವು, ಇಂಗ್ಲೀಶಿನ ಸ್ವೀಕೃತಿ ಮತ್ತು ಉತ್ತೇಜನಕ್ಕೆ ಸ್ಪಷ್ಟವಾಗಿ ಪೋಷಕವಾಗಿರುವ ಅಂಶವಾಗಿದೆ.

ಹಲವಾರು ಶತಮಾನಗಳ ಕಾಲ ಮೂಲಭೂತವಾಗಿ ಬದಲಾವಣೆಯನ್ನು ಹೊಂದದೇ ಉಳಿದು ಬಂದ ಅತಿಶ್ರೇಣೀಕೃತ ಸಮಾಜದ ವ್ಯವಸ್ಥೆಯ ಫಲವಾಗಿ ಸಾಂಪ್ರದಾಯಿಕ ಭಾರತೀಯ ದ್ವಿಭಾಷಿಕತೆಯು ತನ್ನ ಸ್ಥಿರತೆನ್ನು ಕಾಪಾಡಿಕೊಂಡಿರಬೇಕು. ಆದರೆ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಬಹುಪ್ರಮಾಣದಲ್ಲಿ ಆಗುತ್ತಿರುವ ಸಾಮಾಜಿಕ ಬದಲಾವಣೆಗಳ ಪ್ರಬಲತೆಯಿಂದಾಗ, ಪಾಶ್ಚಾತ್ಯ ಸಮಾಜಗಳಲ್ಲಿ ಕಾಣಬಹುದಾದ ರೀತಿಯ ಭಾಷೆಯ ಸ್ವೀಕಾರ ಹಾಗೂ ಧಾರಣಗಳ ಸ್ವರೂಪಗಳನ್ನು ನಾವು ಇಲ್ಲಿ ಕಾಣಬಹುದು. ನಗರ ಪ್ರದೇಶಗಳಲ್ಲಿನ ಭಾಷಾ ಬಳಕೆಯ ಬಗೆಗಿನ ಇತ್ತೀಚಿನ ಅಧ್ಯಯನಗಳು, ಭಾಷೆಯ ಕದಲುವಿಕೆಯ ಕಡೆಗೆ ಒಲವು ಇದೆ ಎಂಬುದನ್ನೇ ಸೂಚಿಸುವಂತಿವೆ. ಪ್ರಸ್ತುತ ಅಧ್ಯಯನದ ಕೇಂದ್ರ ಕಾಳಜಿಗೆ ವಿಶೇಷವಾಗಿ ಸಂಗತವಾಗಿರುವುದು ದೆಹಲಿಯ ಕನ್ನಡಿಗರಲ್ಲಿ ಭಾಷೆಯ ಉಳಿಯುವಿಕೆ ಮತ್ತು ಕದಲುವಿಕೆಯನ್ನು ಕುರಿತ ಸತ್ಯನಾಥ್‌ರವರ (೧೯೮೨) ಅಧ್ಯಯನ. ನ್ಯೂಯಾರ್ಕಿನ ಕನ್ನಡಿಗರಂತೆ ದೆಹಲಿಯ ಕನ್ನಡಿಗರೂ, ಮೊದಲ ತಲೆಮಾರಿನ ವಲಸೆಗಾರರು, ತುಂಬ ವಿದ್ಯಾವಂತರು, ಮಧ್ಯಮ ವರ್ಗದವರು, ಮತ್ತು ಬಿಳಿ ಕಾಲರಿನ ಕೆಲಸಗಳಲ್ಲಿರುವವರು. ಭಾಷಾ ಬಳಕೆ, ಸಾಮಾಜೀಕರಣದ ಸ್ವರೂಪಗಳು, ಮತ್ತು ಭಾಷಾ ಹಾಗೂ ಸಾಂಸ್ಕೃತಿಕ ಧೋರಣೆಗಳ ಕುರಿತು ೨೦ ಜನ ಕೊಟ್ಟ ಮಾಹಿತಿಯ ಮೇಲೆ ನಡೆಸಿದ ಸಾಮಾಜಿಕ-ಭಾಷಾಶಾಸ್ತ್ರೀಯ ಪರಿಶೀಲನೆಯ ಆಧಾರದ ಮೇಲೆ ದೆಹಲಿಯಲ್ಲಿ ಸತ್ಯನಾಥ್ ಕಂಡದ್ದು ಇದು:

> ಸ್ಥೂಲವಾಗಿ ಹೇಳುವುದಾದರೆ, ಕನ್ನಡವು ಅವರವರೊಳಗಿನ ಸಂವಾದದ ಭಾಷೆ; ಸಾಂಸ್ಥಿಕವಲ್ಲದ ಗುಂಪುಗಳ ನಡುವೆ ಹಿಂದಿ ಪ್ರಬಲವಾದ ಭಾಷೆ, ಮತ್ತು ಸಾಂಸ್ಥಿಕ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಬಳಕೆಯಾಗುವ ಭಾಷೆಯೆಂದರೆ ಇಂಗ್ಲಿಶು. ಕೆಲವು ಕನ್ನಡಿಗರು ಇತರ ಕನ್ನಡಿಗರ ಜೊತೆ ಮನೆಯಲ್ಲೂ ಕೂಡಾ ಹಿಂದಿ ಮತ್ತು ಇಂಗ್ಲಿಶನ್ನು ಬಳಸುತ್ತಾರೆಯೆಂಬುದು ಕುತೂಹಲಕರ ಅಂಶ.

ಮನೆಯಲ್ಲೂ ಕೂಡಾ ಇಂಗ್ಲಿಶಿನ ಬಳಕೆಯು ಕನ್ನಡದ ಬಳಕೆಗೆ ಹತ್ತಿರಹತ್ತಿರ ಬರುವಷ್ಟಿದೆಯೆಂದೂ, ಯುವ ಪೀಳಿಗೆಯವರ ಮಟ್ಟಿಗೆ ಎಲ್ಲ ಕ್ಷೇತ್ರಗಳಲ್ಲೂ ಕನ್ನಡದ ಬಳಕೆ ಕಡಿಮೆಯಾಗುತ್ತ ಬರುತ್ತಿದೆಯೆಂದೂ, ಅವರು ಮುಂದೆ ತಿಳಿಸುತ್ತಾರೆ. ಅವರು ತೀರ್ಮಾನಿಸುವ ಪ್ರಕಾರ, ಈ ಪರಿಣಾಮಗಳು ಭಾಷೆಯ ಉಳಿಯುವಿಕೆಯ ಬದಲು ಭಾಷೆಯ ಕದಲುವಿಕೆಯ ಪ್ರಕ್ರಿಯೆಯ ಸೂಚನೆಗಳು. ದೆಹಲಿಯಲ್ಲಿರುವ ಪಂಜಾಬಿಗಳಲ್ಲಿ, ಪ್ರಬಲ ಸ್ಥಳೀಯ ಭಾಷೆಯ ಕಡೆಗೆ, ಇಂಥದೇ ಸ್ವರೂಪದ ಪ್ರಾರಂಭಿಕ ಕದಲುವಿಕೆ ಇರುವುದಾಗಿ ಮುಖರ್ಜಿ(೧೯೮೦) ತಿಳಿಸುತ್ತಾರೆ; ಆದರೆ ಮುಖರ್ಜಿಯವರೇ ಅಧ್ಯಯನ ಮಾಡಿರುವ ಬಂಗಾಳಿಗಳು, ತಮ್ಮ ಗುಂಪಿನ ಹೊರಗಿನ ವ್ಯಾಪ್ತಿಯಲ್ಲೂ ಕೂಡಾ ಭಾಷೆಯ ಉಳಿಯುವಿಕೆಯನ್ನೇ ಹೆಚ್ಚು ತೋರುವುದಾಗಿ, ತಿಳಿದುಬರುತ್ತದೆ. ಆಯಾಯಾ ಕೋಮುಗಳೊಳಗೆ ಬಳಕೆಯಾಗುವ ಭಾಷೆಗಳ ಬಗ್ಗೆ ಅವರವರಿಗೆ ಇರುವ ಧೋರಣೆಗಳೇ, ಉಳಿಯುವಿಕೆಯ ಸ್ವರೂಪದಲ್ಲಿನ ಈ ವ್ಯತ್ಯಾಸಕ್ಕೆ ಕಾರಣವಾಗಿ ಕಾಣುತ್ತದೆ. ಭಾಷಾ ಸಂಪರ್ಕದ ಸಂದರ್ಭಗಳಲ್ಲಿ ನ್ಯೂಯಾರ್ಕ್ ಮತ್ತು ದೆಹಲಿಗಳಲ್ಲಿ ಕಂಡುಬಂದ ಸಾಮ್ಯವು, ಭಾರತಕ್ಕಿಂತ ಹೆಚ್ಚು ಪಾಶ್ಚಾತ್ಯ ಸಮಾಜಗಳೇ ಭಾಷೆಯ ಕದಲುವಿಕೆಗೆ ಅನುಕೂಲಕರವಾಗಿದೆಯೆಂಬ ಏಕಪ್ರಕಾರವಾದ ಅಭಿಪ್ರಾಯಗಳನ್ನು ಪುನರ್ಮೌಲ್ಯಕ್ಕೊಳಪಡಿಸಬೇಕಾದ ಅಗತ್ಯವನ್ನು, ಸೂಚಿಸುತ್ತದೆ(ಶರ್ಮ ೧೯೭೭ ಮತ್ತು ಇತರ ಕೃತಿಗಳು). ಈ ಪುನರ್ಮೌಲ್ಯೀಕರಣವು ಕೆಳಗಿನ ವ್ಯತ್ಯಾಸ-ಸಾಧ್ಯತೆಗಳನ್ನು ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ: ವಲಸೆಯ ಮೊದಲು ಹಾಗೂ ಅನಂತರ, ವಲಸೆಗಾರರ ಭಾಷಾ ಸರಕಿನಲ್ಲಿ ಮುಖ್ಯ ಪ್ರವಾಹದ ಭಾಷೆಯ ಪಾತ್ರ; ಹೊಸ ಸಮಾಜದಲ್ಲಿ ವಲಸೆಗಾರ ಕೋಮು, ವಾಸ್ತವವಾಗಿ ಹಾಗೂ ತಿಳುವಳಿಕೆಯಲ್ಲಿ, ಹೊಂದಿರುವ ಪಾತ್ರ; ಮತ್ತು ಭಾಷಾನಿಷ್ಠೆಯ ವಿಷಯದಲ್ಲಿ ಬೇರೆಬೇರೆ ಗುಂಪುಗಳಲ್ಲಿರುವ ಅಂತರ.

## ೭. ಉಪಸಂಹಾರ

ಅಮೆರಿಕಾದಲ್ಲಿರುವ ವಲಸೆಗಾರರಲ್ಲಿ ಭಾಷೆಯ ಉಳಿಯುವಿಕೆ ಮತ್ತು ಕದಲುವಿಕೆಯನ್ನು ಕುರಿತ ಸಾಂಪ್ರದಾಯಿಕ ಅಧ್ಯಯನಗಳಿಗಿಂತ ಈ ಅಧ್ಯಯನ ಹಲವು ರೀತಿಗಳಲ್ಲಿ ಭಿನ್ನವಾಗಿದೆ. ಮೊದಲನೆಯದಾಗಿ, ಈ ಅಧ್ಯಯನಕ್ಕೆ ಕೇಂದ್ರವಾಗಿರುವುದು 'ಹೊಸ ಕುಲ', ಅಂದರೆ ಉತ್ಕೃಷ್ಟ ಔದ್ಯೋಗಿಕ ಕೌಶಲಗಳನ್ನು(೧೯೬೫ರ ವಲಸೆ ಕಾಯಿದೆ ನಿಗದಿಪಡಿಸಿರುವ "ಮೂರನೆಯ ಪ್ರಾಶಸ್ತ್ಯ"ದಡಿಯಲ್ಲಿ, ವಲಸೆ ಹೋಗಲು ಇರಬೇಕಾದ ಅರ್ಹತೆ) ಹೊಂದಿರುವಂಥ ವಲಸೆಗಾರ ಕುಟುಂಬಗಳು. ಎರಡನೆಯದಾಗಿ, ಈ ಅಧ್ಯಯನದಲ್ಲಿ 'ಮನೆಯ ಭಾಷೆ' ಎಂಬಂಥ ಲೋಕ ವಿಸ್ತಾರದ ಅಳತೆಗಳ ಬದಲು, ಭಾಷಾ ನಡತೆಗೆ ಸಂಬಂಧಪಟ್ಟಂತೆ ಸಾಮಾಜಿಕ-ಭಾಷಾ ಶಾಸ್ತ್ರೀಯವಾಗಿ ಸಂಕೀರ್ಣ ಪರಿಕಲ್ಪನೆಯಾದ ಕ್ಷೇತ್ರ ವಿಶ್ಲೇಷಣೆಗೆ ಒತ್ತುಕೊಡಲಾಗಿದೆ. ಮೂರನೆಯದಾಗಿ ಯುವಪೀಳಿಗೆಯವರಿಗೆ ತಮ್ಮ ಕುಲದ ಭಾಷೆಯಲ್ಲಿ ಇರುವ ಪ್ರಾವೀಣ್ಯದ ಮಟ್ಟ, ಹಾಗೂ ಸ್ವರೂಪ, ಮತ್ತು ವಿವಿಧ ಕ್ಷೇತ್ರಗಳಲ್ಲಿ ಅದರ ಬಳಕೆ, ಇವುಗಳನ್ನು ಅಳೆಯುವ

ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ಅಧ್ಯಯನದ ಸ್ವತಃಸಿದ್ಧ ಮಿತಿಗಳ ಹೊರತಾಗಿಯೂ ಇದು, ಅಮೆರಿಕಾದಲ್ಲಿರುವ ಮೊದಲ ತಲೆಮಾರಿನ ಕನ್ನಡಿಗರ ಭಾಷಾ ಬಳಕೆಯನ್ನು ಕುರಿತಂಥ ಸಾಕಷ್ಟು ವಿವಿರವಾದ ದಾಖಲೆಯೆನ್ನಿಸಿ, ಇನ್ನು ಮುಂದೆ, ಈ ಗುಂಪು ಮತ್ತು ಇತರ ಗುಂಪುಗಳು-ಎರಡಕ್ಕೂ ಸಂಬಂಧಿಸಿ ನಡೆಯಬಹುದಾದ ತುಲನಾತ್ಮಕ ಅಧ್ಯಯನಗಳಿಗೆ ಇದು ಮೂಲ ರೂಪರೇಷೆಗಳನ್ನು ಒದಗಿಸಬಲ್ಲದೆಂದು ಆಶಿಸಲಾಗಿದೆ.

ಈ ಅಧ್ಯಯನದ ಮೂಲಕ ತಲುಪಿದ ತೀರ್ಮಾನಗಳ ಅತಿಯನ್ನು ತಪ್ಪಿಸುವ ದೃಷ್ಟಿಯಿಂದ, ಇಲ್ಲಿ ಅಧ್ಯಯನಕ್ಕೊಳಗಾದ ಜನರ ವಿಶಿಷ್ಟ ಲಕ್ಷಣಗಳನ್ನು ಮನಸ್ಸಿನಲ್ಲಿರಿಸಿಕೊಳ್ಳುವುದು ಮುಖ್ಯ. ನ್ಯೂಯಾರ್ಕಿನ ಕನ್ನಡಿಗರು, ಅಮೆರಿಕಾದ ಇತರ ಭಾಗಗಳಲ್ಲಿರುವ ಕನ್ನಡಿಗರಿಗಿಂತ ಹೆಚ್ಚು ಸುಸಂಘಟಿತರಾಗಿದ್ದಾರೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಚ್ಚು ಸಕ್ರಿಯ ಪಾತ್ರವನ್ನು ವಹಿಸುತ್ತಾರೆ. ಅಮೆರಿಕಾದಲ್ಲಿರುವ ಕನ್ನಡಿಗರು, ಅಲ್ಲಿನ ಭಾರತೀಯ ಸಮುದಾಯದ ಕೇವಲ ಒಂದು ಭಾಗ ಮಾತ್ರ. ಉದಾಹರಣೆಗೆ, ಗುಜರಾತಿಗಳು ಸಂಖ್ಯೆಯಲ್ಲಿ ಇನ್ನಷ್ಟು ಜಾಸ್ತಿ ಇರುವುದು ಮಾತ್ರವಲ್ಲ ತಮ್ಮ ಉದ್ಯೋಗಗಳ ವ್ಯಾಪ್ತಿಯಲ್ಲಿ ಇನ್ನಷ್ಟು ವೈವಿಧ್ಯವನ್ನು ಹೊಂದಿದ್ದು, ಬಂಗಾಳಿಗಳು ಮತ್ತು ತಮಿಳರಂತೆ ಕನ್ನಡಿಗರಿಗಿಂತ ಹೆಚ್ಚಿನ ಭಾಷಾನಿಷ್ಠೆಯನ್ನು ತೋರುತ್ತಾರೆ. ಅಮೆರಿಕಾದ ಸಾಂಪ್ರದಾಯಿಕ ವಲಸೆಗಾರರಿಗಿಂತ ಹೆಚ್ಚಾಗಿ ಅಥವಾ ಭಿನ್ನವಾಗಿ 'ಹೊಸಕುಲ'ದವರು ತಮ್ಮ ಭಾಷೆಗಳನ್ನು ಉಳಿಸಿಕೊಳ್ಳಬಲ್ಲರೇ ಎಂಬುದನ್ನು ಇನ್ನಷ್ಟು ವ್ಯಾಪಕವಾದ ಮತ್ತು ಕ್ರಮಬದ್ಧವಾದ ತುಲನಾತ್ಮಕ ಅಧ್ಯಯನಗಳನ್ನು ಕೈಗೊಂಡ ನಂತರವಷ್ಟೇ ಹೇಳಬಹುದು.

### ಟಿಪ್ಪಣಿಗಳು

೧. ೧೯೭೭ರ ಬೇಸಿಗೆಯಲ್ಲಿ ಸ್ಟಾನ್ ಫರ್ಡ್ ವಿಶ್ವವಿದ್ಯಾನಿಲಯದಲ್ಲಿ, ಪ್ರೊಫೆಸರ್ ಜೋಶುವಾ ಫಿಶ್‌ಮನ್‌ರವರ ನಿರ್ದೇಶನದಲ್ಲಿ ನಡೆದ 'ಅಮೆರಿಕದ ಕುಲಭಾಷಾ ಅಲ್ಪಸಂಖ್ಯಾತರ ನಡುವೆ ಭಾಷೆಯ ಉಳಿಯುವಿಕೆ ಮತ್ತು ಭಾಷೆಯ ಕದಲುವಿಕೆ" ಎಂಬ ವಿಷಯದ ಮೇಲಿನ ಎನ್ ಇ ಎಚ್ ವಿಚಾರ ಸಂಕಿರಣದ ಅಂಗವಾಗಿ ಈ ಅಧ್ಯಯನ ಹುಟ್ಟಿತು. ಪ್ರೊಫೆಸರ್ ಫಿಶ್‌ಮನ್‌ರ ಮಾರ್ಗದರ್ಶನ ಹಾಗೂ ಬೆಂಬಲಗಳಿಗೆ, ಮತ್ತು ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಫೆಲೋಶಿಪ್ಪನ್ನು ಕೊಟ್ಟಿದ್ದಕ್ಕಾಗಿ 'ನ್ಯಾಷನಲ್ ಎಂಡೋಮೆಂಟ್ ಫಾರ್ ಹ್ಯುಮಾನಿಟೀಸ್'ಗೆ ನಾನು ಋಣಿಯಾಗಿದ್ದೇನೆ. ಈ ಅಧ್ಯಯನದಲ್ಲಿ ಪಾಲ್ಗೊಂಡದ್ದಕ್ಕಾಗಿ ಹಾಗೂ ತೋರಿದ ಆದರಕ್ಕಾಗಿ ಎಲ್ಲ ಕನ್ನಡಿಗರಿಗೆ, ಹಲವು ರೀತಿಯ ಸಹಾಯ ಮತ್ತು ಉತ್ತೇಜನಗಳನ್ನು ನೀಡಿದ ಪ್ರೊಫೆಸರುಗಳಾದ ಜೇಮ್ಸ್ ಡೋ, ಮೇಲ್ವೆನ್ ರೈಖ್ಲರ್, ಬೆಟಿ ವೈಡ್‌ಮನ್ ಮತ್ತು ಎಸ್.ಎನ್. ಶ್ರೀಧರ್ ಅವರಿಗೆ, ನಾನು ಕೃತಜ್ಞಳು. ಯಾವುದೇ ರೀತಿಯ ತಪ್ಪುಗಳ ಜವಾಬ್ದಾರಿ ನನ್ನದು. ಈ ಲೇಖನದ ಪ್ರಥಮ ಪಾಠಾಂತರವೊಂದನ್ನು, ಮೇ ೧೯೭೮ರಲ್ಲಿ ಸಿರಾಕೂಸ್ ವಿಶ್ವವಿದ್ಯಾನಿಲಯದಲ್ಲಿ 'ಅಂತಾರಾಷ್ಟ್ರೀಯ ದೃಷ್ಟಿಕೋನದಲ್ಲಿ ಭಾಷೆಯ ಉಳಿಯುವಿಕೆ ಮತ್ತು ಭಾಷೆಯ ಕದಲುವಿಕೆ'ಯನ್ನು ಕುರಿತ ವಿಚಾರ ಗೋಷ್ಠಿಯಲ್ಲಿ ಮಂಡಿಸಲಾಯಿತು.

ಪರಿಚಯ

# 'ಹಿಂದೂ ಮ್ಯಾನರ್ಸ್, ಕಸ್ಟಮ್ಸ್ ಅಂಡ್ ಸೆರೆಮೊನೀಸ್'

● ಈ. ಬಸವರಾಜಪ್ಪ

ಈ ಪುಸ್ತಕದ ಲೇಖಕರಾದ ಅಬ್ಬೆ, ಜೆ.ಎ. ದುಬಾಯಿಸ್‌ಯದು ಭಾರತ ಕುರಿತು ಬರೆದ ಪಾಶ್ಚಿಮಾತ್ಯ ಸಾಮಾಜಿಕ ಚರತ್ರೆಕಾರರಲ್ಲಿ ಬಹು ದೊಡ್ಡ ಹೆಸರು. ೧೭೭೦ರಲ್ಲಿ ಫ್ರಾನ್ಸ್‌ನಲ್ಲಿ ಜನಸಿದ ದುಬಾಯಿಯು ಸರ್ ವಿಲಿಯಂ ಜೋನ್ಸನ ಜೂನಿಯರ್ ಆಗಿ ಸಂಸ್ಕೃತ ಭಾಷೆಯನ್ನು ಅಧ್ಯಯನ ಮಾಡಲು ಬಂಗಾಳದ ಏಷ್ಯಾಟಿಕ್ ಸೊಸೈಟಿಗೆ ಬಂದವನು ತನ್ನ ಜೀವನದ ಬಹುಭಾಗವನ್ನು ಈತ ದಕ್ಷಿಣ ಭಾರತ ಮತ್ತು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಕಳೆದನು. ಭಾರತೀಯ ಭಾಷೆಗಳಾದ ಸಂಸ್ಕೃತ ಮತ್ತು ತಮಿಳನ್ನು ಆಳವಾಗಿ ಅಧ್ಯಯನ ಮಾಡಿದನು. ಕ್ರೈಸ್ತ ಮಿಶನರಿಯ ನೇತೃತ್ವದಲ್ಲಿ ಬಂದ ದುಬಾಯಿಸ್ ೩೧ ವರ್ಷದವರೆಗೆ ಭಾರತದ ಉದ್ದಗಲಕ್ಕೂ ಪ್ರವಾಸ ಮಾಡಿ, ಇಲ್ಲಿನ ರೋಚಕ ಜನಜೀವನವನ್ನು ಕುರಿತಾಗಿ 'ಹಿಂದೂ ಮ್ಯಾನರ್ಸ್,ಕಸ್ಟಮ್ಸ್ ಅಂಡ್ ಸೆರೆಮೊನೀಸ್ ಎಂಬ ಪುಸ್ತಕವನ್ನು ಬರೆದನು. ಭಾರತೀಯ ಸಮಾಜವನ್ನು ಕುರಿತ ಪಾಶ್ಚಿಮಾತ್ಯ ವಿದ್ವಾಂಸನೊಬ್ಬನ ಪೂರ್ವಗ್ರಹ, ಒಳನೋಟ, ಟೀಕೆ, ಮುಗ್ಧತೆಗಳುಳ್ಳ ವಿಶ್ಲೇಷಣೆಗೆ ಈ ಪುಸ್ತಕ ಸಾಕ್ಷಿಯಾಗಿದೆ.

ಈ ಪುಸ್ತಕವನ್ನು ಈಸ್ಟ್ ಇಂಡಿಯಾ ಕಂಪನಿಯ ಅನುಮತಿಯ ಮೇರೆಗೆ ಹೆನ್ರಿ ಕೆ. ಬ್ಯೂಚಂಪ್ ೧೯೦೬ರಲ್ಲಿ ಪ್ರಥಮ ಬಾರಿಗೆ ಪ್ರಕಟಿಸಿದನು. ಇದರ ಪ್ರಕಟಣೆಯ ಮೂಲ ಉದ್ದೇಶ ಭಾರತೀಯ ಸಾಮಾಜಿಕ ಚರಿತ್ರೆಯನ್ನು ವಸಾಹತು ಆಡಳಿತದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವುದಾಗಿತ್ತು. ನಂತರ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನಿಂದ ೧೯೭೨ರಲ್ಲಿ ಇದರ ಮೊದಲ ಪುನರ್‌ಮುದ್ರಣವಾಯಿತು. ಒಟ್ಟು ೭೨೨ ಪುಟಗಳುಳ್ಳ ಈ ಪುಸ್ತಕದಲ್ಲಿ ೫೪ ಅಧ್ಯಾಯಗಳನ್ನು ಮೂರು ಭಾಗವಾಗಿ ವಿಂಗಡಿಸಿ ಭಾರತೀಯ ಸಮಾಜವನ್ನು ಅಧ್ಯಯನದ ಚೌಕಟ್ಟಿಗೆ ಒಳಪಡಿಸಲಾಗಿದೆ.

ಈ ಪುಸ್ತಕದ ಕೇಂದ್ರ ಆಸಕ್ತಿ, ಹಿಂದೂ ಜಾತಿಪದ್ಧತಿ ಆದರೂ ಕೆಳಜಾತಿ ಹಾಗೂ ಬುಡಕಟ್ಟುಗಳನ್ನು ಕುರಿತದ್ದಾಗಿದೆ. ದುಬಾಯಿಸ್ ಹಿಂದೂ ಸಮಾಜದ ಕ್ರಮಬದ್ಧವಾದ ಸಂಪ್ರದಾಯ ಪದ್ಧತಿ ಸಂಸ್ಕಾರ ಮತ್ತು ಧಾರ್ಮಿಕ ವ್ಯವಸ್ಥೆಯನ್ನು ಸಪ್ರಮಾಣವಾಗಿ ದಾಖಲಿಸಲು

ಪ್ರಯತ್ನಿಸಿದ್ದಾನೆ. ಈ ಪುಸ್ತಕದ ವಿಶಿಷ್ಟತೆ ಎಂದರೆ, ಹಿಂದೂ ಧರ್ಮದ ವರ್ಣಾಶ್ರಮ ಪದ್ಧತಿಯನ್ನು ಸರಳ ವ್ಯಾಖ್ಯಾನವನ್ನು ಮಾಡಿರುವುದು. ಹಿಂದೂ ಸಮಾಜದ ತಾತ್ವಿಕ ಮತ್ತು ಸಾಮಾಜಿಕ ಚೌಕಟ್ಟು ವಾಸ್ತವವಾಗಿ ವರ್ಣವ್ಯವಸ್ಥೆಯ ಆಧಾರದಿಂದಲೇ ರೂಪಗೊಂಡಿತ್ತು, ಎಂಬುದು ದುಬಾಯಿಯ ಗ್ರಹಿಕೆ. ಶತಮಾನದ ವೇಳೆಗೆ ಹಿಂದೂ ಸಮಾಜವು ಸಂಪೂರ್ಣವಾಗಿ ವರ್ಣವ್ಯವಸ್ಥೆಯಿಂದ ಕಳಚಿಕೊಳ್ಳುತ್ತಿರುವುದನ್ನು ಆತ ಗಮನಿಸಿದ್ದಾನೆ. ಉದಾಹರಣೆಗೆ ಪಾಂಚಾಲರು ಎಂಬ ಐದು ಬಗೆಯ ಕುಶಲಕರ್ಮಿ ಸಮುದಾಯವು ಹೇಗೆ ಒಂದು ಸ್ವತಂತ್ರ ಸಗೋತ್ರ ವಿವಾಹವುಳ್ಳ ವಿಶಿಷ್ಟ ಗುಂಪಾಗಿ ತಮ್ಮದೇ ಧಾರ್ಮಿಕ ಕಾರ್ಯಾಚರಣೆಗಳನ್ನು ಬೆಳೆಸಿಕೊಂಡು, ಬ್ರಾಹ್ಮಣ ಪುರೋಹಿತರ ನೆರವು ಕೋರದೆ ಬೆಳೆಯಿತು ಎಂದು ಆತ ಹೇಳುತ್ತಾನೆ. ಹಿಂದೂ ಸಮಾಜದಲ್ಲಿ ಅನೇಕ ಗುಂಪುಗಳು ಸಂಪೂರ್ಣವಾಗಿ ಸ್ಥಳೀಯವಾದ ಲಕ್ಷಣ ಹೊಂದಿರುವುದು ದುಬಾಯಿಸ್‌ಗೆ ಎದ್ದು ಕಂಡಿದೆ. ಉದಾಹರಣೆಗೆ ಮೈಸೂರಿನ ಪಶ್ಚಿಮ ಭಾಗದ ಜಿಲ್ಲೆಗಳ ಕೃಷಿ ಕುಟುಂಬಗಳಲ್ಲಿ, ಸೋಮವಾರದ ದಿನ ಎತ್ತುಗಳನ್ನು ಬೇಸಾಯಕ್ಕೆ ಹೂಡದೆ ರಜೆ ದಿನ ಮಾಡಿ ಪೂಜಿಸುವುದನ್ನು ಸಂಪೂರ್ಣವಾಗಿ ಸ್ಥಳೀಯ ಸಂಪ್ರದಾಯವೆಂದು ದುಬಾಯಿ ಗುರುತಿಸುತ್ತಾನೆ.

೧೯ನೇ ಶತಮಾನದ ಸಮಾಜವನ್ನು ಕುರಿತು ಬರೆಯುತ್ತಾ 'ಪ್ರಾಕೃತಿಕವಾಗಿ ಸಂಪತ್ತಿನ ಗಣಿಯಾಗಿರುವ ಭಾರತದಲ್ಲಿ, ನೂರರಲ್ಲಿ ತೊಂಬತ್ತರಷ್ಟು ಜನ ಕೃಷಿಯಾಧಾರಿತ ಜೀವನವನ್ನು ನಡೆಸುತ್ತಿದ್ದಾರೆ. ಇಲ್ಲಿ ಸಾಕಷ್ಟು ಕೃಷಿ ಭೂಮಿ ಇದೆ. ಇಲ್ಲಿನ ರೈತರು ಎರಡು, ಮೂರು, ಅಥವಾ ನಾಲ್ಕು ನೇಗಿಲುಗಳನ್ನು ಹೊಂದಿದ್ದಾರೆ. ಶೂದ್ರ ವರ್ಣದಲ್ಲಿ ಮೇಲ್ವರ್ಗದ ಜಾತಿಗಳು ತಮ್ಮ ಕೃಷಿ ನೆರವಿಗೆ ಕೆಳಹಂತದ ಜನರನ್ನು ಸೇವಕರಾಗಿ ಹೊಂದಿದ್ದಾರೆ. ಈ ಶೂದ್ರ ವರ್ಣದಲ್ಲಿ ಕೆಲವರು ಸಾಕಷ್ಟು ಶ್ರೀಮಂತರಾಗಿದ್ದಾರೆ. ಇವರು ವಾಸ ಮಾಡುವ ಹಳ್ಳಿಗಳಲ್ಲಿ ಶೂದ್ರರೇ ಮುಖಂಡರಾಗಿದ್ದಾರೆ. ಇವರು ಕೆಲವು ಸಂದರ್ಭಗಳಲ್ಲಿ ಅಧಿಕ ಪ್ರಮಾಣದ ಸರ್ಕಾರಿ ಭೂಹಿಡುವಳಿಯ ಒಡೆತನವನ್ನು ಹೊಂದಿದ್ದಾರೆ. ಇಂತಹ ಮುಖಂಡರುಗಳ ಮುಖ್ಯ ಕಾರ್ಯವು ಕಂದಾಯ ಸಂಗ್ರಹಿಸುವುದು, ಚಿಕ್ಕಪುಟ್ಟ ನ್ಯಾಯ ತೀರ್ಮಾನ ಮಾಡುವುದು. ಇಡೀ ಗ್ರಾಮಗಳು ಇವರಿಗೆ ನಂಬಿಕೆಯಿಂದ ಇರುತ್ತಿದ್ದವು. ಇವರು ಸುಶಿಕ್ಷಿತರಾಗಿದ್ದು ಸಾಮಾನ್ಯವಾಗಿ ಓದುವ ಮತ್ತು ಬರೆಯುವುದನ್ನು ಕಲಿತಿದ್ದರು. ಹಾಗೆಯೇ ಶೇಕಡಾ ೩೦ ರಷ್ಟು ಜನಸಂಖ್ಯೆಯನ್ನು ಹೊಂದಿದ ಬ್ರಾಹ್ಮಣರು ಮತ್ತು ವೈಶ್ಯರು ಶೂದ್ರ ವರ್ಗದವರಿಗಿಂತ ಶ್ರೀಮಂತರಾಗಿದ್ದರು. ವೈಶ್ಯ ವರ್ಗವು ವ್ಯಾಪಾರ ಮತ್ತು ವಾಣಿಜ್ಯೋದ್ಯಮದಲ್ಲಿ ಹಿಡಿತ ಸಾಧಿಸಿತ್ತು. ಬ್ರಾಹ್ಮಣರು ಬಹುತೇಕವಾಗಿ ಸರ್ಕಾರಿ ಉದ್ಯೋಗವನ್ನು ಪಡೆದಿದ್ದರು. ಅವರಲ್ಲಿ ಕೆಲವರು ಸಾರ್ವಜನಿಕ ಕಂದಾಯ ಇಲಾಖೆಯಲ್ಲಿ ಸಹಾಯಕ ಕಲೆಕ್ಟರುಗಳಾಗಿ, ನ್ಯಾಯಾಧೀಶರಾಗಿ, ಗುಮಾಸ್ತರಾಗಿ ಸರ್ಕಾರಿ ಉದ್ಯೋಗಗಳನ್ನು ಪಡೆದಿದ್ದರು. ಇವರು ಅಗ್ರಹಾರಗಳಲ್ಲಿ ಬ್ರಾಹ್ಮಣರ ಹಳ್ಳಿಗಳಲ್ಲಿ, ನಗರಗಳಲ್ಲಿ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ವಾಸವಾಗಿದ್ದಾರೆ ಎಂದು ದುಬಾಯಿ ವಿವರಿಸುತ್ತಾನೆ.

ಇದೇ ಸಂದರ್ಭದಲ್ಲಿ ದುಬಾಯಿ ಪಾದ್ರಿಯ ಭಾರತದ ಬಡತನಕ್ಕೆ ಕಾರಣವನ್ನು ಕೂಡ

ವಿವರಿಸುತ್ತಾನೆ. ಪಾಶ್ಚಿಮಾತ್ಯ ಕೈಗಾರೀಕರಣದಿಂದಾಗಿ ಹೇಗೆ ಭಾರತದ ಕೈಗಾರಿಕೆಗಳು, ಅದರಲ್ಲೂ ನೆಯ್ಗೆ ಉದ್ಯಮವು ನಾಶ ಹೊಂದಿತು. ಇಂತಹ ಕುಶಲ ಕರ್ಮಿಗಳು ತಮ್ಮ ಹೊಟ್ಟೆ ಪಾಡಿಗಾಗಿ ಪರದಾಟ ಮಾಡುತ್ತಿದ್ದರು ಎನ್ನುತ್ತಾರೆ. ಸಾಮಾನ್ಯವಾಗಿ ನೆಯ್ಗೆಯವ ರಂತೆಯೇ ಕ್ಷೌರಿಕರು, ಮಡಿವಾಳರು ಇತರ ಕುಶಲ ಕೆಲಸಗಾರರ ಬದುಕು ದುಸ್ಥಿತಿಯಿಂದ ಕೂಡಿದ್ದನ್ನು ಗುರುತಿಸಿದ್ದಾರೆ. ಇದಕ್ಕಾಗಿ ದುಬಾಯಿಸ್ ತಾನು ಕಂಡ ಒಬ್ಬ ಅಕ್ಕಸಾಲಿಯ ಜೀವನ ಬರೆಯುತ್ತಾ, ಅವನ ಮನೆಯಲ್ಲಿ ಒಂದು ಅಥವಾ ಎರಡು ನೀರು ಕುಡಿಯುವ ಮತ್ತು ಕೆಲವು ಊಟಕ್ಕಾಗಿ ಬಳಸುವ ತಾಮ್ರದ ಪಾತ್ರೆಗಳಿದ್ದವು. ಹಾಗೆಯೇ ಕೆಲವು ಕಬ್ಬಿಣದ ಸಾಮಗ್ರಿಗಳಿದ್ದವು. ಮಣ್ಣಿನ ಗೋಡೆಗಳಿಂದ ನಿರ್ಮಿಸಿದ ಹುಲ್ಲಿನ ಗುಡಿಸಲಿನಲ್ಲಿ ಆತ ವಾಸವಾಗಿ ದ್ದನು ಎನ್ನುತ್ತಾನೆ.

ದುಬಾಯಿ ಬರವಣಿಗೆಯಲ್ಲಿ ಮುಖ್ಯವಾದುದು ಸಹಗಮನದ ಕುರಿತ ಟಿಪ್ಪಣಿಗಳು. ತಂಜಾವೂರು ಜಿಲ್ಲೆಯ ಒಂದು ಹಳ್ಳಿಯಲ್ಲಿ ಪುದುಪೆಟ್ಟ ಎಂಬ ಪ್ರಮುಖ ವಾಣಿಜ್ಯೋದ್ಯಮಿ ೧೮೦೪ಳರಲ್ಲಿ ಮರಣ ಹೊಂದಿದನು. ಕೋಮಟಿ ವೈಶ್ಯ ಜಾತಿಗೆ ಸೇರಿದ ಈತನ ೩೦ ವರ್ಷದ ಹೆಂಡತಿಯನ್ನು ಅವನ ಶವದ ಜೊತೆಯಲ್ಲಿಯೇ ಸುಡಲಾಯಿತು. ಹಾಗೆಯೇ ತಂಜಾವೂರಿನ ಕೊನೆಯ ರಾಜನು ೧೮೦೧ರಲ್ಲಿ ಮರಣ ಹೊಂದಿದನು. ಅವನಿಗೆ ನಾಲ್ಕು ಜನ ಪತ್ನಿಯರಿದ್ದರು. ಅಲ್ಲಿನ ಸ್ಥಳೀಯ ಬ್ರಾಹ್ಮಣರು ತೀರ್ಮಾನಿಸಿ ಅವರಲ್ಲಿ ಎರಡು ಜನ ಪತ್ನಿಯರನ್ನು ರಾಜ ನೊಂದಿಗೆ ಸುಡಲಾಯಿತು. ಶೂದ್ರರಲ್ಲಿಯೂ ಗಂಡ ಸತ್ತನಂತರ ಹೆಂಡತಿಯನ್ನು ಜೊತೆ ಯಲ್ಲಿಯೇ ಸಂಸ್ಕಾರ ಮಾಡುವ ವ್ಯವಸ್ಥೆ ಇತ್ತು ಎಂಬುದನ್ನು ಗಮನಿಸಿದ ದುಬಾಯಿ, ಸಹಗಮನ ಪದ್ಧತಿ ಹಿಂದೂ ಸಮಾಜದ ಅತ್ಯಂತ ನಾಚಿಕೆಗೇಡಿನ ಸಂಪ್ರದಾಯವಾಗಿತ್ತು ಎನ್ನುತ್ತಾನೆ.

ಹಿಂದೂಗಳಲ್ಲಿ ಪಿತ್ರಾರ್ಜಿತವಾಗಿ ಬಂದ ಆಸ್ತಿಯನ್ನು ಸಹೋದರರು ಹಂಚಿಕೊಳ್ಳುವಾಗ, ಹೆಣ್ಣುಮಕ್ಕಳಿಗೆ ಪಾಲು ಕೊಡುತ್ತಿರಲಿಲ್ಲ ಎನ್ನುತ್ತಾನೆ. ಅಂದಿನ ಸಂಪ್ರದಾಯದ ಪ್ರಕಾರ ಒಬ್ಬ ಬ್ರಾಹ್ಮಣನ ಮರಣದಂಡನೆ ಮಹಾ ಪಾಪವಾಗಿತ್ತು. ಆದರೆ ಒಬ್ಬ ಶೂದ್ರನ ಮರಣ ದಂಡನೆಯ ಪಾಪ ಪರಿಹಾರಕ್ಕೆ ಸರಳ ಮಾರ್ಗಗಳಿದ್ದವು. ಇಂತಹ ವಿಲಕ್ಷಣ ರೀತಿಯ ಸಂಪ್ರದಾಯಗಳನ್ನು ಟೀಕಿಸುವ ಅವನ ಪ್ರಕಾರ, ಹಿಂದೂ ಧರ್ಮದಲ್ಲಿರುವ ನರಕದ ಕಲ್ಪನೆ ತುಂಬಾ ಭಯಾನಕ. ದುಬಾಯಿ ಕರ್ನಾಟಕದ ಯುಗಾದಿ, ದೀಪಾವಳಿ, ಶಿವರಾತ್ರಿ, ಮಹಾ ನವಮಿ (ದಸರ) ನಾಗರಪಂಚಮಿ, ಸಂಕ್ರಾಂತಿ ಮುಂತಾದ ಹಬ್ಬಗಳಲ್ಲಿ ನಡೆಯುವ ಸಂಪ್ರದಾಯ ಗಳನ್ನು ಕುರಿತು ವಿವರಿಸುತ್ತಾನೆ. ಶ್ರೀರಂಗಪಟ್ಟಣದ ಹತ್ತಿರದ ನಂಜನಗೂಡು ನಂಜುಂಡೇಶ್ವರ ಜಾತ್ರೆಗೆ ಮೈಸೂರು ಸಂಸ್ಥಾನದ ಸಹಸ್ರಾರು ಜನ ಸೇರುತ್ತಿದ್ದುದ್ದನ್ನು, ಹಾಗೆಯೇ ನಂಜನಗೂಡು ಸಮೀಪದ ಮಾಗೂರಿನಲ್ಲಿ ತಿಪ್ಪಮ್ಮ ದೇವತೆಯ ಜಾತ್ರೆ ಬಗ್ಗೆ ಬರೆಯುತ್ತಾ ದೇವತೆಗೆ ಆರು ಜನ ತಂಗಿಯರಿದ್ದುದ್ದನ್ನು ಉಲ್ಲೇಖಿಸುತ್ತಾನೆ. ಪುರಿಯ ಜಗನ್ನಾಥ ದೇವಾಲಯದಲ್ಲಿ ನಡೆಸುತ್ತಿದ್ದ ಆಚರಣೆಗಳು, ಹಾಗೆಯೇ ತಿರುಪತಿಯ ವೆಂಕಟೇಶ್ವರ ದೇವಾಲಯದಲ್ಲಿ ನಡೆಯುವ

ಪೂಜಾ ಸಂಪ್ರದಾಯಗಳನ್ನು ಕುರಿತಂತೆ ದೇವತೆಗಳಾದ ವಿಷ್ಣು, ರಾಮ, ಕೃಷ್ಣ, ಶಿವ, ಲಿಂಗ, ವಿಘ್ನೇಶ್ವರ, ಇಂದ್ರ ಅಷ್ಟದಿಕ್ಪಾಲಕರು ಮುಂತಾದ ದೇವರುಗಳನ್ನು ಕುರಿತಂತೆ, ಹಾಗೂ ಪ್ರಾಣಿ ಪಕ್ಷಿಗಳ ಆರಾಧನೆಯನ್ನು ಕುರಿತಂತೆ ಇಲ್ಲಿ ಕುತೂಹಲಕರ ವಿವರಗಳಿವೆ. ಹನುಮಂತ, ಬಸವ ಗರುಡ, ನಾಗರಹಾವು, ದರ್ಬೆಹುಲ್ಲು, ಅರಳಿಮರ ತುಳಿಸಿಗಿಡ, ಮುಂತಾದುವುಗಳ ಪೂಜೆ ಸಂಪ್ರದಾಯಗಳಿಗೆ ಆಶ್ಚರ್ಯ ವ್ಯಕ್ತಪಡಿಸುತ್ತಾನೆ.

ತಾನು ಕಂಡ ದೇವಾಲಯಗಳಲ್ಲಿ ಇದ್ದ ದೇವದಾಸಿ ಪದ್ಧತಿಯನ್ನು ಕುರಿತಂತಹ ದುಬಾಯಿ ಟಿಪ್ಪಣಿಗಳು ವಿಶಿಷ್ಟವಾಗಿವೆ. ದೇವಾಲಯದಲ್ಲಿರುವ ದೇವದಾಸಿಗಳಿಗೆ ವೇತನವನ್ನು ನೀಡುತ್ತಿದ್ದುದನ್ನೂ ಅವರು ದೇವಾಲಯದ ಸಾಂಪ್ರದಾಯಿಕ ಧಾರ್ಮಿಕ ಕಾರ್ಯಗಳಲ್ಲಿ ನೃತ್ಯ ಸಂಗೀತಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದನ್ನೂ ವಿವರಿಸುತ್ತಾನೆ. ಮಹಿಳೆಯರು ಬೇರೆಯವರೊಂದಿಗೆ ಬೆರೆಯದೆ ಸಂಕೋಚದಿಂದ ಇರುತ್ತಿದ್ದರು. ವಿವಾಹವಾದವರು ತಮ್ಮ ಗಂಡನನ್ನು ಮಾತನಾಡಿಸುವಾಗ ನಿದಿಷ್ಟವಾದ ಪದವನ್ನು ಉಪಯೋಗಿಸಿ, 'ನನ್ನ ಯಜಮಾನ', 'ನನ್ನ ದೊರೆ', 'ನನ್ನ ದೇವರು' ಎಂದು ಕರೆಯುತ್ತಿದ್ದರು. ಯಾವುದೇ ಕಾರಣ ದಿಂದಲೂ ತನ್ನ ಗಂಡನ ಹೆಸರು ಹಿಡಿದು ಕರೆಯುತ್ತಿರಲಿಲ್ಲ. ಇವೆಲ್ಲ ಪಶ್ಚಿಮದ ಈ ಮಿಶನರಿಗೆ ಅಚ್ಚರಿ ಹುಟ್ಟಿಸಿವೆ. ಹಾಗೆಯೇ ಹಿಂದು ಮಹಿಳೆಯರು ತಮ್ಮ ಮನೆಯನ್ನು ಪ್ರತಿದಿನವೂ ಗುಡಿಸುತ್ತಿದ್ದರು, ಹಸುವಿನ ಸಗಣಿಯಿಂದ ನೆಲವನ್ನು ಬಳಿಯುತ್ತಿದ್ದರು ನಂತರ ಬಿಳಿಯ ರಂಗೋಲಿಯನ್ನು ಬಿಡಿಸುತ್ತಿದ್ದರು. ನಂತರ ಅಡಿಗೆ ಪಾತ್ರೆಗಳನ್ನು ಸ್ವಚ್ಛಗೊಳಿಸಿ ನಿಗದಿತ ವೇಳೆಗೆ ಊಟ ತಯಾರಿಸುತ್ತಿದ್ದರು ಮುಂತಾದ ಸಾಮಾನ್ಯ ವಿವರಗಳನ್ನೆಲ್ಲ ಆತ ದಾಖಲಿಸುತ್ತಾ ಹೋಗುತ್ತಾನೆ. ದಕ್ಷಿಣ ಭಾರತದ ಮಲಬಾರ್ ಮತ್ತು ಕರಾವಳಿ ಪ್ರದೇಶದಲ್ಲಿ ಎದೆಯ ಮೇಲ್ಭಾಗದಲ್ಲಿ ಬಟ್ಟೆಯನ್ನು ಧರಿಸುತ್ತಿರಲಿಲ್ಲ ಎಂಬುದು ಅವನಿಗೆ ತುಂಬ ವಿಚಿತ್ರವಾಗಿ ಕಾಣುತ್ತದೆ.

ಇಲ್ಲಿನ ಆಡಳಿತ ವ್ಯವಸ್ಥೆಯಲ್ಲಿನ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯಗಳು, ಮಿಲಿಟರಿ ವ್ಯವಸ್ಥೆ, ಇಲ್ಲಿನ ಆಡಳಿತ ವ್ಯವಸ್ಥೆಯಲ್ಲಿ ಕ್ಷತ್ರಿಯರ ಸ್ಥಾನ, ಇತ್ಯಾದಿ ಸಂಗತಿಗಳನ್ನೂ ಚರ್ಚಿಸುತ್ತಾನೆ. ಇಲ್ಲಿನ ಸೈನ್ಯವ್ಯವಸ್ಥೆ, ಸೈನಿಕರು ಬಳಸುವ ಶಸ್ತ್ರಾಸ್ತ್ರ ಕುರಿತಂತಹ ವಿವರಗಳ ಸುದೀರ್ಘ ಚರ್ಚೆಯಿದೆ. ಹಾಗೆಯೇ ಮೊಗಲರು ಮತ್ತು ಮರಾಠರ ಮಧ್ಯೆ ನಡೆದ ಯುದ್ಧದ ವಿವರದ ಜೊತೆಗೆ ಮಧ್ಯಕಾಲದ ಪಾಳೆಗಾರರನ್ನು ಕುರಿತಂತೆ ಚರ್ಚೆಯಿದೆ.

ವಸಾಹಾತುಶಾಹಿ ಸಮಾಜಶಾಸ್ತ್ರಜ್ಞರ, ತಾನು ಆಕ್ರಮಿಸಿಕೊಂಡ ದೇಶ ಕುರಿತು ಬರೆಯುವ ಎಲ್ಲ ಧೋರಣೆಗಳನ್ನು ಒಳಗೊಂಡಿರುವ ಈ ಪುಸ್ತಕವು, ಭಾರತೀಯ ಸಮಾಜದ ಅದರಲ್ಲೂ ಕರ್ನಾಟಕದ ೧೯ನೇ ಶತಮಾನದ ಸಾಮಾಜಿಕ ಬದುಕಿನ ಬಗೆಗೆ ಕುತೂಹಲಕರ ನೋಟಗಳನ್ನು ಹಾಯಿಸುತ್ತದೆ. ಈ ಪುಸ್ತಕವನ್ನು ತುಂಬ ಎಚ್ಚರಿಕೆಯಿಂದ ಪರಿಶೀಲಿಸಿದರೆ, ವಿದೇಶಿಯರ ಕಣ್ಣಿಗೆ ಗೋಚರವಾಗುವ ವೈಚಿತ್ರ್ಯಗಳು, ನಮ್ಮ ಸಮಾಜ ಕುರಿತು ನಮಗೆ ಕಾಣದ ತೀಕ್ಷ್ಣ ವಿಮರ್ಶೆಯ ಮಾತುಗಳು ಆಗುವವು.

ಎಲೆಮರೆ

# ಉಳ್ಳಾಲ ಮಂಗೇಶರಾಯರು

● ಎ.ವಿ. ನಾವಡ

೨೦ನೆಯ ಶತಮಾನದ ಮೊದಲ ಪಾದದಲ್ಲಿ ಕನ್ನಡಕ್ಕಾಗಿ ದುಡಿದವರಲ್ಲಿ ನಾಲ್ವರು ಮಂಗೇಶ ರಾಯರು ಪ್ರಸಿದ್ಧರು. ಪಂಜೆ, ಉಳ್ಳಾಲ, ಉಗ್ರಾಣ, ತೋನ್ಸೆಯವರೆಂದೇ ಜನ ಪ್ರೀತಿಯಿಂದ ಅವರನ್ನು ಕರೆಯುತ್ತಿದ್ದ ಹೆಸರುಗಳು. ಅದರಲ್ಲೂ ಕನ್ನಡದ ಮಕ್ಕಳ ಸಾಹಿತ್ಯ ರಚಕರಲ್ಲಿ ಆದ್ಯರಾದ ದಿ. ಪಂಜೆ ಮಂಗೇಶರಾಯರ ಜೊತೆಗೇ ಕೇಳಿ ಬರುವ ಇನ್ನೊಂದು ಹೆಸರೆಂದರೆ ದಿ. ಉಳ್ಳಾಲ ಮಂಗೇಶರಾಯರದು. ಅವರಿಬ್ಬರನ್ನೂ ಕನ್ನಡ ಮಕ್ಕಳ ಸಾಹಿತ್ಯ ಪ್ರಪಂಚದ ಅಶ್ವಿನೀ ದೇವತೆಗಳೆಂದೇ ಹೇಳಬಹುದು. ಮಕ್ಕಳ ಸಾಹಿತ್ಯ ರಚನೆ, ಪಠ್ಯ ಪುಸ್ತಕ ನಿರ್ಮಾಣ, ಮಕ್ಕಳ ಮನಸ್ಸನ್ನು ರೂಪಿಸುವ ಅಧ್ಯಾಪಕರ ತಯಾರಿ, ಪತ್ರಿಕಾ ಸಂಪಾದನ, ಸಹಕಾರಿ ತತ್ತ್ವಪ್ರಚಾರ, ಯಕ್ಷಗಾನ ಪುನರುಜ್ಜೀವನ-ಇವು ಉಳ್ಳಾಲ ಮಂಗೇಶರಾಯರ ಬದುಕಿನ ಚರಣ ಚಿಹ್ನೆಗಳು.

ಉಳ್ಳಾಲ ಮಂಗೇಶರಾಯರ ಜನನ ೧೮೭೭ರಲ್ಲಿ ಮಂಗಳೂರಿಗೆ ಸಮೀಪದ ಉಳ್ಳಾಲ ದಲ್ಲಾಯಿತು. ತಂದೆ ರಾಮರಾಯರು ಮಂಗಳೂರಿನಲ್ಲಿ ಎಣ್ಣೆಗಿರಣಿ ಹಾಗೂ ಹಿಟ್ಟಿನಗಿರಿಣಿ ನಡೆಸುತ್ತಿದ್ದರು. ಉಳ್ಳಾಲರು ಸ್ವಲ್ಪ ವರ್ಷಗಳ ಕಾಲ ಮಂಗಳೂರು ಸರಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಮುಂದೆ ಕೆಲವು ಕಾಲ ಮಂಗಳೂರಲ್ಲಿ ಶಾಲಾ ತನಿಖಾಧಿಕಾರಿ ಯಾಗಿದ್ದರು. ಆ ಬಳಿಕ (೧೯೧೮) ಪಂಜೆ ಮಂಗೇಶರಾಯರಿಗೆ ಹಿರಿಯ ಸಹಾಯಕ ಅಧ್ಯಾಪಕರಾಗಿ ಸರಕಾರಿ ಹೈಯರ್ ಟ್ರೈನಿಂಗ್ ಶಾಲೆಗೆ (ಅದರ ಜನಪ್ರಿಯ ಹೆಸರು ಜೈಲ್ ಶಾಲೆ)ಗೆ ಬಂದರು. ಪಂಜೆ ಮಂಗೇಶರಾಯರು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿಗೆ ಮುಖ್ಯ ಅಧ್ಯಾಪಕರಾಗಿ ನಿಯುಕ್ತರಾದಾಗ (೧೯೨೧) ಉಳ್ಳಾಲರು ಆ ತರಬೇತಿ ಶಾಲೆಯ ಮುಖ್ಯ ಅಧ್ಯಾಪಕರಾದರು. ಮುಂದೆ ನಿವೃತ್ತರಾಗುವ ತನಕವೂ(೧೯೩೩) ಅಲ್ಲೇ ಅವರು ಸೇವೆ ಸಲ್ಲಿಸಿದರು.

ಉಳ್ಳಾಲ ಮಂಗೇಶರಾಯರ ಮಗ ಶ್ರೀ ರಮೇಶ್ ರಾವ್ ಉಳ್ಳಾಲರು ತಮ್ಮ ತಂದೆಯನ್ನು

ಕುರಿತು ಹೀಗೆ ನೆನಪಿಸಿಕೊಳ್ಳುತ್ತಾರೆ. (ವೈಯಕ್ತಿಕ ಪತ್ರ)

"ನನ್ನ ತಂದೆಯವರು ನಾನು ಗಮನಿಸಿದಂತೆ ದೊಡ್ಡ ಶಿಸ್ತುಗಾರ. ಅವರ ಮೊದಲ ಪ್ರೀತಿ ತನ್ನ ಶಾಲೆ ಹಾಗೂ ತನ್ನ ವಿದ್ಯಾರ್ಥಿಗಳ ಕಡೆಗೆ. ದಿನವೆಲ್ಲಾ ಶಾಲೆಯಲ್ಲಿ ವಿದ್ಯಾರ್ಥಿಗಳೊಂದಿಗೇ ಕಳೆಯುತ್ತಿದ್ದದು ನನಗೆ ನೆನಪಾಗುತ್ತದೆ. 'ಗುರುಕುಲ'ದಂತಿದ್ದ ಆ ಶಾಲೆಯ 'ಅಧ್ಯಾಪಕ-ವಿದ್ಯಾರ್ಥಿ'(Teacher-trainee)ಗಳು ತಂದೆಯವರನ್ನು ಪಿತೃ ವಾತ್ಸಲ್ಯದಿಂದ ನೋಡುತ್ತಿದ್ದರು. ಸಂಕುಚಿತ ಮತಧರ್ಮ, ಜಾತಿಗಳಿಂದ ಮೀರಿದ ಉದಾರವಾದಿ ಅವರು. ಅಂತರ್ಜಾತೀಯ ವಿವಾಹ, ಅಸ್ಪೃಶತಾ ನಿವಾರಣೆಯಂತಹ ಪ್ರಗತಿಶೀಲ ಕೆಲಸಗಳೆಂದರೆ ಅವರಿಗೆ ಅಚ್ಚುಮೆಚ್ಚು. ಈ ಸಂರ್ಭದಲ್ಲಿ ನನಗೆ ಒಂದು ಘಟನೆ ನೆನಪಾಗುತ್ತದೆ. ಪಂಜೆಯವರು ಮುಖ್ಯಾಧ್ಯಾಪಕರಾಗಿದ್ದಾಗ ತಮ್ಮ ಶಾಲೆಯಲ್ಲಿ ಆಗಾಗ ವಿಧ್ಯಾರ್ಥಿ-ಅಧ್ಯಾಪಕರೆಲ್ಲರನ್ನೂ ಸೇರಿಸಿಕೊಂಡು ಸಾಮೂಹಿಕ ಭೋಜನಕೂಟವನ್ನು ಏರ್ಪಡಿಸುತ್ತಿದ್ದರು. ಅಲ್ಲಿ ವಿದ್ಯಾರ್ಥಿಗಳಾಗಿದ್ದ ಹರಿಜನ ವಿದ್ಯಾರ್ಥಿಗಳಿಗೂ ಇತರ ಮೇಲು ಜಾತಿಯ ವಿದ್ಯಾರ್ಥಿಗಳಿಗೂ ಹೃದಯ ಸಂಬಂಧ ಬೆಳಸುವುದು ಈ 'ಮಿತ್ರಭೋಜನ'ದ ಉದ್ದೇಶವಾಗಿತ್ತು. ಆದರೆ ಅಂದಿನ ಕೆಲವರಿಗೆ ಇದು ಕಿರಿಕಿರಿ ಉಂಟುಮಾಡುತ್ತಿತ್ತು. ಒಂದು ದಿನ ಇಂತಹ ಮಿತ್ರಭೋಜನದ ಸಂದರ್ಭದಲ್ಲಿ ಕೆಲವು ವಿದ್ಯಾರ್ಥಿಗಳು ಹರಿಜನ ಬಾಲಕರು ಕುಳಿತ ಸಾಲಿನಲ್ಲಿ ಕುಳಿತುಕೊಳ್ಳಲು ಇಚ್ಛೆ ಪಡದೆ ಬೇರೆ ಸಾಲುಗಳಲ್ಲಿ ಕುಳಿತರಂತೆ. ಇದನ್ನು ಗಮನಿಸಿದ ಉಳ್ಳಾಲರು ಹರಿಜನ ಬಾಲಕರ ಜತಗೇ ಊಟಕ್ಕೆ ಕುಳಿತರಂತೆ. ಆಗ ಒಬ್ಬೊಬ್ಬರೇ ಪ್ರತ್ಯೇಕ ಸಾಲು ಮುರಿದು ಎಲ್ಲರೊಂದಿಗೆ ಬೆರೆತರಂತೆ. (ಈ ಘಟನೆಯನ್ನು ದಿ. ಪಂಜೆ ರಾಯರಾಯರು 'ನನ್ನ ತಂದೆಯವರು' ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ) 'ಬಾಲಚಂದ್ರ' ಎಂಬ ಪಾಕ್ಷಿಕ ಪತ್ರಿಕೆಯನ್ನು ಕೆಲವು ವರ್ಷಗಳ ಕಾಲ ಸಂಪಾದಕರಾಗಿ ಪ್ರಕಟಿಸಿದರು. (೧೯೩೪-೩೫). ಅವರ ಬರಹಗಳ ಪ್ರಧಾನ ಗುರಿ ಪ್ರಾಥಮಿಕ ಶಾಲಾ ಬಾಲಕರು, ಅಧ್ಯಾಪಕರು ಹಾಗೂ ಪರಿಣಾಮಕಾರಿ ಬೋಧನ. ವಿದ್ಯಾರ್ಥಿಗಳ ಗ್ರಹಣಶಕ್ತಿಯನ್ನು ಹೆಚ್ಚಿಸುವಲ್ಲಿ ಅಧ್ಯಾಪಕ ಬಳಸಬೇಕಾದ ಪರಿಕರ ರೂಪಿಸುವುದೇ ಅವರ ಚಿಂತನೆಯ ಸಾರ.

ಉಳ್ಳಾಲ ಮಂಗೇಶರಾಯರು ಮಕ್ಕಳಿಗೆ ಬೇಕಾದ ಸಾಹಿತ್ಯ ರಚಕರಷ್ಟೇ ಅಲ್ಲ. ಶಿಕ್ಷಣ ಶಾಸ್ತ್ರವನ್ನು ಕುರಿತಂತೆ ಅವರು ಬರೆದ ಶಿಕ್ಷಣ (೧೯೩೨) ಒಂದು ಆಕರ ಗ್ರಂಥ. ಇಂಗ್ಲಿಷ್‌ನ 'ದಿ ಟ್ರೆಷರ್ ಆಫ್ ಹೆವನ್' ಕಾದಂಬರಿಯ ಭಾಷಾಂತರ 'ನಿಷ್ಕಾಮ ಪ್ರೇಮ'(೧೯೪೯), ಶಶಿಕಾಂತನ ಉಯಿಲು (ನಾಟಕ), ಸಮಾಜದ್ರೋಹಿ (ಕಾದಂಬರಿ), ಖಗೋಳ ವೈಚಿತ್ರ್ಯ (ವಿಜ್ಞಾನ)-ಹಿರಿಯರಿಗಾಗಿ ಉಳ್ಳಾಲರು ರಚಿಸಿದ ಪುಸ್ತಕಗಳು.

ಅಂದಿನ ಮದರಾಸು ಶಿಕ್ಷಣ ಇಲಾಖೆಯ ಡಾ. ಎ.ಜಿ.ಬೋರ್ನ್ ಅವರ ಸೂಚನೆಯಂತೆ ದಿ. ಪಂಜೆಯವರು ಅಂದಿನ ಐಗಳ ಮಠದ ಪಠ್ಯ ಕ್ರಮವನ್ನು ಬದಲಾಯಿಸಿ ಹೊಸ ಹಾದಿಯನ್ನು ರೂಪಿಸುತ್ತಿದ್ದರು. ಅವರ ಸಂಕಲ್ಪಶಕ್ತಿಗೆ ಕ್ರಿಯಾಶಕ್ತಿಯಾಗಿ ಮುನ್ನಡೆ ಸಾಧಿಸುತ್ತಿದ್ದವರು

ಅವರ ಜೊತೆಗಾರ ಉಳ್ಳಾಲ ಮಂಗೇಶರಾಯರು. ಅಂದಿನ ಅಧ್ಯಾಪಕರಲ್ಲಿ ಹೊಸ ಮಾದರಿಗಳು ಜನಪ್ರಿಯವಾಗಿರಲಿಲ್ಲ. ಆಧುನಿಕ ಶಿಕ್ಷಣ ಕ್ರಮದ ಬಹೂಪಯೋಗಿ ಗುಣವನ್ನು ತರಬೇತಿ ಶಾಲೆಯ ಅಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ಮನದಟ್ಟು ಮಾಡಿ ಆ ಮೂಲಕ ಗ್ರಾಮೀಣ ವಲಯದಲ್ಲಿ ಶಿಕ್ಷಣ ಕ್ರಮವನ್ನೇ ಬದಲಾಯಿಸಿದ ಕೀರ್ತಿ ಪಂಜೆಯವರಷ್ಟೇ ಉಳ್ಳಾಲರಿಗೂ ಸಲ್ಲಬೇಕು. ಉಳ್ಳಾಲ ಮಂಗೇಶರಾಯರು ರಾತ್ರೆ ಬಹಳ ಹೊತ್ತು ವಿದ್ಯಾರ್ಥಿಗಳ ಜೊತೆಗೇ ಇರುತ್ತಿದ್ದು, ಅವರೊಂದಿಗೆ ವಿಚಾರವಿನಿಮಯ, ಮಾದರಿ ಬೋಧನೆ, ಮಕ್ಕಳಿಂದ ಕತೆ ಹೇಳಿಸುವುದು, ತಾವು ಕತೆ ಹೇಳುವುದು, ತಾಳಮದ್ದಳೆ ಕೂಟ ನಡೆಸುವುದು- ಇತ್ಯಾದಿಗಳಲ್ಲಿ ತಲ್ಲೀನರಾಗಿರುತ್ತಿದ್ದರು. (ಶಂಕರಭಟ್ಟ ೧೯೫೭ ಪು.೧೩-೧೫) ಜಿಲ್ಲೆಗೊಂದೇ ತರಬೇತಿ ಶಾಲೆಯಾಗಿದ್ದುದರಿಂದ ದೂರದ ಕುಂದಾಪುರ, ಸುಳ್ಯಗಳಿಂದ ಬಂದ ೧೮ರಿಂದ ೨೦ ವರ್ಷ ವಯಸ್ಸಿನ ವಿದ್ಯಾರ್ಥಿಗಳು ಅಲ್ಲಿ ಪ್ರಶಿಕ್ಷಣ ಪಡೆಯುತ್ತಿದ್ದು, ಅವರು ಕಡ್ಡಾಯವಾಗಿ ತಮ್ಮ ತಮ್ಮ ಊರುಗಳಿಂದ ಅಜ್ಜಿಕತೆ, ಗಾದೆ, ಒಗಟು, ಐತಿಹ್ಯಗಳನ್ನು ಸಂಗ್ರಹ ಮಾಡಿಕೊಂಡು ಬರಬೇಕಾಗಿತ್ತು. ಈ ಸಂಗ್ರಹ ತಮ್ಮ ಬೋಧನೆಯ-ತರಬೇತಿಯ ಸಂದರ್ಭಗಳಲ್ಲಿ ಬಳಸಿಕೊಳ್ಳ ಬೇಕಾಗಿತ್ತು. 'ಸರಕಾರಿ ತರಬೇತಿ ಶಾಲೆಯಲ್ಲಿ ಹೊಸ ಚೈತನ್ಯವನ್ನು ತುಂಬಿ ಅಧ್ಯಾಪಕರನ್ನು ತರಬೇತುಗೊಳಿಸುತ್ತಿದ್ದ ಆ ಆದರ್ಶ ಯುಗದಲ್ಲಿ ಪಂಜೆಯವರು ನಾಯಕರಾದರೆ, ಉಳ್ಳಾಲರು ಉಪನಾಯಕರು. (ಉಚ್ಚಿಲ್ ೧೯೭೪,ಪು.೮೯-೯೫) ೧೯೨೦-೩೦ರ ಕಾಲಾವಧಿಯಲ್ಲಿ ಪಂಜೆಯವರ ಸೂಚನೆಯಂತೆ ಉಳ್ಳಾಲರು ಹಳ್ಳಿಹಳ್ಳಿಗಳಲ್ಲಿ ಅಧ್ಯಾಪಕರ ನೆರವಿನೊಂದಿಗೆ ಶೈಕ್ಷಣಿಕ ಸಮ್ಮೇಳನಗಳನ್ನು ಜರುಗಿಸಿದರು. ನೂತನ ಶಿಕ್ಷಣ ಕ್ರಮವನ್ನು ಪರಿಚಯಿಸುವ ಚಿಕ್ಕಪುಟ್ಟ ಪ್ರಕಟಣೆಗಳನ್ನು ತಂದರು.

ಯಕ್ಷಗಾನ ಪ್ರದರ್ಶನ, ತಾಳಮದ್ದಳೆಗಳೆಂದರೆ ವಿದ್ಯಾವಂತರು ಮೂಗು ಮುರಿಯುತ್ತಿದ್ದ ಕಾಲದಲ್ಲಿ ಉಳ್ಳಾಲ ಮಂಗೇಶರಾಯರು ಯಕ್ಷಗಾನ ಪುನರುಜ್ಜೀವನಕ್ಕೆ ಕೈಯಿಕ್ಕಿದರು. ಈ ಜನಪದ ಮಾಧ್ಯಮವನ್ನು ಶಿಕ್ಷಣದ ಪರಿಣಾಮಕಾರಿ ಸಂವಹನದಲ್ಲಿ ಬಳಸಿಕೊಳ್ಳ ಬಹುದೆನ್ನುವುದು ಅವರ ನಂಬಿಕೆಯಾಗಿತ್ತು. ಜಿಲ್ಲೆಯ ಪ್ರಸಿದ್ಧ ಯಕ್ಷಗಾನ ಕಲಾವಿದರನ್ನು, ಅರ್ಥಧಾರಿಗಳನ್ನು ಕಲೆ ಹಾಕಿ, ವಿದ್ವಾಂಸರ ಎದುರಲ್ಲಿ ತರಬೇತಿ ಶಾಲೆಯ ಅಧ್ಯಾಪಕ-ವಿದ್ಯಾರ್ಥಿಗಳ ಸಮ್ಮುಖದಲ್ಲಿ ಯಕ್ಷಗಾನ ಕೂಟಗಳನ್ನು ಜರುಗಿಸಿ, ಯಕ್ಷಗಾನದ ಬಗ್ಗೆ ಗೌರವಯುತವಾದ ಜನಾಭಿಪ್ರಾಯ ರೂಢಿಸಿದರು.

### ಬಾಲಸಾಹಿತ್ಯದ ಮಂಡಲ

ಈ ಶತಮಾನ ಆರಂಭದ ಹೊತ್ತಿಗೆ ಐಗಳ ಶಾಲೆಯ ಶಿಕ್ಷಣ ಪರಂಪರೆ ಅಳಿದು ಆಧುನಿಕ ಮೇಜು ಬೆಂಚುಗಳ ಶಿಕ್ಷಣ ನಮ್ಮಲ್ಲಿ ಮೊದಲಾಯಿತು. ಆ ನೂತನ ಶಿಕ್ಷಣ ಪದ್ಧತಿಗೆ ತಕ್ಕ ವಿಧಿವಿಧಾನಗಳನ್ನು ರೂಪಿಸುವ, ಪೂರಕ ಸಾಹಿತ್ಯವನ್ನು ನಮ್ಮ ಪರಂಪರೆಯ ಹಿನ್ನೆಲೆಯಲ್ಲಿ ದೇಶೀಯ ಭಾಷೆಗಳಲ್ಲಿ ರಚಿಸುವ ದೊಡ್ಡ ಹೊಣೆಗಾರಿಕೆ ಹೆಗಲಿಗೆ ಬಂದಿತು. ಈ

ಸಂದರ್ಭದಲ್ಲಿ ದಿ. ಪಂಜೆಯವರು ಉಳ್ಳಾಲರೊಂದಿಗೆ ಸೇರಿಕೊಂಡು ಮಂಗಳೂರಲ್ಲಿ ಬಾಲ ಸಾಹಿತ್ಯ ಮಂಡಲ(ಸ್ಥಾಪನೆ:೧೯೨೪) ಎಂಬ ಸಂಸ್ಥೆಯನ್ನು ಕಟ್ಟಿದರು. ಆಗ ಅವರ ನೆರವಿಗೆ ಬಂದವರು ಎಂ. ಬಾಬು, ಕ್ರಿಶ್ಚನ್ ಮಾಬೆನ್, ಕೆ. ಗೋಪಾಲರಾವ್ ಮತ್ತಿತರರು. ೧೯೩೪ರಿಂದ ೧೯೪೨ರತನಕ ಉಳ್ಳಾಲರೂ ಅವರ ಮಗ ಉಳ್ಳಾಲ ಸಂಜೀವರಾಯರೂ ಸಂಸ್ಥೆಯ ಆಡಳಿತ ನಿರ್ದೇಶಕರಾಗಿದ್ದುಕೊಂಡು ನೂರಾರು ಮಕ್ಕಳ ಕತೆ ಪುಸ್ತಕಗಳನ್ನು, ಪಠ್ಯ ಪುಸ್ತಕಗಳನ್ನು ಪ್ರಕಟಿಸಿದರು.

ಕನ್ನಡದ ಮಕ್ಕಳ ಕಲ್ಪನಾಶಕ್ತಿ ಅರಳುವಂತೆ, ಬುದ್ಧಿ ಬಲಿಯುವಂತೆ ಸೂಕ್ತವಾದ ಸಾಹಿತ್ಯ ರಚನೆಯಾಗಬೇಕು ಎನ್ನುವುದು 'ಬಾಲಸಾಹಿತ್ಯ ಮಂಡಲ'ದ ಉದ್ದೇಶವಾಗಿತ್ತು. ಶಿಕ್ಷಣದಲ್ಲಿ ಕತೆಗಳಿಗೆ ವಿಶೇಷವಾದ ಸ್ಥಾನವಿದೆ ಎಂಬ ನಂಬಿಕೆ ಅವರದು. ಹಕ್ಕಿಗಳಂತೆ ಗರಿಕೆದರಿ ಸ್ವಚ್ಛಂದ ವಾಗಿ ವಿಹರಿಸುವ ಮಕ್ಕಳ ಮನಸ್ಸಿಗೆ ಕತೆಗಳು ಖುಷಿಯನ್ನೂ ಆಲೋಚನೆಗೆ ಖಚಿತತೆಯನ್ನೂ ತರುತ್ತವೆ ಎಂದು ನಂಬಿದ ಅವರು ತರಬೇತಿ ಶಾಲೆಯ ತನ್ನ ವಿದ್ಯಾರ್ಥಿಗಳಿಗೆ ಹಳ್ಳಿಯ ಕತೆಗಳ ಸಂಗ್ರಹ ಕಡ್ಡಾಯಗೊಳಿಸಿದರು. ಅವರು ತಂದ ಕತೆಗಳನ್ನು ತಿದ್ದಿ ತೀಡಿ ನೂರಾರು ಮಕ್ಕಳ ಪುಸ್ತಕಗಳನ್ನು ಪ್ರಕಟಿಸಿದರು. 'ಮಕ್ಕಳ ಕತೆಗಳು' ಎಂಬ ಸರಣಿಯಲ್ಲಿ ಪ್ರಕಟವಾದ ಹಲವಾರು ಮಕ್ಕಳ ಕತೆ ಪುಸ್ತಕಗಳೆಲ್ಲವೂ ಪಂಜೆಯವರಿಂದ ರಚಿತವಾದವು ಎಂಬುದು ಜನಜನಿತವಾಗಿದೆ, ಆದರೆ ಆ ಸರಣಿಯ ಅನೇಕ ಪುಸ್ತಕಗಳನ್ನು ಯಾರು ಬರೆದರೆಂಬ ಬಗ್ಗೆ ಹೆಸರೇ ಇಲ್ಲ. ಬಾಯಿ ಹೇಳಿಕೆ ಪ್ರಕಾರ ಮಕ್ಕಳ ಕತೆಗಳ ರಚನೆಯಲ್ಲಿ ಪಂಜೆಯವರ ಹಾಗೂ ಉಳ್ಳಾಲರ ಇಬ್ಬರ ಕೊಡುಗೆಯೂ ಉಂಟು. ಏಕಕಾಲದಲ್ಲಿ, ಜೊತೆಯಾಗಿಯೇ ಒಂದೇ ಶಾಲೆಯಲ್ಲಿ ಒಂದೇ ಮನೋಧರ್ಮದ ಇಬ್ಬರು ವಿದ್ಯಾರ್ಥಿಗಳನ್ನು ಲಕ್ಷ್ಯವಾಗಿರಿಸಿಕೊಂಡು ಇಂತಹ ಕತೆಗಳನ್ನು ರೂಪಿಸಿರಬೇಕು. 'ಕೊಕ್ಕೊಕ್ಕೋ ಕೋಳಿ'(೧೯೨೪), 'ಅಂಗಳ ದುಗ್ಗು' (?), 'ಹೇನು ಸತ್ತು ಕಾಗೆ ಬಡವಾಯಿತು'(೧೯೩೨), 'ತಟಪಟ ಹನಿಯಪ್ಪ'(ಅನಾಮಧೇಯ ೧೯೩೫), 'ಜೋಡು ನಕ್ಷತ್ರ'(ಅನಾಮಧೇಯ?) 'ಮಾತಾಡೋ ರಾಮಪ್ಪ' (ಅನಾಮಧೇಯ ೧೯೨೪)- ಈ ಪುಸ್ತಕಗಳನ್ನು ಅವಲೋಕಿಸಿದಾಗ ಅಲ್ಲಿನ ಶೈಲಿಕ ವ್ಯತ್ಯಾಸ ಗೋಚರಿಸುತ್ತದೆ. ಅಷ್ಟೇ ಅಲ್ಲದೆ ದಿ. ಉಳ್ಳಾಲರ ಮಗ ಶ್ರಿ ರಮೇಶರಾವ್ ಬರೆದ ಪತ್ರದಲ್ಲಿ (ದಿ. ೨೯-೯-೧೯೯೦) 'ಮಾತಾಡೋ ರಾಮಪ್ಪ' 'ತಟಪಟ ಹನಿಯಪ್ಪ' 'ಗೋವಿಂದಾ ಗೋವಿಂದಾ' 'ಜೋಡು ನಕ್ಷತ್ರ' 'ಅಜ್ಜ ಸಾಕಿದ ಮಗು', 'ಬಿಟ್ಟೀ ಬಸವಯ್ಯ'-ಇವಿಷ್ಟು ನನ್ನ ತಂದೆ ಬರೆದುವುಗಳೆಂದು ಬರೆಯುತ್ತಾರೆ. ಬಹುಶಃ ಬಾಲಸಾಹಿತ್ಯ ಮಂಡಲದ 'ಮಕ್ಕಳ ಕತೆ'ಗಳ ಸರಣಿಯಲ್ಲಿ ಬಹುಪಾಲು ಕತೆಗಳ ರಚನೆ ಪಂಜೆಯವರವಾದರೂ ಅವರ ಸಹಾಯಕ ಉಳ್ಳಾಲ ಮಂಗೇಶರಾಯರು ಬರೆದವುಗಳೂ ಇರಬೇಕು. ಇದಕ್ಕೆ ಆಧಾರವೆನ್ನುವಂತೆ ೧೯೦೦-೧೯೦೩ 'ಸುವಾಸಿನಿ'ಯಲ್ಲಿ ಪ್ರಕಟವಾದ 'ದುರ್ಗಾವತಿ' 'ವೀರಮತಿ' 'ಶೈಲಿನಿ' 'ಪ್ರಥುಲಾ' ೧೯೦೩ರ 'ಸುವಾಸಿನಿ'ಯಲ್ಲಿ ಪ್ರಕಟವಾದ 'ದುರ್ಗಾವತಿ', 'ವೀರಮತಿ' 'ಶೈಲಿನಿ' ಪ್ರಥುಲಾ ಕತೆಗಳಲ್ಲಿ ಉ. ಮಂಗೇಶ್ ರಾವ್ ಹಾಗೂ ಪಂಜೆ ಮಂಗೇಶರಾವ್ ಎಂದಿದೆ. ಇದರಿಂದ

ಉಳ್ಳಾಲರೂ, ಪಂಜೆಯವರು ಜಂಟಿಯಾಗಿ ಸಾಹಿತ್ಯ ರಚನೆ ಮಾಡುತ್ತಿದ್ದರೆನ್ನುವುದು ಸ್ಪಷ್ಟ.

ಉಳ್ಳಾಲರು ಮಕ್ಕಳ ಮನೋಭೂಮಿಕೆಯನ್ನು ಹದಗೊಳಿಸುವಲ್ಲಿ ಪಠ್ಯಪುಸ್ತಕ ರಚಕರಾಗಿ ಗೌರವದ ಸ್ಥಾನ ಪಡೆಯುತ್ತಾರೆ. ಒಂದರಿಂದ ಎಂಟನೆಯ ತರಗತಿಯ ತನಕ 'ಹೊಸಗನ್ನಡ ಪಾಠಶಾಲೆ' ಎಂಬ ಹೆಸರಿನ ಪಠ್ಯ ಪುಸ್ತಕಗಳನ್ನು ಅವರು ರಚಿಸಿದ್ದಾರೆ. ಅವರ ಬಾಲಸಾಹಿತ್ಯ ನಿರ್ಮಾಣ ಸಾಮರ್ಥ್ಯವು ಗೋಚರವಾಗುವುದು ಈ ಪಠ್ಯಪುಸ್ತಕಗಳಲ್ಲಿ. ಆರರವರೆಗಿನ ಪಠ್ಯ ಪುಸ್ತಕಗಳ ಗದ್ಯ ಭಾಗವನ್ನಂತೂ ಉಳ್ಳಾಲರು ತಾವೇ ಬರೆದರು. ಪದ್ಯ ಭಾಗಗಳಲ್ಲಿ ಪಂಜೆ, ಜಿ.ಎನ್.ಲಕ್ಷ್ಮಣ ಪೈ. ಎಸ್. ಶೇಷಗಿರಿ ಪೈ. 'ರಾಮಂ' ಮುಂತಾದವರ ಕವನಗಳನ್ನು ಬಳಸಿಕೊಂಡರು. ಕನ್ನಡ ಭಾಷಿಕ ಪಠ್ಯವಾದರು ಮಕ್ಕಳಲ್ಲಿ ಸಾಹಿತ್ಯಾಸಕ್ತಿ, ಪ್ರವಾಸಾಸಕ್ತಿ ಕುದುರಿಸುವುದು, ಗ್ರಾಮೀಣ ಕರಕುಶಲ ವೃತ್ತಿಗಳ ಬಗೆಗೆ ಮಾಹಿತಿ ಒದಗಿಸುವುದು, ಊರ ಹಬ್ಬ, ಜಾತ್ರೆ, ಕಂಬಳ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ವಿದ್ಯಾರ್ಥಿಗಳ ಗಮನ ಸೆಳೆಯುವುದು, ವಿಜ್ಞಾನ, ಸಿವಿಕ್ಸ್‌ಗಳ ಬಗೆಗೆ ವಿವರ ಒದಗಿಸುವುದು, ಅವರ ಉದ್ದೇಶವಾಗಿತ್ತು. ವಿಷಯ ಜ್ಞಾನ ಹಾಗೂ ಭಾಷಾ ಜ್ಞಾನ ಎರಡರ ಸಾಮರ್ಥ್ಯ ಹೆಚ್ಚಳಕ್ಕೆ ಅವರ ಪಠ್ಯಗಳು ಪ್ರಯೋಗಶಾಲೆಯಂತಿವೆ.

ಇಂದಿನ ಹಲವು ಭಾಷಾ ಪಠ್ಯಗಳು ಮಕ್ಕಳಿಗೆ ಬರಿಯ ಮಾಹಿತಿ ಒದಿಗಿಸುವ 'ಉಗ್ರಾಣ' ದಂತಿರುವುದನ್ನು ಗಮನಿಸಿಬೇಕು. 'ಮರುಳ ಹಾಡು' ಎಂದು ಅವರು ಕರೆದಿರುವ ಹಾಡಿನಲ್ಲಿ ಬಾಲಕರಿಗೆ ಮನಸ್ಸಿಗೆ ಸಂತೋಷ ತರುವ, ಉಲ್ಲಾಸ ಮೂಡಿಸುವ ಅಂಶಕ್ಕೆ ಹೆಚ್ಚಿನ ಒತ್ತು ನೀಡಿದಂತೆ ಕಾಣುತ್ತದೆ. ಮಾದರಿಗಾಗಿ 'ಅಂಬೊಡೆ' ಎನ್ನುವ ಕವಿತೆಯನ್ನು ನೋಡಬಹುದು.

ಉರುಟುರುಟಂಬೊಡೆ ತಿನ್ನಲು ರುಚಿ ಇದೆ
ದೊರಗಿನ ಅಂಬೊಡೆ ಉರುಳಲು ಸರಿಯಿದೆ
ಹಾರುತ ಬನ್ನಿರಿ, ಓಡುತ ಬನ್ನಿರಿ
ಚೀರುತ ಬನ್ನಿರಿ, ಮಾರುದ್ದ ಕಾಲಿಡಿ
ಅಜ್ಜನ ಅಂಗಡಿ ಬಿಸಿ ಬಿಸಿ ಅಂಬೊಡೆ
ಮಜ್ಜಿಗೆ ಬೆರೆಸಿದ ಈ ತೈರಂಬೊಡೆ (೧೯೩೬)

ಸೂರ್ಯ, ಚಂದ್ರ ನಕ್ಷತ್ರಗಳ ಮೂಲಕ ಪ್ರಕೃತಿಯಲ್ಲಾಗುವ ಬದಲಾವಣೆಗಳನ್ನು ಹೇಳಲು ಮನೆಯೊಳಗೆ ಬಾಲಕರು ಕಾಣುವ ದೈನಂದಿನ ಚಿತ್ರಗಳನ್ನೇ ಬಳಸಿಕೊಳ್ಳುವ ಬಗೆ ಹೀಗಿದೆ:

ಸೂರ್ಯನು ಬಾನಿಗೆ ಬಂದರೆ ಸಾಕು
ಚಂದ್ರನು ಮರೆಯಲಿ ಅಡಗುವನು;
ಭಾವನು ಊರಿಗೆ ಬಂದರೆ ಸಾಕು
ಅಕ್ಕನು ಮರೆಯಲಿ ಅಡಗುವಳು (೧೯೩೬)

ಅಧ್ಯಾಪಕ ಉಳ್ಳಾಲರು ತಮ್ಮ ಹೃದಯದಲ್ಲಿ 'ನಿತ್ಯ ಕಿಶೋರತೆ'ಯನ್ನು ಸದಾ ಜಾಗೃತವಾಗಿಸಿ ಕೊಂಡುದರ ಫಲವಾಗಿ ಅವರಿಂದ ಇಂತಹ ಬಾಲಗೀತೆಗಳು ಹುಟ್ಟಿಕೊಂಡಿರಬೇಕು. ಮಕ್ಕಳ

ಮನಸ್ಸಿನ ಹದವನ್ನು ಚೆನ್ನಾಗಿ ಅರಿತುಕೊಂಡು ಕಿವಿ, ಕಣ್ಣುಗಳ ಮೂಲಕ ಗ್ರಹಣ ಶಕ್ತಿಯನ್ನು ಎಚ್ಚರವಾಗಿರಿಸಿಕೊಂಡು ಸರಳವಾದ ಭಾಷೆಯಲ್ಲಿ 'ಬಿಂಬ'ವನ್ನು ತಮ್ಮ ಹಾಡುಗಳ ಮೂಲಕ ನಿರ್ಮಿಸುತ್ತಿದ್ದರು. ಪಾಠದ ಕೊನೆಯಲ್ಲಿ ವಿಷಯಕ್ಕೆ ಸಂಬಂಧಿಸಿದ (ಕೆಲವೊಮ್ಮೆ ಸಂಬಂಧಿಸದ) ಗಾದೆಯ ಮಾತುಗಳನ್ನು, ಒಗಟುಗಳನ್ನು ಕೊಡುವ ಕ್ರಮ ಬಾಲಕರ ಆಲೋಚನಾಶಕ್ತಿಯ ಬೆಳೆವಿನ ದೃಷ್ಟಿಯಿಂದ ಸಹಕಾರಿ. ಸಂಭಾಷಣಾ ರೂಪದ ಗದ್ಯ ಪಾಠಗಳು ಬರಿಯ ವಿಷಯ ನಿರೂಪಣೆಯಲ್ಲೇ ವಿರಮಿಸಿದೆ ನಿರೂಪಣೆಯ ಸೊಗಸಿಗಾಗಿ, ಕ್ರಿಯಾತ್ಮಕತೆಯ ದೃಷ್ಟಿಯಿಂದ ಗಮನಿಸಬೇಕು. ಒಗಟು, ಗಾದೆಗಳ ಹಿಂದಿರುವ ಕತೆಗಳನ್ನು ಪಠ್ಯಪುಸ್ತಕಗಳಲ್ಲಿ ಬಳಸುವ ಸಂಪ್ರದಾಯವನ್ನು ಉಳ್ಳಾಲರೇ ಆರಂಭಿಸಿದರು. 'ಹೊಸಗನ್ನಡ ಎರಡನೇ ಪುಸ್ತಕ'ದ 'ಉದ್ದ ಮರದ ಮೇಲೆ ಕೆಂಪು ಸನ್ಯಾಸಿ'-ಅಂತಹ ಒಂದು ಒಳ್ಳೆಯ ಒಗಟು ಕತೆ.

ಉಳ್ಳಾಲರು ತಮ್ಮ ಪಠ್ಯಪುಸ್ತಕಗಳಲ್ಲಿ ಬಳಸಿದ ಗದ್ಯ ತುಂಬ ಅನುಕರಣೀಯ. ತರಗತಿಯ ಶ್ರೇಣಿಗನುಸಾರ ವಸ್ತು, ಭಾಷೆಯ ಪ್ರೌಢತೆ ಏರೇರುತ್ತಾ ಹೋಗುತ್ತದೆ. ಎಲ್ಲೆಲ್ಲೂ ಅಲಂಕೃತ ಭಾಷೆಗೆ ಆತುಕೊಳ್ಳುವುದಿಲ್ಲ. ಸರಳತೆ, ಸ್ಪಷ್ಟತೆಗೆ ಹೆಚ್ಚಿನ ಒತ್ತು. ಮಕ್ಕಳು ನಿತ್ಯ ಕಾಣುವ ವಸ್ತು, ವಿಷಯಗಳಿಗೆ ಪಠ್ಯದಲ್ಲಿ ಮಹತ್ವನೀಡಿ ಅವುಗಳನ್ನು ಅವರು ನಿತ್ಯ ಕೇಳುವ ಭಾಷೆಯಲ್ಲೇ ಹೇಳಲು ಪ್ರಯತ್ನಿಸುತ್ತಾರೆ. ದ.ಕನ್ನಡ ಜಿಲ್ಲೆಯ ಗ್ರಾಂಥಿಕ ರೂಪದ ಆಡುಮಾತನ್ನೇ ಪಠ್ಯಗಳಲ್ಲಿ ಬಳಸಿದರೂ ಅನೇಕ ನಿತ್ಯ ಬಳಕೆಯ ನುಡಿಗಟ್ಟುಗಳನ್ನು ಬಳಸುವ ಮೂಲಕ ಭಾಷೆಯ ಸಾಮರ್ಥ್ಯ ಹೆಚ್ಚಿಸಿದ್ದಾರೆ.

ಬಾಲ ಸಾಹಿತ್ಯದ ಕ್ರಿಯಾತ್ಮಕತೆಯ ಬಗೆಗೆ ಉಳ್ಳಾಲರು ತಮ್ಮ ಪಠ್ಯಪುಸ್ತಕಗಳ ಮೊದಲಿಗೆ 'ಉಪಾಧ್ಯಾಯರಿಗೆ ಸೂಚನೆಗಳು' ಭಾಗದಲ್ಲಿ ಮೌಲಿಕ ವಿಚಾರಗಳನ್ನು ನಿರೂಪಿಸುತ್ತಾರೆ. ಒಂದು, ಎರಡನೆಯ ತರಗತಿಯ ಮಕ್ಕಳ 'ಶಿಶುಗೀತೆ' ಚರಣಗಳ ಅರ್ಥ ಮಕ್ಕಳಿಗೆ ಕಲಿಸ ಬೇಕಾಗಿಲ್ಲ. ಬಾಯಿಪಾಠ ಮಾಡಿಸಿದರೆ ಸಾಕು. ಅವು ಅವರಿಗೆ ಮುದನೀಡುವ ಸಲುವಾಗಿ ಇರುವವುಗಳು. ಆರೋಗ್ಯದ ವಿಷಯಗಳನ್ನು ಮಂದಟ್ಟು ಮಾಡಲು ಕತೆಯ ಮಾಧ್ಯಮವನ್ನು ಬಳಸಿಕೊಳ್ಳುವುದು ಅವರ ಒಂದು ವಿಶಿಷ್ಟತೆ, ಸನ್ನಡತೆಯನ್ನು ಕುರಿತು ನೇರವಾಗಿ ನಿರೂಪಿಸದೆ ಸ್ವಾರಸ್ಯಕರ ಸಂಭಾಷಣೆಯ ಅಥವಾ ಕತೆಯ ಲೇಪನದೊಂದಿಗೆ ನೀಡುವ ಪ್ರಯತ್ನ ತಮ್ಮ ಪಠ್ಯಗಳಲ್ಲಿ ಮಾಡಿದ್ದಾರೆ. ಉದಾ: 'ಹೊತ್ತಿಗೆ ಬಾರದ ಹೊನ್ನಪ್ಪ' 'ನಂಬಿಕೆಯ ಆಳುಗಳು' (ಹೊಸ ಕನ್ನಡ ಎರಡನೆಯ ಪುಸ್ತಕ) ಕತೆಗಳನ್ನು ಮಕ್ಕಳಿಗೆ ಓದಿ ಹೇಳಿದರೆ ಅಥವಾ ನಿರೂಪಿಸಿದರೆ ಸಾಲದು, ನಟನೆಯ ಮೂಲಕ ಅಭ್ಯಾಸ ಮಾಡಿಸಬೇಕು ಎನ್ನುವುದು ಆಧುನಿಕ ಪ್ರದರ್ಶಕ ಸಿದ್ಧಾಂತದ ತತ್ತ್ವವನ್ನು ಸರಿಹೋಗುತ್ತದೆ. ಪ್ರಕಾರವೊಂದು ಪೂರ್ಣಾಭಿವ್ಯಕ್ತಿಯ ಸಾಧಿಸುವುದು ಬರಿಯ ಶಾಬ್ದಿಕ ನಿರೂಪಣೆಯಲ್ಲಿ ಅಲ್ಲ. ಪ್ರದರ್ಶನದಲ್ಲಿ ಎನ್ನುವುದರ ರಹಸ್ಯವನ್ನು ಅವರು ಅರಿತಿದ್ದಂತೆ ಕಾಣುತ್ತದೆ. ಬಾಲಕರಿಗೆ ಸಂಬಂಧಿಸಿದಂತೆ ಉಳ್ಳಾಲರ ಆಲೋಚನೆಯ ಹರಹು ಭಾಷೆ ಸಾಹಿತ್ಯಕ್ಕೆ ಮಾತ್ರ ಸೀಮಿತವಲ್ಲ. ಇತಿಹಾಸ ಗಣಿತವನ್ನು

ಕುರಿತೂ ಬರೆದಿದ್ದರೆ. ೧೯೩೬-೩೮ರ ಕಾಲಾವಧಿಯಲ್ಲಿ 'ಬಾಲಸಾಹಿತ್ಯ ಮಂಡಲ'ದ ಮೂಲಕ ೫ ರಿಂದ ೮ನೇ ತರಗತಿಯವರೆಗೆ 'ನೂತನ ಬಾಲಗಣಿತ' ಎಂಬ ಪಠ್ಯಪುಸ್ತಕಗಳನ್ನು ಬರೆದಿದ್ದಾರೆ. ಯಾವತ್ತೂ ಅವರ ಕಳಕಳಿ ಗ್ರಾಮೀಣ ಮೂಲದ ವಿದ್ಯಾರ್ಥಿಗಳ ಕಡೆಗೆ. ಅವರನ್ನೇ ಮೂಲ ಉದ್ದೇಶವಾಗಿರಿಸಿಕೊಂಡು ಈ ಗಣಿತ ಪಠ್ಯಗಳನ್ನು ರಚಿಸಲಾಗಿರುವುದಾಗಿ ಬರೆದಿದ್ದಾರೆ.

ಹಿರಿಯರಾದ ಪಂಜೆಯವರ ಸಹಯೋಗದಲ್ಲಿ ಆಧುನಿಕ ಶಿಕ್ಷಣದ ಹೊಳಹನ್ನು ಅಧ್ಯಾಪಕ ವಿದ್ಯಾರ್ಥಿಗಳಿಗೆ ತೋರಿ, ಸಹಕಾರಿ ತತ್ತ್ವವನ್ನು ಜನಪ್ರಿಯಗೊಳಿಸಿ, 'ಕನ್ನಡ ಸಹಕಾರಿ', 'ಬಾಲಚಂದ್ರ' ಪತ್ರಿಕೆಗಳಿಗೆ ಸಂಪಾದಕರಾಗಿ, ಎಲ್ಲಕ್ಕಿಂತ ಮೇಲಾಗಿ ಪಂಜೆಯವರ ಜೊತೆ 'ಬಾಲಸಾಹಿತ್ಯ ಮಂಡಲ'ವೆಂಬ ಪ್ರಕಾಶನ ಸಂಘಟನೆಯನ್ನು ಕಟ್ಟಿ, ಮಕ್ಕಳ ಸಾಹಿತ್ಯದ ಕ್ರಿಯಾತ್ಮಕತೆಯನ್ನು ಅಧ್ಯಾಪಕರಿಗೆ ಬೋಧಿಸಿ, ಅವರಿಂದ ಕತೆ ಬರೆಯಿಸಿ, ತಾವೂ ಬರೆದು ಪ್ರಾಥಮಿಕ ಶಾಲೆಗೆ ಗಣಿತ ಪಠ್ಯ ರಚಿಸಿ, ಮನೆ, ಮನೆ ಮಂದಿಗಿಂತಲೂ ಹೆಚ್ಚಾಗಿ ಶಾಲಾ ಮಕ್ಕಳನ್ನು ಪ್ರೀತಿಸಿ ಅವರೊಂದಿಗೆ ಒಂದಾಗಿ ಬದುಕಿದವರು ಉಳ್ಳಾಲ ಮಂಗೇಶರಾಯರು.

**ಆಕರ ಸೂಚಿ**


ಉಳ್ಳಾಲ ಮಂಗೇಶರಾವ್ ೧೯೩೪ ಹೊಸಗನ್ನಡ ಪಾಠಮಾಲೆ. ಒಂದರಿಂದ ೮ನೇ ತರಗತಿವರೆಗೆ, ಪ್ರ: ಬಾಲ ಸಾಹಿತ್ಯ ಮಂಡಲ, ಮಂಗಳೂರು.

———— ೧೯೩೬-೩೮ 'ನೂತನ ಬಾಲಗಣಿತ', ೫ ರಿಂದ ೮ನೇ ತರಗತಿ ತನಕದ ವಿದ್ಯಾರ್ಥಿಗಳಿಗೆ ಗಣಿತ ಪಠ್ಯ. ಪ್ರ: ಬಾಲಸಾಹಿತ್ಯ ಮಂಡಲ, ಮಂಗಳೂರು.

ರಾಮಚಂದ್ರ, ಉಚ್ಚಿಲ್ ೧೯೭೪ 'ಪಂಜೆ ಮತ್ತು ಅವರ ಸಮಕಾಲೀನರು' 'ತೆಂಕಣಗಾಳಿ'ಯಲ್ಲಿ ಪ್ರಕಟವಾದ ಲೇಖನ, ಸಂ.ಗುಂಡ್ಮಿ ಚಂದ್ರಶೇಖರ ಐತಾಳರು ಪಂಜೆ ಶತಮಾನೋತ್ಸವ ಸಂಸ್ಮರಣ ಸಂಚಿಕೆ, ಮಂಗಳೂರು.

ರಮೇಶ್ ರಾವ್ ಉಳ್ಳಾಲ ೧೯೯೦ ವೈಯಕ್ತಿಕ ಪತ್ರ, ದಿ. ೧೯-೯-೯೦ ಮತ್ತು ೧೧-೧೦-೯೦ (ವಿಳಾಸ- ಬಿ೨, ದತ್ತಾಪ್ರಸಾದ, ೧೦ನೆಯ ಮೈನ್, ಮಲ್ಲೇಶ್ವರಂ, ಬೆಂಗಳೂರು-೫೬೦೦೦೩).

ಉಳ್ಳಾಲ ಮಂಗೇಶರಾವ್ 'ಕನ್ನಡಕ್ಕಾಗಿ ದುಡಿದವರು' ಪುಸ್ತಕದಲ್ಲಿ ಪ್ರಕಟಿತ, ಕನ್ನಡ ಪ್ರಪಂಚ ಪ್ರಕಾಶನ, ಮಂಗಳೂರು-೨


(ಕೃತಜ್ಞತೆ: ಈ ಲೇಖನ ಬರೆಯುವಲ್ಲಿ ಆಕರಗಳನ್ನು ಒದಗಿಸಿ ತಮ್ಮ ನೆನಪುಗಳನ್ನು ಬರೆದು ಕಳುಹಿಸಿದ ಉಳ್ಳಾಲ ಮಂಗೇಶರಾಯರ ಮಕ್ಕಳಾದ ಶ್ರೀ ಆರ್.ಎರ್. ಉಳ್ಳಾಲ್, ಸುಮಿತ್ರರಾವ್ ಉಳ್ಳಾಲ್ ಇವರಿಗೆ, ಮಾಹಿತಿ ನೀಡಿ ಉಪಕರಿಸಿದ ಶ್ರೀ ಎಂ. ವಾಸುದೇವರಾವ್ ಸುರತ್ಕಲ್, ಶ್ರೀ ಗೋಪಿನಾಥ ಗುಲ್ವಾಡಿ. ಶ್ರೀಮತಿ ಲೀಲಾಭಟ್ ಪುತ್ತೂರು, ಶ್ರೀ ಅಮೃತಸೋಮೇಶ್ವರ, ಶ್ರೀ ಅಮ್ಮೆಂಬಳ ಶಂಕರನಾರಾಯಣ ನಾವಡ ಇವರಿಗೆ, 'ಕನ್ನಡ ಸಹಕಾರಿ' ಪತ್ರಿಕೆಯನ್ನು ತಿರುವಿ ಹಾಕಿ ಸಹಕರಿಸಿದ ಶ್ರೀ ಸುರೇಂದ್ರ ಶೆಟ್ಟಿ, ತೆಕ್ಕೆಟ್ಟೆ ಇವರಿಗೆ ನನ್ನ ನೆನಕೆಗಳು)

ಹೊಳಹು

# ಕುವೆಂಪು ಅವರನ್ನು ಓದುವ ಹೊಸಹಾದಿ

● ಡಿ.ಆರ್. ನಾಗರಾಜ

ಪುಟ್ಟಪ್ಪನವರ ಕವಿತೆಯ ಪ್ರಶ್ನೆ ವಿಮರ್ಶೆ ಮಟ್ಟಿಗೆ ಏನು ಅಂತಂದ್ರೆ, ಅವರಲ್ಲಿ ಯಾವುದೇ ರೂಪಕಗಳು ಬಂದಾಗ ಅದನ್ನು ನಾವು ಇನ್ನೊಂದು ಅರ್ಥದಲ್ಲಿ ಭಾಷಾಂತರಿಸಿಕೊಳ್ಳಬೇಕು. ಇಲ್ಲದಿದ್ರೆ ಪುಟ್ಟಪ್ಪನವರು ಬಹಳ ಸೀಮಿತವಾಗಿ ಕಾಣ್ತಾರೆ; ನಾವು ಓದುವ ಕ್ರಮಗಳನ್ನೇ ತೀವ್ರವಾಗಿ ಬದಲಾಯಿಸುವ ಅನಿವಾರ್ಯತೆ ಇದೆ. ಕವಿತೆಯಲ್ಲಿ ಸಂಭವಿಸುವ ರೂಪಕ ಭಾಷಾಂತರ ಯಾಕೆ ಬೇಡುತ್ತೆ? ಅವರ ಕವಿತೆಯ ಭಾಷೆ ಎಂಥದ್ದು? ಒಂದು ತಾತ್ವಿಕ ಪ್ರಮೇಯವನ್ನೂ ಇಟ್ಟು ಮುಂದಕ್ಕೆ ಹೋಗೋದಾದರೆ, ಎಲ್ಲ ಶೈಲಿಯೂ ಒಂದು ಕವಿತೆಯಲ್ಲಿ ಸ್ಮೃತಿ ಸಂಚಯ ಮಾಡಿರುತ್ತೆ. ಎಲ್ಲಾ ಶೈಲಿಯ ಸ್ಮೃತಿ ಸಂಚಯ ಅಂತ ಯಾಕೆ ಹೇಳಿದೆ ಅಂದ್ರೆ ಒಬ್ಬ ಕವಿಯನ್ನ ಓದುವಾಗ, ಅವನ ಶೈಲಿ ಅನೇಕ ಶೈಲಿಸ್ಮೃತಿಗಳನ್ನು ನಿಮ್ಮ ಗಮನಕ್ಕೆ ತಂದು ಕೊಡ್ತದೆ. ಜಿ.ಎಸ್.ಎಸ್. ಹೇಳಿದ್ದು ಒಂದು ಮಾತು ನಿಜ; 'ನಾವು ಏನೇ ಇಲ್ಲ ಅಂತ ಹೇಳಿದ್ರೂ, ಪುಟ್ಟಪ್ಪನೋರ ಕವಿತೆಯ ಬಗೆಗೆ ಬಂದ ಅನೇಕ ವಿರೋಧಗಳು, ತಮ್ಮ ಎಲ್ಲಾ ನಿಶಿತತೆಯ ನಡುವೆ, ಕನ್ನಡ ಕಾವ್ಯ ಪರಂಪರೆಯಲ್ಲಿ ಪುಟ್ಟಪ್ಪನೋರು ಇಟ್ಟು ನೋಡದೆ ಇರೋದಿಂದ್ರ ಬಂದಂಥವು ಅಂತ ಅಂದ್ರೆ ಪುಟ್ಟಪ್ಪನೋರು ಹುಂಬತನದಿಂದ ಸಂಸ್ಕೃತವನ್ನ ಬಳಸುತ್ತಾರೆ. ಅನೇಕ ಸಾರಿ ಇದು ನಿಜ. ಅವರ ಮನೆಗೆ ಕಾರು ಬಂದಾಗ ಅದನ್ನೊಂದು 'ದೇವತೆಗಳ ರಥ' ಅಂತ ಬರೀತಾರೆ, 'ದೊಡ್ಡ ರಥ' ಅಂತ ಬರೀತಾರೆ 'ಲೋಹಕಾಯ ಅಂತ' ಬರೀತಾರೆ. ಬರೀ ಸಂಸ್ಕೃತ ಪದಗಳೇ ಆಡಿದರೆ ಅದೊಂದು ಆರ್ಡಿನರಿ ಕಾರು. ಅಂದರೆ ನವೋದಯದ ಒಟ್ಟು ಸ್ವರೂಪದೊಳಗೇ ಇದ್ದ ಸಂಗತಿ ಅದು. ಪುತಿನಾನೂ ಅದನ್ನು ಮಾಡ್ತಾರೆ 'ಯದುಗಿರಿಯ ಮೌನದಿಂದ'ದೊಳಗೆ ಬರೀತಾ "ದಧಿಭಾಂಡವ ಹೊತ್ತೊಯ್ವನೋ ಸಾರವ ಗೊಲ್ಲತಿಯರ ನಡೆಮಾತಿನೊಳು" ಅಂತ ಬರೀತಾರೆ. ಅದನ್ನು ಓದುವ ನಮಗ್ಯಾರಿಗಾದರೂ ಹೊಳೆಯುತ್ತೆ, ಈ ಗೊಲ್ಲ ಹೆಂಗಸರಿಗೆ ದಧಿಭಾಂಡ ಹೋಲಿಸಬಾರದು. ಇದರ ಭಾರ ಜಾಸ್ತಿಯಾಗೋಗಿದೆ ಅಂತ. ಸೋ, ಈ ಬಗೆಯ ಒಂದು ಸಂಸ್ಕೃತ ಭೂಯಿಷ್ಠತೆ ಅನ್ನೋದು ಕಾಣುತ್ತೆ ಪುಟ್ಟಪ್ಪನೋರಲ್ಲಿ, ನಿಜ, ಆದರೆ ಇದು ಪುಟ್ಟಪ್ಪನೋರ ಅತ್ಯುತ್ತಮ ಪದ್ಯಗಳಂತೆ

ಬೇಂದ್ರೆಯವರಲ್ಲೂ ಕಾಣುತ್ತೆ ನಮಗೆ. ಆದರೆ ಪುಟ್ಟಪ್ಪನೋರ ಅತ್ಯುತ್ತಮ ಕವಿತೆಗಳಲ್ಲಿ ಹೀಗೆ ಈ ಭಾಷಾಂತರವಾಗುವ ಪ್ರಕ್ರಿಯೆಯಿಂದ, ನಮಗೆ ಅವರ ಭಾಷೆಯ ಸಮಸ್ಯೆ ಅನ್ನೋದು ಅದು ಹರಿಹರನ ಸಮಸ್ಯೆ ಆಗಿ ಕಾಣೋಕೆ ಶುರು ಆಗುತ್ತೆ; ಅದು ಲಕ್ಷ್ಮೀಶನ ಸಮಸ್ಯೆ ಆಗಿ ಕಾಣೋಕೆ ಶುರು ಆಗುತ್ತೆ; ಅಂದರೆ ಪುಟ್ಟಪ್ಪನವರ ಶೈಲಿಯ ಸ್ಮೃತಿಸಂಚಯ ನಮ್ಮನ್ನ ಲಕ್ಷ್ಮೀಶನ ಹತ್ತಿರ ಕರಕೊಂಡು ಹೋಗುತ್ತೆ; ನಮ್ಮನ್ನ ಹರಿಹರನತ್ರ ಕರಕೊಂಡು ಹೋಗುತ್ತೆ.

ಸೋ ಪುಟ್ಟಪ್ಪನವರ ಶೈಲಿಯ ಹಿಂದೆ ಹರಿಹರ ಮತ್ತು ಲಕ್ಷ್ಮೀಶರ ಶೈಲಿಯ ಸ್ಮೃತಿ ಅನ್ನೋದು, ಅವರ ಶೈಲಿಯ ಸಾಮ್ರಾಜ್ಯ ಅನ್ನೋದು ಇದೆ. ಇಷ್ಟಾದ್ರೂ ಆಧುನಿಕರಿಗೆ ಒಂದು ಬಗೆಯ ಅತೃಪ್ತಿ ಉಳಿಯೋದಿಕ್ಕೆ ಕಾರಣ ಏನಂದ್ರೆ, ಪುಟ್ಟಪ್ಪನವರ ಕವಿತೆ ಒಂದು ತಾನು ಸೂಚಿಸುವ ಅಸಾಧ್ಯವಾದ ರೋಮಾಂಚಕವಾದ ಆಶಯಗಳು ಯಾವುದಿರ್ತವೆ, ಅದಕ್ಕೆ ತಕ್ಕಂತ ಸದೃಢವಾದ ಶರೀರವನ್ನ ಅನೇಕಬಾರಿ ನಿರ್ಮಿಸಿಕೊಳಲ್ಲ ಅಂತ, ಅದು ಸಂಸ್ಕೃತ ಭೂಯಿಷ್ಠತೆಯ ಕಾರಣಕ್ಕಾಗಿ ಅಲ್ಲ, ಸಂಸ್ಕೃತ ಭೂಯಿಷ್ಠತೆ ಅನ್ನೋದು ಕನ್ನಡ ಕವಿತೆಯೊಳಗಡೆಗೆ ಪ್ರಶ್ನೆ ಅಲ್ಲ, ಸಮಸ್ಯೆ ಅಲ್ಲ. ಸಮಸ್ಯೆ ಏನಂದ್ರೆ, ಈಗ 'ಶಂಕರಾಚಾರ್ಯ' ಪದ್ಯ ಆಗಲಿ, 'ಕನ್ನಂಬಾಡಿ' ಪದ್ಯ ಆಗಲಿ, ಅಥವಾ ಇನ್ನೊಂದು 'ಜಡವಾದಿ' ಅಂತ ಪದ್ಯ ಇದೆ, ಈ ಎಲ್ಲ ಕವಿತೆಗಳ ಸಮಸ್ಯೆ ಏನು ಅಂದ್ರೆ, ಬೇಂದ್ರೆ ಅವರಿಗೆ ಸಾಧ್ಯವಾಗದ ಅನೇಕ ರೋಮಾಂಚಕ ಸಂಗತಿಗಳು ನಮಗಲ್ಲಿ ಕಾಣ್ತವೆ. ಆದರೆ ಅದಕ್ಕೆ ಸದೃಢವಾದ ಶರೀರ ಅನ್ನೋದು ಅನೇಕಸಾರಿ ಇಲ್ಲ; ಅದಕ್ಕೆ ಕಾರಣ ಏನು ಅಂದ್ರೆ; ಹರಿಹರ ಅನೇಕ ಸಾರಿ ಬಳಸುವ ಈ ಸರಳವಾದ ಲಯಕ್ಕೆ, ಪುಟ್ಟಪ್ಪನೋರು ಮನಸೋಲ್ತಾರೆ. ಅವರು 'ಕೃತ್ತಿಕೆ' ಅಂತ ಒಂದು ಸಾನೆಟ್ ಅಲ್ಲಿ ಬರೀತಾ 'ನನ್ನ ಬಾವದ ದೀರ ಬಾರಕ್ಕೆ ಯೋಗಕ್ಕೆ ಚಟುಲರಣ ತೇಜಕ್ಕೆ ಭೀಮಸುಂದರ ಶೈಲಿ ಹತ್ತರನು ನೀನೆಲವೋ ನೆತ್ತರಿದ್ದರೆ ಮೈಲಿ' ಅಂತಾರೆ, 'ಭೀಂತೇಜೆ' ಅಂತಾರೆ. ಅಂದರೆ ನಿನಗಷ್ಟು ರಕ್ತ ಇದ್ದರೆ ಹತ್ತು ಅಂತ ಸವಾಲು ಹಾಕ್ತಾರೆ. ಅನೇಕ ಸಾರಿ ಕಾವ್ಯದ ಓದುಗರಿಗೆ ರಕ್ತ ಅಷ್ಟು ಇರಲ್ಲವಾದ್ದರಿಂದ, ಅವರು 'ಹತ್ತದೇ ಬೇಡ' ಅಂತ ಸುಮ್ನಿರ್ತಾರೆ. ಸೋ ಹೀಗೆ ಈ ಪುಟ್ಟಪ್ಪನವರ ಕವಿತೆಯಲ್ಲಿ ಹೊಸ ಆಕಾರದ ಹುಟ್ಟು ಆಗ್ತಾ ಇರುವ ಹಾಗೆ, ಚಾರಿತ್ರಿಕವಾಗಿ ಅಂದರೆ ಬೇಂದ್ರೆ ಅವರಲ್ಲಿ ಆಗದೇ ಇರುವಂಥ ಒಂದು ಸಂಗತಿ. ಬೇಂದ್ರೆಯವರ 'ಮಾಯಾ ಕಿನ್ನರಿ' ಪದ್ಯ ಓದ್ತಾ ಇರಬೇಕಾದ್ರೆ, ಅದನ್ನ ಇನ್ನೊಂದಾಗಿ ಭಾಷಾಂತರ ಮಾಡಿಕೊಳ್ಳೋ ಅಗತ್ಯ ಇಲ್ಲ. ಆದರೆ ಶಂಕರಾಚಾರ್ಯರಿಗೆ ಪದ್ಯ ಓದುವಾಗ ನೀವು ಭಾಷಾಂತರ ಮಾಡ್ಕೋಬೇಕು. ಹೀಗೆ ಅನೇಕ ಸಂಗತಿಗಳ ಒಂದು ಹೊಸತನ ಕಂಡರೂ ಕೂಡಾ ಅವರ ಈ ಲಯದಲ್ಲೇ ಉಂಟಾಗುವ ಸಮಸ್ಯೆಗಳ ಕಾರಣಕ್ಕಾಗಿ ನಮಗೆ ಒಂಥರಾ ಕಿಂಚಿಮಾನ ಆಗೇನೇ ಉಳೀತಾರೆ.

ಕಡೆಯದಾಗಿ ನಾವು ನೆನ್ನೆಯಿಂದ ಗಮನಿಸಿದ್ದು ಬರೀ ಚಾರಿತ್ರಿಕ ಕೆಟಗರಿಯಲ್ಲೇನೇ ಅವರನ್ನ ಚರ್ಚೆ ಮಾಡ್ತಾ ಇದ್ದೀವೆ. ಆದರೆ ಕುವೆಂಪು ಅವರ ಕೃತಿಗಳಲ್ಲಿ ಚರಿತ್ರೆಯ ಆಚೆಗಿನ ಕೆಲವು

ವಸ್ತುಗಳೂ ಕೂಡ ಇವೆ. ಅದರಲ್ಲಿ ಒಂದರ ಸೂಕ್ಷ್ಮ ಪ್ರಸ್ತಾಪ ಮಾಡಿ ನನ್ನ ಭಾಷಣವ ಮುಗಿಸ್ತೇನೆ. ಎರಡು ಸಂಗತಿಗಳನ್ನ ಅವರು 'ಕಾನೂರು ಹೆಗ್ಗಡತಿ'ಯಲ್ಲಿ ವಿಶೇಷವಾಗಿ ಚರ್ಚಿಸುತ್ತಾರೆ. ಒಂದು ಈಗಾಗ್ಲೇ ಪರಿಚಿತವಾಗಿರುವ ಅತಿ ಪರಿಚಿತವಾಗಿರುವ ಸಂಗತಿ ಚರಿತ್ರೆಯ ಚಲನೆ. ಅದರ ವಸ್ತು ಅಂತ, ಇನ್ನೊಂದ್ಯಾವುದು ಅಂತ ಅಂದ್ರೆ ರೋಗ ಮತ್ತು ಸಾವು. ಇವು ಮನುಷ್ಯನಿಗೆ ಏನು ಮಾಡಬಲ್ಲವು ಅನ್ನೊದನ್ನ ಕನ್ನಡದ ಕೆಲವೇ ಕೆಲವು ಲೇಖಕರಿಗೆ ಸಾಧ್ಯವಾಗುವಷ್ಟು ಏಕಾಗ್ರತೆಯಿಂದ ಧ್ಯಾನಿಸುತ್ತಾರೆ. ಈ ಪ್ರೇಮ ಕಾಮ ಅನ್ನೋದು ಮನುಷ್ಯನಿಗೆ ಒಂದು ಉನ್ಮತ್ತತೆ ತಂದು ಕೊಡ್ತವೆ. ಮಲಿನ ಮಾಡ್ತವೆ. ಸುಬ್ಬಮ್ಮ ಹಾಗೆ ಮಲಿನವಾಗುವುದರ ಮೂಲಕ ಉತ್ಕರ್ಷ ಸ್ಥಿತಿಗೆ ತಲುಪುತ್ತಾಳೆ. ಆದರೆ ಅಲ್ಲಿ ರೋಗ ಅನ್ನೋದು ಬಂದಾಗ ಕಾದಂಬರಿಯ ಒಂದು ಒಳವಿಸ್ತಾರದಲ್ಲಿ ಯಾವಾಗಲೂ ಹರಿಯುವ ಒಂದು ಸಣ್ಣ ಆಶಯ ಅಂದರೆ ರೋಗ ಮತ್ತು ಸಾವು-ವಾಸುಗೆ ಜ್ವರ ಬರುತ್ತೆ, ಈ ರೋಗ ಮತ್ತು ಸಾವು ಬಂದಾಗ, ಒಂದು ಹೊಸಬಗೆಯ ಸ್ಪಷ್ಟತೆ ಅನ್ನೋದು, ಹೊಸಬಗೆಯ ತಿಳಿವು ಅನ್ನೋದು, ದರ್ಶನ ಅನ್ನೋದು ಸಾಧ್ಯ ಆಗುತ್ತೆ. ಸೋ ಪುಟ್ಟಪ್ಪನವರು ಪ್ರೇಮವನ್ನ ಒಂದು ಉತ್ಕರ್ಷತೆ ಮಲಿನತೆಗಳ, ಆದರೆ ಒಂದು ಜೀವಪರವಾದ ಪ್ರವೃತ್ತಿಗಳ ಅಭಿವ್ಯಕ್ತಿಯಾಗಿ ಕಂಡರೆ, ರೋಗ ಮತ್ತು ಸಾವನ್ನು ಶುದ್ಧೀಕರಣದ ಮತ್ತು ಒಂದು ಹೊಸಬಗೆಯ ತಿಳಿವಿನ ಸಾಧ್ಯತೆಯನ್ನಾಗಿ ಕಾಣ್ತಾರೆ. ಅಂದರೆ ಪುಟ್ಟಪ್ಪನವರನ್ನ ನಾವು ಚಾರಿತ್ರಿಕ ದೃಷ್ಟಿಕೋನಗಳಿಂದ ಬಿಟ್ಟುಕೊಟ್ಟು ಕೂಡ ನೋಡುವುದರ ಮೂಲಕ ಪುಟ್ಟಪ್ಪನವರನ್ನ ಪ್ರವೇಶಿಸಬೇಕು ಅಂತ್ಹೇಳಿ ನನ್ನ ಮಾತನ್ನ ಮುಗಿಸ್ತೇನೆ.

(ದಿನಾಂಕ: ೨೦-೧೨-೯೪ರಂದು ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆದ ಕುವೆಂಪು ಕುರಿತ ವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣದಿಂದ)

●

## ಕೊಡವ ಸಾಹಿತ್ಯದ ಪ್ರಾಚೀನತೆ

● ಎಂ.ಎಂ. ಮುಹಮ್ಮದ್ ಕೊಳಕೇರಿ

ಜಗತ್ತಿನ ಎಲ್ಲಾ ಆಡುಭಾಷೆಗಳಲ್ಲಿಯೂ ಇರುವಂತೆ, ಕೊಡವ ಭಾಷೆಯಲ್ಲೂ ಜಾನಪದ ಸಾಹಿತ್ಯವು ಹುಲುಸಾಗಿದ್ದಿತ್ತು ಎನ್ನುವುದಕ್ಕೆ 'ಪಟ್ಟೋಲೆ ಪಳಮೆ' ಮೊದಲಾದ ಗ್ರಂಥಗಳಲ್ಲಿ ದಾಖಲಾಗಿರುವ ಅಸಂಖ್ಯ ಬಾಳೋಪಾಟ್, ತಾಲಿಪಾಟ್ ಚಾವುಪಾಟ್, ಮಂಗಲಪಾಟ್‌ಗಳು ಸಾಕ್ಷಿ ನುಡಿಯುತ್ತವೆ.

ಕೊಡಗು, ಕೊಡವ ಭಾಷೆ, ಅದರ ವ್ಯಾಕರಣ ವೈವಿಧ್ಯ... ಮೊದಲಾದ ಅಂಶಗಳ ಬಗ್ಗೆ ಕ್ರಿ.ಶ.೧೯-೨೦ನೇ ಶತಮಾನದಿಂದಲೇ ಅಪರೂಪಕ್ಕೆ ಒಂದೊಂದು ಕೃತಿಗಳು ಪ್ರಕಟ

ವಾಗಿರುವುದು ಕಂಡುಬರುತ್ತದೆ. ಆದರೆ ಅವು ಯಾವುವೂ ಕೂಡ ಕೊಡವ ಭಾಷೆಯಲ್ಲಿಲ್ಲ. ಹೆಚ್ಚಿನ ಕೃತಿಗಳೆಲ್ಲವೂ ಪ್ರಕಟವಾಗಿರುವುದು ಇಂಗ್ಲೀಷಿನಲ್ಲಿ.

ಕ್ರಿ.ಶ.ಸುಮಾರು ೧೭೮೦ರವರೆಗೂ, ಅಥವಾ ಕಡೇಪಕ್ಷ ೧೮ನೇ ಶತಮಾನದ ಮಧ್ಯಭಾಗದವರೆಗೂ ಶ್ರಮಜೀವಿಗಳಾದ ಕೊಡವರು ಹೆಚ್ಚುಕಮ್ಮಿ ಅನಕ್ಷರಸ್ಥರಾಗಿಯೇ ಉಳಿದಿದ್ದರೆನಿಸುತ್ತದೆ. ದೊರೆ ದೊಡ್ಡವೀರರಾಜೇಂದ್ರನ ಕಾಲದಲ್ಲಿ ಸ್ವಲ್ಪ ಜನ ಕೊಡವರು ಕನ್ನಡ ಕಲಿಯಲಾರಂಭಿಸಿದರು. ಇದೇ ಪರಂಪರೆ ಮುಂದುವರೆದು ಲಿಂಗರಾಜ, ಚಿಕ್ಕವೀರ ರಾಜೇಂದ್ರ ಅರಸರ ಕಾಲದಲ್ಲೂ ಕೊಡವರಲ್ಲಿ ಕೆಲವರು ಕನ್ನಡ ಕಲಿತುಕೊಂಡರು. ಎಲ್ಲೋ ಕೆಲವೆಡೆ "ಐಗಳ ಮಠ" ಎಂದು ಕರೆಯಲ್ಪಡುತ್ತಿದ್ದ ಶಾಲೆಗಳು ಅಸ್ತಿತ್ವದಲ್ಲಿದ್ದು, ಅವುಗಳ ಮೂಲಕವೇ ಅಲ್ಪಸ್ವಲ್ಪ ಕನ್ನಡವನ್ನು ಕಲಿತುಕೊಳ್ಳಬೇಕಾಗಿತ್ತು.

ಕೊಡವ ಭಾಷೆಯಲ್ಲಿ ಪ್ರಕಟಗೊಂಡ ಮೊಟ್ಟ ಮೊದಲ ಕೃತಿಯೆಂದರೆ ಡಾ. ಕೊರವಂಡ ಅಪ್ಪಯ್ಯ ಅವರು ಬರೆದ "ಕೊಡವರ ಕುಲಾಚಾರಾದಿ ತತ್ವೋಜ್ಜೀವಿನಿ". ಕೊಡಗಿನ ಚರಿತ್ರೆ ಅಡಕವಾಗಿರುವ "ರಾಜೇಂದ್ರನಾಮೆ"ಯಂತಹ ಕನ್ನಡ ಕೃತಿಗಳು ಕ್ರಿ.ಶ. ೧೮೦೭ರಷ್ಟು ಹಿಂದೆಯೇ ಪ್ರಕಟವಾಗಿದ್ದರೂ, ಕೊಡವ ಭಾಷೆಯ ಪ್ರಸ್ತುತ ಕೃತಿ ಬೆಳಕು ಕಂಡಿರುವುದು ತೀರಾ ಇತ್ತೀಚೆಗೆ, ಅಂದರೆ ಕ್ರಿ.ಶ.೧೯೦೨ರಲ್ಲಿ. ಇದೇ ಕೊಡವ ಭಾಷೆಯ ಪ್ರಪ್ರಾಚೀನ ಮತ್ತು ಪ್ರಪ್ರಥಮ ಕೃತಿ. ಮೈಸೂರಿನ ಆಯುರ್ವೇದಿಕ್ ಕಾಲೇಜೊಂದರಲ್ಲಿ ಅಧ್ಯಾಪಕರಾಗಿ, ಅರಮನೆ ವೈದ್ಯರಾಗಿ ಸೇವೆ ಸಲ್ಲಿಸಿದದ ಡಾ. ಅಪ್ಪಯ್ಯ ಅವರು ಕನ್ನಡದಲ್ಲಿ "ಗೋರಕ್ಷಣೆ" "ಅಸ್ಥಿಪಂಜರ" ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಭಗವದ್ಗೀತೆಯನ್ನು ಕೊಡವ ಭಾಷೆಗೆ ಅನುವಾದಿಸಿದ್ದಾರೆ.

ಕೊಡವ ಜಾನಪದ ಲೋಕದ ಮೊದಲ ಕೃತಿಯೆಂದೇ ಪರಿಗಣಿಸಲ್ಪಟ್ಟಿರುವ ನಡಕೇರಿಯುಡ ಚಿಣ್ಣಪ್ಪವನರ "ಪಟ್ಟೋಲೆ ಪಳಮೆ" (೧೯೨೪)ಗಿಂತ ಪ್ರಾಚೀನತೆಯಲ್ಲಿ 'ತತ್ವೋಜ್ಜೀವಿನಿ' ಮೊದಲಿನದು. ೬೦೦ ಪುಟಗಳ ಬೃಹತ್ 'ಪಟ್ಟೋಲೆ ಪಳಮೆ' ಎದುರು, ನೂರಿಪ್ಪತ್ತು ಪುಟಗಳ ಪುಟ್ಟ ತತ್ವೋಜ್ಜೀವಿನೆಯನ್ನು ತುಲನೆ ಮಾಡಲು ಕಷ್ಟವಾಗುತ್ತದೆ. ಕಾರಣ, ಅಪ್ಪಯ್ಯನವರು ಕೊಡವರ ಕುಲಾಚಾರ ವಿಚಾರಗಳನ್ನು ಸಂಪೂರ್ಣವಾಗಿ ಗ್ರಂಥಸ್ಥಗೊಳಿಸಲು ತಮ್ಮ ಶಕ್ತಿ ಮೀರಿ ಪ್ರಯತ್ನಿಸಿದ್ದಿರಬಹುದು. ಆದರೆ ಅವರ ಕೃತಿಯು ಗಾತ್ರ ಮತ್ತು ಗುಣಮಟ್ಟದ ದೃಷ್ಟಿಯಿಂದ, 'ಪಟ್ಟೋಲೆ ಪಳಮೆ'ಗೆ ಸರಿಸಾಟಿಯಾಗಲಾರದು. ಚಿಣ್ಣಪ್ಪನವರ ಕೃತಿಯು ಕೊಡವ ಜಾನಪದ ಗೀತೆಗಳ ಸಂಗ್ರಹ, ವಿವಿಧ ಆಚಾರ-ವಿಚಾರಗಳ ಸಂದರ್ಭದಲ್ಲಿ ಹಾಡಲಾಗುತ್ತಿದ್ದ ನಾನಾ "ಪಾಟ್"ಗಳು, "ಪಳಂಜೊಲ್ಲ್"(ಗಾದೆ)...ಗಳಾದಿ ಸಂಗ್ರಹಗಳಿಂದ ಸಮೃದ್ಧವಾಗಿದೆ. "ಕೊಡವರ ಕುಲಾಚಾರಾದಿ ತತ್ವೋಜ್ಜೀವಿನಿ"ಯು ಇಂತಹ ಅಪೂರ್ವ ಸಾಹಿತ್ಯವನ್ನು ದಾಖಲಿಸಿಲ್ಲವಾದರೂ "ಪಟ್ಟೋಲೆ ಪಳಮೆ"ಯನ್ನು ಪ್ರಸ್ತುತ ಕೃತಿಯ ಮುಂದು ವರಿದ ಯತ್ನವಾಗಿದೆ. ಚಿಣ್ಣಪ್ಪನವರು ಈ ಕೃತಿಯನ್ನು ಗಮನಿಸಿರಬಹುದಾದ ಸಾದ್ಯತೆಗಳು

ಹೆಚ್ಚಿವೆ. ನಾತು"ಭಗವಂತಂಡ ಪಾಟ್"ನ್ನು ರಚಿಸುವುದಕ್ಕೆ ಮೊದಲು, ಅಪ್ಪಯ್ಯನವರು ಕೊಡವ ಭಾಷೆಯಲ್ಲಿ ಬರೆದಿದ್ದ(ಅನುವಾದ) 'ಭಗವದ್ಗೀತೆ'ಯಿಂದ ಸ್ಫೂರ್ತಿ ಪಡೆದಿದ್ದೆ ಎಂಬ ಅಂಶವನ್ನು ಸ್ವತಃ ಚಿಣ್ಣಪ್ಪನವರೇ ಒಪ್ಪಿಕೊಂಡಿದ್ದಾರೆ.

ಕೊಡವ ಸಾಹಿತ್ಯ ಕ್ಷೇತ್ರದಲ್ಲಿ ಅನಂತರದ ಘಟ್ಟವು ಹರದಾಸ ಅಪ್ಪಚ್ಚಕವಿಯದ್ದು. ಕ್ರಿ.ಶ.೧೯೦೬ರಲ್ಲಿ ಅಪ್ಪಚ್ಚಕವಿಯ ಮೊದಲ ನಾಟಕ 'ಯಯಾತಿ' ಪ್ರಕಟವಾಯಿತು. ೧೯೦೮ರಲ್ಲಿ 'ಸುಬ್ರಹ್ಮಣ್ಯ' ನಾಟಕ ರಚನೆಯಾದರೂ, ಅಚ್ಚಾಗಲು ತುಸು ತಡವಾಯಿತು. ೧೯೧೪ರಲ್ಲಿ 'ಸಾವಿತ್ರಿ' ನಾಟಕವು ಮುದ್ರಣ ಕಂಡರೆ 'ಕಾವೇರಿ' ನಾಟಕವು ೧೯೧೯ರಲ್ಲಿ ಅಚ್ಚಾಯಿತು. "ನಾಲ್ ನಾಟಕ"ಗಳನ್ನು ರಚಿಸಿ ಪ್ರಸಿದ್ಧನಾದ ಆದಿಕವಿ, ನಾಟಕಕಾರ, ಹರದಾಸ...ಹೀಗೆ ಬಹುಮುಖ ಪ್ರಶಂಸೆಗೆ ಪಾತ್ರರಾಗಿರುವ ಅಪ್ಪನೆರವಂಡ ಅಪ್ಪಚ್ಚ ಕವಿಯ ಹೆಸರು ಕೊಡವ ಸಾಹಿತ್ಯದಲ್ಲಿ ಮುಖ್ಯವಾಗಿದೆ

"ಕೊಡವರ ಬೈಬಲ್" ಎನಿಸಿಕೊಂಡಿರುವ "ಪಟ್ಟೋಲೆ ಪಳಮೆ" ನಡಿಕೇರಿಯಂಡ ಚಿಣ್ಣಪ್ಪ ವಿರಚಿತ ಈ ಕೃತಿಯು ೧೯೨೪ರಲ್ಲಿ ಪ್ರಕಟವಾಯಿತು. ಕವಿಕೂಡ ಆಗಿದ್ದ ಚಿಣ್ಣಪ್ಪ ಅವರ ಈ ಕೃತಿಯು ಕೊಡವರ ಜನನದಿಂದ ಮರಣದವರೆಗಿನ ಸಕಲ ಆಚಾರಗಳ ವಿವರಣೆ ನೀಡುವ ಈ ಕೃತಿಯು, ಕೊಡವ ಜನಪದ ಕಾವ್ಯಗಳ ಸಂಗ್ರಹವಾಗಿದೆ. ಜಾನಪದ ನೃತ್ಯಸಂಬಂಧಿ ಗೀತೆಗಳು, ನಾಟಕ ರೂಪಗಳು, ಗಾದೆಗಳು, ಮೊದಲಾದ ಸಾಹಿತ್ಯ ಪ್ರಕಾರಗಳ ಉತ್ತಮ ಸಂಗ್ರಹ ಇದಾಗಿದೆ. (ಆದರೆ ಪ್ರಸ್ತುತ ಗ್ರಂಥದಲ್ಲಿ ವಿವರಿಸಲ್ಪಟ್ಟಿರುವ ಸಾಮಾಜಿಕ ವರ್ಗ ವಿಂಗಡನೆಯ ತರತಮ ಸ್ವರೂಪವು ಡಾ. ತಂಬಂಡ ವಿಜಯ್ ಪೂಣಚ್ಚ ಮೊದಲಾದ ಆಧುನಿಕ ವಿಮರ್ಶಕರ ಟೀಕೆಗೆ ಗ್ರಾಸವಾಗಿರುವುದನ್ನಿಲ್ಲಿ ಸಾಂದರ್ಭಿಕವಾಗಿ ಸ್ಮರಿಸಿಕೊಳ್ಳಬಹುದು)

ಕೊಡವ ಸಾಹಿತ್ಯಕ್ಕೆ ಡಾ. ಐ.ಮಾ. ಮುತ್ತಣ್ಣನವರ ಕೊಡುಗೆಯನ್ನೂ ಗಮನಿಸಬೇಕು. ಪ್ರಕಟಗೊಳ್ಳದೇ ಮೂಲೆಗುಂಪಾಗಿದ್ದ ಅಪ್ಪಚ್ಚಕವಿಯ 'ಸುಬ್ರಹ್ಮಣ್ಯ' ನಾಟಕವನ್ನು ೧೯೪೨ರಲ್ಲಿ ಪ್ರಕಟಿಸಿದ ಮುತ್ತಣ್ಣ ಅವರು ೧೯೪೬ರಲ್ಲಿ, 'ಪೂಮಾತಿ' ಎಂಬ ಕೊಡವ ಕವನ ಸಂಕಲನವನ್ನು ಹೊರತಂದಿದ್ದರು. ಅದೇ ಮೊದಲ ಬಾರಿಗೆ ಮುತ್ತಣ್ಣ ಅವರು ಶೇಕ್ಸ್‌ಪಿಯರ್‌ನ 'ಮರ್ಚೆಂಟ್ ಆಫ್ ವೆನಿಸ್' ಹಾಗೂ "ಜೂಲಿಯಸ್ ಸೀಸರ್" ನಾಟಕ ಗಳನ್ನು ಕ್ರಮವಾಗಿ "ಕೊಡಗಡ ಕೋಮಟಿ" ಮತ್ತು "ಬೊಟ್ಟೋಳಿ ಬೀರಪ್ಪ" ಎಂದು ತರ್ಜುಮೆ ಮಾಡಿದರು. ಕಾಳಿದಾಸನ 'ಶಾಕುಂತಲ' ನಾಟಕವನ್ನೂ ಕೊಡವ ಭಾಷೆಗೆ ಅನುವಾದಿಸಿದ ಶ್ರೀಯುತರು ೧೯೮೨ರಲ್ಲಿ ಕೊಡವ-ಕನ್ನಡ ಅರ್ಥಕೋಶವನ್ನು ರಚಿಸಿದ್ದಾರೆ. 'ಯಯಾತಿ' 'ಸುಬ್ರಹ್ಮಣ್ಯ' 'ಕಾವೇರಿ' ಮೊದಲಾದ ನಾಟಕಗಳನ್ನು ಕನ್ನಡಕ್ಕೂ; ಬಾಲೋ ಪಾಟ್, ಚಾವುಪಾಟ್, ಪುತ್ತರಿಪಾಟ್, ಮಂಗಲ ಪಾಟ್, ದೇಶಕೆಟ್ಟುಪಾಟ್... ಮೊದಲಾದ ಅಸಂಖ್ಯ ಜನಪದ ಗೀತೆಗಳು ಹಾಗೂ ಸುಮಾರು ೨೪೦ರಷ್ಟು ಕೊಡವ ಗಾದೆಗಳನ್ನು ಇಂಗ್ಲೀಷಿಗು ಭಾಷಾಂತರಿಸಿ ಕೊಡವ ಸಾಹಿತ್ಯವನ್ನು ಹೊರಜಗತ್ತಿಗೂ ಪರಿಚಯಿಸಿದ್ದಾರೆ.

ಐ.ಮಾ. ಮುತ್ತಣ್ಣನವರಂತೆ ಕನ್ನಡ, ಕೊಡವ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಸಾಹಿತ್ಯ ರಚಿಸಿದ ಮತ್ತೊಬ್ಬ ತ್ರಿಭಾಷಾ ಸಾಹಿತ್ಯ ಸಾಮ್ರಾಟನೆಂದರೆ, ದಿವಂಗತ ಬಿ.ಡಿ. ಗಣಪತಿ. ಮೂರು ಭಾಷೆಗಳಲ್ಲಿ ಸುಮಾರು ೪೦ರಷ್ಟು ಕೃತಿಗಳನ್ನು ರಚಿಸಿರುವ ಗಣಪತಿಯವರ ಹೆಸರು ಇಲ್ಲಿ ಉಲ್ಲೇಖಾರ್ಹ.

ಕೊಡವ ಸಾಹಿತ್ಯಕ್ಕೆ ಸೇವೆ ಸಲ್ಲಿಸಿರುವ ಇತರ ಬರಹಗಾರರು ಸಮಕಾಲಿನ ಸಮಾಜದಲ್ಲಿದ್ದಾರೆ. ಕೊಡಗನ್ನು ಲಿಂಗಾಯತರು, ಮುಸ್ಲಿಮರು, ಇಂಗ್ಲೀಶರೆಲ್ಲ ಆಳಿದ್ದಾರೆ. ಆದರೆ ಕೊಡವರು ತಮ್ಮನ್ನು ತಾವು ಕ್ಷತ್ರಿಯಕುಲದವರೆಂದು ಹೇಳಿಕೊಳ್ಳುವರಾದರೂ, ಅವರು ರಾಜರಾಗಿದ್ದುದಕ್ಕೆ ಚರಿತ್ರೆಯಲ್ಲಿ ದಾಖಲೆಯಿಲ್ಲ. ತತ್ಕಾರಣದಿಂದಾಗಿ ಕೊಡವ ಭಾಷೆ ಎಲ್ಲೂ ಆಸ್ಥಾನದ ಭಾಷೆಯಾಗಿ ಮೆರೆಯಲಿಲ್ಲ, ಆಡಳಿತ ಭಾಷೆಯಾಗಿ ವಿಜೃಂಭಿಸಲಿಲ್ಲ. ಹಲವು ಮಂದಿ ಕೊಡವರು ದಿವಾನರಾಗಿದ್ದುದಕ್ಕೆ ನಿದರ್ಶನಗಳಿವೆಯಾದರೂ, ಈ ದಿವಾನರುಗಳಿಂದ ಕೊಡವ ಭಾಷೆಗಾಗಲೀ, ಸಾಹಿತ್ಯಕ್ಕಾಗಲೀ ಪ್ರೋತ್ಸಾಹವೂ ದೊರೆತಿಲ್ಲವೆಂಬುದು ದಿಟ.

●

ಮುಖಾಮುಖಿ

# ನೀಲಗಂಗಯ್ಯ ಪೂಜಾರ ಅವರೊಂದಿಗೆ

● ಸಂಪಾದಕ

(ಕನ್ನಡದ ಲೋಹಿಯಾವಾದಿ ಚಿಂತಕರಲ್ಲಿ ಒಬ್ಬರಾದ ಶ್ರೀನೀಲಗಂಗಯ್ಯ ಪೂಜಾರ ಅವರನ್ನು ಪತ್ರಿಕೆಗಾಗಿ ಧಾರವಾಡದಲ್ಲಿರುವ ಅವರ ಮನೆಯಲ್ಲಿ ಸಂದರ್ಶನ ಮಾಡಲಾಯಿತು. (೨೧-೨-೨೦೦೦) ಲೋಹಿಯಾವಾದದಿಂದ ಹಿಡಿದು, ಕನ್ನಡ ಸಾಹಿತ್ಯ, ಸಂಶೋಧನೆ, ದೇಶದ ಈ ಹೊತ್ತಿನ ರಾಜಕಾರಣದವರೆಗೆ ಅವರು ಮಾತಾಡಿದರು. ವೃತ್ತಿಯಿಂದ ವಕೀಲರಾದ ನೀಲಗಂಗಯ್ಯನವರು ಮುಂಬೈ ವಿಧಾನಸಭೆಯಲ್ಲಿ ಆಗಿನ ಮುಂಬೈ ಕರ್ನಾಟಕ ಶಾಸಕರಾಗಿದ್ದವರು. ಸುಮಾರು ೭೩ ವರುಷದ ಈ ಹೊತ್ತಿನಲ್ಲೂ ಹೋರಾಟದ ಚೈತನ್ಯ ಉಳಿಸಿಕೊಂಡಿರುವ ನೀಲಗಂಗಯ್ಯನವರು ಗೋಪಾಲಗೌಡರ ಮಿತ್ರರು. ತೀಕ್ಷ್ಣವಾಗಿ ಚಿಂತನೆ ಮಾಡುವ ಹಾಗೂ ಅದನ್ನು ರೂಪಕದ ಗದ್ಯದಲ್ಲಿ ಬರೆಯುವ ನೀಲಗಂಗಯ್ಯನವರ ನೈತಿಕತೆ ಹಾಗೂ ನಿಷ್ಠುರ ವ್ಯಕ್ತಿತ್ವ ಅವರು ಬರೆದ ಕೆಲವೇ ಲೇಖನಗಳಲ್ಲಿ ಪ್ರಕಟವಾಗಿರುವುದನ್ನು ಕಾಣಬಹುದು. ಅವರ ಸಂಶೋಧನೆಯಲ್ಲಿ ವಿದ್ವತ್ತು, ನಿಶಿತಬುದ್ಧಿ ಮತ್ತು ಆರೋಗ್ಯಕರ ನಿಲುವುಗಳು ಹೇಗೆ ಕೆಲಸ ಮಾಡುತ್ತವೆ ಎನ್ನುವುದಕ್ಕೆ, ಇದೇ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಉಡುಪಿಯ ಕೃಷ್ಣ ಹಾಗೂ ವಿಠಲ ಪರಂಪರೆ' ಎಂಬ ಲೇಖನವನ್ನು ನೋಡಬಹುದು. ಸಂ)

ಸಂ: ನಿಮ್ಮ ವೈಯಕ್ತಿಕ ಜೀವನದ ಬಗ್ಗೆ ನಮ್ಮ ಓದುಗರಿಗೆ ಮಾಹಿತಿ ಬೇಕು.

ನೀಲ: ನಾನು ಈಗ ಗದಗ ಜಿಲ್ಲೆ ರೋಣ ತಾಲೂಕಿನ ಹೊಸಹಳ್ಳಿ ಗ್ರಾಮದಲ್ಲಿ ಹುಟ್ಟಿದಂವ. ನಮ್ಮ ತಂದೆ ತಾಯಿಗಳಿಬ್ಬರೂ ನಿರಕ್ಷರಿಗಳು ಮತ್ತು ಬೇಸಾಯ ನಿರತರಾದಂಥವರು. ಹೀಗಾಗಿ ನಾನು ಹುಟ್ಟಿದ ಇಸವಿ ಆ ಬಗ್ಗೆ ಏನು ದಾಖಲೆಗಳು ಸಿಗುವಂತಿಲ್ಲ.

ಸಂ: ನಿಮ್ಮ ಬಾಲ್ಯದ ವಾತಾವರಣ.....

ನೀಲ: ಬಾಲ್ಯದ ವಾತಾವರಣ ಅಂದ್ರ, ನಮ್ಮ ತಂದೆ ಬಹಳಾ ಬೇಗ್ ತೀರ್ಕೊಂಡ್ರು. ತಾಯಿ ಆರೈಕೆಯಲ್ಲೇ ನಾನು ಬೆಳೆದುಬಂದೆ. ಮತ್ತೆ ನನ್ ತಾಯಿ ನಿರಕ್ಷರಿಯಾದ್ರುನೂ ಬಹಳ ಸುಸಂಸ್ಕೃತರಿದ್ರು. ಅವರಿಗೆ ರಾಮಾಯಣ ಮಹಾಭಾರತದ ಕತೆಗಳು

ಗೊತ್ತಿರತಿದ್ದು. ಶಿವನ ಪಂಚವಿಂಶತಿಲೀಲೆ ಕತೆನೆಲ್ಲಾ ನನಗೆ ಹೇಳ್ತಿದ್ರು. ಅಂಕಿ, ಮಗ್ಗಿ ನನಗ ಮೂಲಾಕ್ಷರಗಳನ್ನ ಬಾಯಿಲೇ ಹೇಳಿ ತಿಳಿಸ್ತಿದ್ರು.

ಸಂ: ಬಾಲ್ಯದ ಯಾವ ಅನುಭವ ಗಾಢವಾಗಿ ನೆನಪಾಗ್ತಿದೆ?

ನೀಲ: ೧೯೩೬ ಅಥವಾ ೩೭ನೇ ಇಸ್ವಿ ಅಂತ ಅನ್ಸ್ತದೆ. ಗಾಂಧಿಜಿಯವರು ನಮ್ಮ ನೆರೆ ಗ್ರಾಮಕ್ಕ ಭೆಟ್ಟಿ ಕೊಟ್ಟಿದ್ರು. ನಮ್ಮ ಊರಿಂದ ಸುಮಾರಾಗಿ ಒಂದ ನಾಲ್ಕು ಮೈಲಿ ಮೇಲೆ ಜಕ್ಕಲಿ ಅಂತ ಒಂದು ಗ್ರಾಮ ಇದೆ. ಆಗ ಅಲ್ಲಿ ದೊಡ್ಡಮೇಟಿ ಅಂದಾನಪ್ಪ ನೋರು ಅಂತ ತಿಳಕೊಂಡು, ಬಹಳ ದೊಡ್ಡ ಹಿಡವಳಿದಾರಿದ್ರು. ಅವರ ಆಮಂತ್ರಣಕ್ಕ ಗಾಂಧೀಜಿ ಅಲ್ಲಿ ಭೆಟ್ಟಿ ಕೊಟ್ಟಿದ್ರು. ಆ ಕಾಲಕ್ಕ ದೊಡ್ಡಮೇಟಿಯವ್ರು ೫೦೦೦ ರೂ. ಹರಿಜನ ನಿಧಿ ಅರ್ಪಿಸಿದ್ರು ಗಾಂಧೀಜಿಗೆ. ಗಾಂಧೀಜಿನ್ನ ನೋಡ್ಲಿಕ್ಕಂತ ಹೋದದ್ದರ ಪ್ರಭಾವ ನನ್ನ ಮೇಲೆ ಆದದ್ದು. ಬಹಳ ಚಿಕ್ ವಯಸ್ಸಿನಲ್ಲಿ ಅದು.

ಸಂ: ರಾಜಕಾರಣಕ್ಕೆ ಪ್ರವೇಶಿಸಲು ನಿಜವಾದ ಪ್ರೇರಣೆ ಯಾವುದು?

ನೀಲ: ೧೯೩೯ನೇ ಇಸ್ವಿಯೊಳಗೆ ಮಹಾಯುದ್ಧ ಪ್ರಾರಂಭ ಆದಾಗ, ಬ್ರಿಟಿಶರು ಭಾರತವನ್ನ ಯುದ್ಧಾಸಕ್ತ ರಾಷ್ಟ್ರನ ಮಾಡ್ಬೇಕಂತ ತಿಳ್ಕೊಂಡ್ ಪ್ರಯತ್ನ ಮಾಡಿದ್ರು. ಅದರ ವಿರುದ್ಧ ಗಾಂಧೀಜಿ 'ಭಾರತಕ ಸ್ವತಃ ಪ್ರಯೋಜನ ಆಗ್ಬೇಕು. ಭಾರತೀಯರು ಆಸಕ್ತ ರಾಗಿ ಯುದ್ಧದಾಗ ಭಾಗವಹಿಸ್ಬೇಕಾಗಿತ್ತಂದ್ರೆ ಸ್ವಾತಂತ್ರ ಕೊಡ್ಬೇಕಾಗತ್ತ' ಅಂತನ್ನೋ ದೃಷ್ಟಿಯಿಂದ, ವೈಯಕ್ತಿಕ ಸತ್ಯಾಗ್ರಹ ಪ್ರಾರಂಭಿಸಿದ್ರು. ವೈಯಕ್ತಿಕ ಸತ್ಯಾಗ್ರಹ ಎಲ್ಲೆಲ್ಲಿ ನಡೀತಿತ್ತು ಅಲ್ಲಿಗೆ ಹೋಗೇ ಬಿಡ್ತಿದ್ದೆ ನಾನು.

ಸಂ: ಅಲ್ಲ, ಈ ಸಮಾಜವಾದೀ ರಾಜಕಾರಣಕ್ಕೆ ಪ್ರವೇಶಿಸಿದ್ದು ಯಾವಾಗ?

ನೀಲ: ಸಮಾಜವಾದಿ ಆದುದ್ದು ೧೯೪೨ರ ಈ ಭೂಗತ ಹೋರಾಟದ ನಾಯಕತ್ವಾನ ಜಯಪ್ರಕಾಶ್ ಮತ್ತು ಲೋಹಿಯಾರು ತಮ್ ಕೈಯೊಳಗ ತೊಗೊಂಡು ಅದನ್ನ ನಡಿಸಿದಾಗ, ಅದರಿಂದ ಪ್ರಭಾವಿತನಾದೆ. ಅದ್ರಲ್ಲೂ ಹೆಚ್ಚಾಗಿ ಲೋಹಿಯಾರವ್ರ ನಿಶಿತಬುದ್ಧಿಗೆ ನಾನು ಬಹಳಷ್ಟು ಮನಸೋತೆ.

ಸಂ: ಆಗ ಕಾಂಗ್ರೆಸ್ಸಿನ ಒಂದು ಭಾಗವಾಗಿಯೇ ಸಮಾಜವಾದಿ ಚಳುವಳಿ ಇತ್ತಲ್ವಾ?

ನೀಲ: ಹೌದೌದು. ಅದು ೧೯೪೮ ಜನೇವರಿ ೩೧ನೇ ತಾರೀಕಿನವರೆಗೂನೂ ಅಂತ ಕಾಣಸ್ತದಾ. ಹೌದು, ಅಲ್ಲಿವರೆಗೂ ಅದು ರಾಷ್ಟ್ರೀಯ ಕಾಂಗ್ರೆಸ್ಸಿನ ಒಂದು ಭಾಗವಾಗೇ ಇತ್ತು.

ಸಂ: ಆವಾಗ ನಿಮ್ಮ ಸಂಗಾತಿಗಳಾಗಿಯಾರ್‍ಯಾರಿದ್ರು ಸಾರ್?

ನೀಲ: ರಾಜಕೀಯ ಕ್ಷೇತ್ರದೊಳಗ ನನ್ನ ಸಂಗಾತಿಗಳಂದ್ರ, ನನ್ನನ್ನ ಮುಖ್ಯತಾ ಸಮಾಜ ವಾದದ ಕಡೀಗ ನನ್ನ ಬಹಳಷ್ಟು ಎಳದವ್ರು ಅಂದ್ರೆ, ಕೋಣೆ ಸದಾಶಿವ ಕಾರಂತ್ ಅಂತ. ಈಗಿನ್ನೂ ಇದ್ದಾರ, ಮುಂಬೈಯಲ್ಲಿದ್ದಾರ. ಅವ್ರು ನನಗೆ ಮಾರ್ಕ್ಸ್‌ವಾದದ ಬಗ್ಗೆ ಬಹಳಷ್ಟು ಕಲಿಸಿದವರು.

ಸಂ: ನಿಮ್ಮ ಭೇಟಿ ಎಲ್ಲಿ ನಡೆದಿದ್ದು?

ನೀಲ: ಇಲ್ಲಿ, ಧಾರವಾಡದಲ್ಲಿ, ವಿದ್ಯಾರ್ಥಿ ಇದ್ದಾಗ. ಜಯ್ ಪ್ರಕಾಶ್ ಮತ್ತು ಲೋಹಿಯಾರ ಬಗ್ಗೆ ಅವ್ರು ನನಗ ಬಹಳಷ್ಟು ಹೇಳ್ತಿದ್ರು.

ಸಂ: ಲೋಹಿಯಾರ ಜೊತೆಗಿನ ನಿಮ್ಮ ಬಹಳ ಆತ್ಮೀಯ ನೆನಪು ಯಾವುದು ಸಾರ್?

ನೀಲ: ಆತ್ಮೀಯ ನೆನಪು ಅಂದ್ರೆ, ಅದು ಸುಮಾರಾಗಿ ೧೯೫೫ನೇ ಇಸ್ವಿ ಕಾಣಸ್ತದರಿ. ಆಗ ಲೋಹಿಯಾರವ್ರನ್ನ ನಾವು ಇಲ್ಲಿ ಬರಮಾಡಿಕೊಂಡಿದ್ವಿ ಕರ್ನಾಟಕಕ್ಕ. ಅಷ್ಟೊತ್ತಿಗಾಗ್ಲೇನಃ ನಾನು, ಇಲ್ಲಿ ಕರ್ನಾಟಕದಲ್ಲಿ ಅವಾಗ ಸಿಎಸ್‌ಪಿ ಅಂತ ಕಾಂಗ್ರೆಸ್ ಸೋಷಲಿಷ್ಟ ಪಾರ್ಟಿಯ ರಾಜ್ಯ ಘಟಕಕ್ಕ ಸಹಾಯಕ ಕಾರ್ಯದರ್ಶಿ ಆಗಿದ್ದೆ. ಲೋಹಿಯಾರವರ ಪ್ರವಾಸದ ಅವಧಿಯೊಳಗ, ಅವರ ಕೂಡ ನಾನು ಅಡ್ಡಾಡುವಾಗ ಅವ್ರು ಬಹಳಷ್ಟು ಆತ್ಮೀಯತೆಯಿಂದ ಕಾಣ್ತಿದ್ರು.

ಸಂ: ಗೋಪಾಲಗೌಡರ ಸಂಪರ್ಕ ಯಾವಾಗ ಲಭಿಸಿತು?

ನೀಲ: ಗೋಪಾಲ್ ಗೌಡ್ರನ್ನ ನಾನು ನೋಡಿದ್ದು ಅಂತಂದ್ರೆ ರಾಜ್ಯ ಪುನಾರಚನ ನಂತರನ. ಅದಕ ಮುಂಚೆ ಅವರೇನೋ ಈ ಕಾಗೋಡು ಹೋರಾಟ ಗೀರಾಟ ಅಂತ ಏನೋ ಮಾಡಿದ್ರಂತೆ.

ಸಂ: ನೀವು ಕಾಗೋಡು ಹೋರಾಟಕ್ಕ ಹೋಗ್ಲಿಲ್ಲವಾ?

ನೀಲ: ಇಲ್ಲ. ಆಗ ನಾನು ಇನ್ನೂ ಲಾ ಕಾಲೇಜಿನಲ್ಲಿ ಸ್ಟೂಡೆಂಟ್ ಇದ್ದೆ. ಅಂದ್ರೆ ಅದನ್ನ ಪತ್ರಿಕೆಯಲ್ಲಿ ವರದಿ ಓದ್ತಿದ್ದೆ. ಆ ಕಾಗೋಡು ಹೋರಾಟದೊಳಗ ಇಲ್ಲಿ ಧಾರವಾಡ ದಲ್ಲಿ ನಮ್ ಸಹಕಾರಿ ಆಗಿದ್ದಂತಹ ಗರುಡಶರ್ಮಾ ಅದ್ರೊಳಗ ಪ್ರಮುಖ ಪಾತ್ರ ವಹಿಸಿದ್ರು. ಅದುಕ್ಕ ಒಂದ್ ಸ್ವಲ್ಪ ಆಸಕ್ತಿ ತೋರಿಸ್ತಿದ್ದೆ ಅದ್ರೊಳಗ ಅಷ್ಟೇನೆ ಹೊರ ತಾಗಿ, ಪ್ರತ್ಯಕ್ಷವಾಗಿ ನಾನು ಕಾಗೋಡಿಗೆ ಹೋಗ್ಲೇ ಇಲ್ಲ. ಹೋರಾಟ ಯಾವ ಸ್ವರೂಪ್‌ದಾಗ ಇತ್ತು, ಯಾವದು ಹ್ಯಾಗ ನಡೀತು ಅನ್ನೋದೂನು ಗೊತ್ತಿಲ್ಲ.

ಸಂ: ನಿಮ್ಮ ಒಂದು ಲೇಖನದಲ್ಲಿ ಗೋಪಾಲಗೌಡರ ಬಗ್ಗೆ ಬರೀತ, ನನಗೂ ಅವರಿಗೂ ಲೋಹಿಯಾವಾದ ಬಿಟ್ರೆ ಉಳಿದ ಯಾವ ಸಮಾನಾಸಕ್ತಿಯ ಕ್ಷೇತ್ರಗಳು ಇರ್ಲಿಲ್ಲ ಅಂತ ಹೇಳಿದೀರಿ...

ನೀಲ: ಹೌದು ಇರ್ಲಿಲ್ಲ.

ಸಂ: ಭಿನ್ನಾಭಿಪ್ರಾಯಗಳು ಬೇಕಾದಷ್ಟಿದ್ದವಾ?

ನೀಲ: ಭಿನ್ನಾಭಿಪ್ರಾಯ ಅಂತಲ್ಲ. ಅವರ ಜೀವನ ವಿಧಾನನೇ ಬೇರೆ, ನನ್ನ ಜೀವನದ ವಿಧಾನನೇ ಬೇರೆ ಆಗಿರತ್ತಿತ್ತು. ಸ್ವಲ್ಪ ಶೋಕಿಗೆ ಮನಸೋತವ್ರು ಅವರು. ನಾನು ಸರಳ ಜೀವನ ನಡಸ್ಬೇಕು ಅಂತನ್ನಾವ. ಹೀಗಾಗಿ ಅವ್ರಿಗೆ ನನಗೆ ಬಹಳಷ್ಟು ಕೂಡ್ತಿದ್ದಿಲ್ಲ. ನನಗ ಸೋಫಿಸ್ಟಿಕೇಶನ್ ಕಡಿಮಿ ಅಂತ ಅಂತಿದ್ರು ಅವರು. ಆದರೆ

ನಾನು ಹೋರಾಟಗಳನ್ನು ರೂಪಿಸ್ತಿದ್ದೆ ನಾನಾಗಿ; ಮತ್ತ ಯಶಸ್ವೀ ರೀತಿಯಿಂದ ಅದನ್ನ ಮುಕ್ತಾಯನೂ ಗೊಳಿಸ್ತಿದ್ದೆ. ನಾನು ಹೋರಾಟ ಕೈಕೊಂಡು, ಯಾವತ್ತಿಗೂ ಸೋತು ಕೊನೀಗೆ ಹಿಂದಕ್ ಬರ್ಲಿಲ್ಲ.

ಸಂ: ಉದಾಹರಣೆಗೆ ಯಾವ ಹೋರಾಟ?

ನೀಲ: ಹೆಬ್ಬಳ್ಳೀದು! ೧೯೫೭ನೇ ಇಸವಿಯೊಳಗ ಇಲ್ಲೇ ಧಾರವಾಡ ತಾಲೂಕಿನಲ್ಲೇನೆ ಹೆಬ್ಬಳ್ಳಿ ಅಂತ ಒಂದು ಜಾಗೀರು. ಆ ಜಾಗೀರಿನ ಭೂಮಿ ೧೧೦೦೦ ಎಕರೆಯಷ್ಟಿತ್ತರಿ. ಆ ಜಾಗೀರ್ ನಿರ್ಮೂಲನೆ ಮತ್ತ ಜಾಗೀರ್ ಭೂಮಿಗಳನ್ನ ಪುನರ್ ವಿತರಣೆ ಮಾಡೋ ಒಂದು ಹೋರಾಟ ಕೈಕೊಂಡು, ಸಾಧಾರಣ ೧೦ ದಿವ್ಸದೊಳಗ ಹೋರಾಟ ಮುಗಸಿ ವಿಜಯಿಯಾಗಿ ಬಂದೆ.

ಸಂ: ಗೇಣಿದಾರರಿಗೆ ಭೂಮಿ ಪುನರ್ ವಿತರಣೆಯಾಯಿತಾ?

ನೀಲ: ಆಯ್ತು. ಗೇಣಿದಾರರಿಗೆ, ಅವ್ರು ಸಾಗುವಳಿ ಮಾಡ್ತಿರುವಂಥಾ ಕ್ಷೇತ್ರ, ಒಂದುವೇಳೆ ೪೮ ಎಕರೆಕಿಂತ ಹೆಚ್ಚಿತ್ತಂತಂದ್ರೆ, ಮಿಕ್ಕುಳಿದ ಭೂಮಿನ್ನ ಸರಕಾರ ವಶಕ್ಕೆ ತೆಗೊಂಡು ಭೂರಹಿತರಿಗೆ ಹಂಚೋ ವ್ಯವಸ್ಥೆನೂ ಮಾಡಿದ್ವಿ ಅಲ್ಲಿ. ಹೀಗಾಗಿ ಹೆಚ್ಚುವರಿ ಕ್ಷೇತ್ರ ಅಲ್ಲೆ ಸುಮಾರಾಗಿ ೨೧ ನೂರು ಎಕರೆ ಬಂತು. ೧೧೦ ಭೂರಹಿತ ಕುಟುಂಬಗಳಿಗೆ ಅದನ್ನ ಹಂಚಿದಿವಿ.

ಸಂ: ಈಗ್ಲೂ ಅವರು ಅನುಭವಿಸ್ತಿದ್ದಾರಾ?

ನೀಲ: ಈಗ್ಲೂ ಅದೆ. ಪ್ರತ್ಯಕ್ಷ ಕಾಣೊ ಅಂಥಾ ವಿಷಯ ಅದು. ಮತ್ತೆ ಸುಮಾರು ೩೫೦ ರೈತ ಕುಟುಂಬಗಳಿಗೆ ಪರಮಾವಧಿ ೪೮ ಎಕರೆ ಲಿಮಿಟ್ ಮಾಡಿದ್ವಿ.

ಸಂ: ಸಾರ್, ನಾವು ಗೋಪಾಲಗೌಡರ ಬಗ್ಗೆ ಚರ್ಚೆ ಮಾಡ್ತಿದ್ವಿ. ಅವರು ಪವರ್ ಪಾಲಿಟಿಕ್ಸ್‌ಗೆ, ರಾಷ್ಟ್ರೀಯ ರಾಜಕಾರಣಕ್ಕೆ ಹೋದ ಮೇಲೆ ಒಂಥರ ಮುಖವಾಡಗಳಲ್ಲಿ ಬದುಕ್ತಾ ಹೋದ್ರು ಅಂತನ್ನೋ ಮಾತನ್ನ ನೀವು ಒಂದುಕಡೆ ಬರ್ದಿದೀರಿ. ಅಂಥ ಸ್ಥಿತಿ ಯಾಕ್ ಬಂತು?

ನೀಲ: ಒಟ್ಟು ರಾಜಕೀಯ ವಾತಾವರಣನ ಹಾಗಿತ್ತು ಅಂತ ನನಗನಸ್ತದೆ. ಅದ್ರೊಳಗ ಅವ್ರು ಹಾಗ ರೂಪಿಸ್ಕೊಂಡ್ರು. ಅವರು ಮೊದಲೇ ಇಲ್ಲೆಲ್ಲೋ ಒಕ್ಕಲಿಗರದು ಯಾವುದೋ ಒಂದು ಬೋರ್ಡಿಗ್ ವ್ಯವಸ್ಥಾಪಕರಿದ್ರು ಅಂತ ನಾನ್ ಕೇಳಿದ್ದೆ. ಆಮೇಲೆ ಕಾಗೋಡು ಹೋರಾಟದೊಳಗೆ ಅವರಿಗೊಂದ್ ಸ್ವಲ್ಪ ಪ್ರಾಮುಖ್ಯತೆ ಬಂತು. ೧೯೫೨ನೇ ಇಸವಿಯೊಳಗ ಚುನಾವಣೆಯಲ್ಲಿ ಆರಿಸಿ ಬಂದರು. ಆಮೇಲೆ ೧೯೫೬ನೇ ಇಸವಿಯೊಳಗ ಪಿಎಸ್‌ಪಿ ಮೊದಲು ಸ್ಪ್ಲಿಟ್ ಆಯ್ತು. ಸ್ಪ್ಲಿಟ್ಟಾಗಿ ಲೋಹಿಯಾ ವಾದಿಗಳಾದವರೆಲ್ಲಾ ನಾವು ಪಿಎಸ್‌ಪಿ ಯಿಂದ ಹೊರಗಡೆ ಬಂದ್ಬಿಟ್ವಿ. ಆಗ ಹೊರಬಂದವರ ಪೈಕಿ ಗೋಪಾಲಗೌಡ್ರೂ ಒಬ್ಬರು. ಗೌಡ್ರೂ ನಾವೂ ೧೯೫೬ನೇ

ಇಸವಿ ಹೈದ್ರಾಬಾದಿನೊಳಗೆ ಫೌಂಡೇಶನ್ ಕಾನ್‌ಫೆರೆನ್ಸ್ ಮಾಡಿದ್ವಿ. ಆಗ ರಾಷ್ಟ್ರೀಯ ಕಾರ್ಯಕಾರಿ ಸಮಿತಿಗೆ ಕರ್ನಾಟಕದ ಪರವಾಗಿ ನಾವು ಗೋಪಾಲ್‌ಗೌಡ್ರನ್ನ ಕೊಟ್ವಿ. ಆಮೇಲೆ ಅವ್ರು ಬಹಳ ಯೋಚನೆಯಲ್ಲದಲೇನೆ ಕಳೆದ್ರು.

ಸಂ: ಆಡಳಿತ ಪಕ್ಷಗಳ ಜೊತೆಗೆ ಮೈತ್ರಿ ಬೆಳೆಸಿದರಾ?

ನೀಲ: ಇಲ್ಲ, ಹಾಗೆ ಹೇಳಲಾರೆ.

ಸಂ: ಲೋಹಿಯಾರ ತರಹ ಅಧಿಕಾರಾಸ್ಥರ ಎದುರಾಳಿಯಾಗಿ ಇರ್‌ತಾ ಇದ್ರಾ?

ನೀಲ: ಇರತಾ ಇದ್ರು. ಎಲ್ಲೂ ಕಾಂಪ್ರಮೈಸ್ ಮಾಡ್ಕೊಳೋ ಅಂತಹವರಲ್ಲಾ ಗೋಪಾಲ ಗೌಡ್ರು. ಆದ್ರೆ ನನಗ ಅನಿಸದಂಗ ಅವರು ಯಾವುದೇ ಒಂದು ಸಂಘಟನೆಯನ್ನ ಬಲವಾಗಿ ಕಟ್ಲಿಲ್ಲ. ಹೋರಾಟದ ಹಿನ್ನೆಲೆಯಿಂದ ಬಂದಿದ್ರೂ ಕೂಡಾನೂ ಹೋರಾಟನ ಅಲಕ್ಷಿಸಿದ್ರು ಅಂತನ್ನೋದೇ ಅವ್ರಮ್ಯಾಲೆ ಇರೊ ಆಕ್ಷೇಪ.

ಸಂ: ನೀವು ರೋಣದ ಶಾಸಕರಾಗಿದ್ರಿ. ಚುನಾವಣೆಗೆ ನಿಂತಿದ್ದು ಯಾವ ಪಕ್ಷದಿಂದ?

ನೀಲ: ಪ್ರಜಾ ಸೋಶಲಿಸ್ಟ್ ಪಾರ್ಟಿನಿಂದನ. ೫೭ರಲ್ಲಿ ಅದು, ವಿಭಜನೆಗೊಂಡ ನಂತರ.

ಸಂ: ನಿಮ್ಮ ಎದುರಾಳಿ ಯಾರು ಆವಾಗ?

ನೀಲ: ಆವಾಗ ಇನಾಮತಿ ಅಂತ ಇದ್ದರ್ರಿ ಕಾಂಗ್ರೆಸ್‌ನಿಂದ. ನಮ್ಮಲ್ಲೆ ಬಹಳ ದೊಡ್ಡ ಶ್ರೀಮಂತರಿದ್ರು. ಸುಮಾರಾಗಿ ಒಂದೂವರಿ ಸಾವಿರ ಎಕರೆ ಜಮೀನ್ದಾರರು. ಮತ್ತೆ ಇಲ್ಲಿ ಡಿಸ್ಟ್ರಿಕ್ಟ್ ಕೋ-ಆಪರೇಟಿವ್ ಬ್ಯಾಂಕಿಂದು ಮ್ಯಾನೇಜಿಂಗ್ ಡಾಯ್ರೆಕ್ಟರಿದ್ರು.

ಸಂ: ರೋಣದಂಥ ಒಂದು ಊರಿನಲ್ಲಿ ಯಾವ ಸಮಾಜವಾದಿ ಹೋರಾಟಗಳ ಹಿನ್ನೆಲೆಯಿಲ್ಲದೆ ಊರಿನಲ್ಲಿ ಇದ್ದಕ್ಕಿದ್ದ ಹಾಗೆ ನೀವು ಗೆದ್ದು ಬರಲಿಕ್ಕೆ ಹೆಂಗ್ ಸಾಧ್ಯ ಆಯ್ತು?

ನೀಲ: ಅದು ಆಕಸ್ಮಿಕನಾ. ಅಲ್ಲೆ ನಾನು ರಾಜಕೀಯವಾಗಿ ಯಾವ ಹೋರಾಟಗಳನ್ನ ಸಂಘಟಿಸಲಿಲ್ಲ. ಇವತ್ತಿನವರಗೂ ಅಲ್ಲಿ ಯಾವ್ ಹೋರಾಟನ ಮಾಡ್ಲಿಲ್ಲ. ನಾನು ಆಕಸ್ಮಿಕವಾಗಿನ ನಿಂತಾಗ ಜನಕ್ಕ, ಕಾಂಗ್ರೆಸ್ ಮೇಲೆ ಒಂದು ರೀತಿ ಅಸಂತೃಪ್ತಿ ಹುಟ್ಟಿತ್ತು. ಇನಾಮತಿಯವ್ರು ಮೊದಲ ಕಾಂಗ್ರೆಸ್ ವಿರೋಧಿಗಳು. ಬ್ರಿಟಿಶ್ ಸರ್ಕಾರದ ಪಕ್ಷಪಾತಿಗಳಾದ್ದವ್ರು. ಕಾಂಗ್ರೆಸ್ ಕಾರ್ಯಕರ್ತನ್ನ ಹೋರಾಟ ಸಂದರ್ಭದಲ್ಲಿ ಅವ್ರನ್ನ ಬಹಳಷ್ಟು ಛಲನೆಗೆ ಈಡು ಮಾಡಿದಂಥವ್ರು. ಅವ್ರು ಕಾಂಗ್ರೆಸ್ ಹುರಿಯಾಳಾದದಕ್ಕ ಅದ್ರಲ್ಲು ಕಾಂಗ್ರೆಸ್ ಕಾರ್ಯಕರ್ತರಿಗೆ ಸ್ಥಳೀಯವಾಗಿ ಬಹಳ ಅಸಂತುಷ್ಟಿಯಿತ್ತು. ಮೇಲಾಗಿ ನಾನು ಅವ್ರೊಂದಿಗೆ ನಾಲ್ವತ್ತೆರಡರ ಕ್ವಿಟ್ ಇಂಡಿಯಾ ಚಳುವಳಿಯೊಳಗ ಭಾಗವಹಿಸಿ ಅವರೊಂದಿಗೆ ಸರಿಯಾದ ಸಂಪರ್ಕ ಸಂಬಂಧ ಇತ್ತು. ಇದ್ರೂ ಕೂಡ, ಅಲ್ಲಿ ಕಾಂಗ್ರೆಸ್ ಕಾರ್ಯಕರ್ತರೆ ನನ್ನನ್ನ ಆರಿಸಿ ತರ್ಲಿಕ್ಕೆ ಕಾರಣರಾದ್ರು.

ಸಂ: ಆದರೆ ಮುಂದಿನ ಎಲೆಕ್ಷನಲ್ಲಿ ನೀವು ಸೋತಿರಿ..

ನೀಲ: ಎರಡು ಸಲ ಸೋತೆ. ಕಾರಣ ಅಂತಂದ್ರೆ, ನನ್ನಹತ್ರ ಆರ್ಥಿಕ ಬಲ ಇಲ್ಲದ್ದು. ಇಲ್ಲದೆ ಇದ್ರೆ ಚುನಾವಣೆ ಪ್ರಚಾರದ ಇಡೀ ಅವಧಿಯೊಳಗ, ಎರಡೂ ಸಲಕ್ಕನೂ 'ನಿಮ್ ಹೊರ್ತು ಯಾರಿದ್ದಾರ? ನೀವೇ ನಮ್ಮ ತಾಲೂಕಿನ ಸರಿಯಾದ ನಾಯಕರಾಗ ಬಲ್ಲಿರಿ. ನೀವು ನಿಶ್ಚಿಂತೆಯಿಂದ ಆರಿಸಿ ಬರ್ತೀರಿ' ಅಂತಾ ಎಲ್ಲಾ ಜನ ಹೇಳ್ತಿದ್ರು. ಆದರೆ ಕೊನಿಕೊನಿಗೆ ನನ್ನ ಪ್ರಚಾರಬಲ ಕಡಿಮಿ ಆಗ್ಬಿಡ್ತಿತ್ತು. ಹಣಕಾಸನ್ನ ಪೂರೈಸ್ಲಿಕ್ಕ ಆಗ್ತಿದ್ದಿಲ್ಲ.

ಸಂ: ಪವರ್ ಪಾಲಿಟಿಕ್ಸ್‌ನ ಕೆಲವು ಸತ್ಯಗಳು ಆಗ ನಿಮಗೆ ಗೊತ್ತಾಗಿರ್ಬೇಕು. ಈಗಲೂ ಪರಿಸ್ಥಿತಿ ಹಾಗೆ ಇದೆಯಾ?

ನೀಲ: ಇಲ್ಲಾರಿ ಇಲ್ಲ. ಗೆಲ್ಲುವ, ಸೋಲುವ ವಿಧಾನಗಳು ಛೇಂಜಾಗಿದಾವ ಈಗ, ಛೇಂಜಾಗಿ ದಾವ. ನಾನು ಮೊದಲನೇ ಸಲ ಆರಿಸಿ ಬರುವಾಗ ಇನ್ನೂ ಸ್ವಾತಂತ್ರ್ಯ ಹೋರಾಟದ್ದು ಸ್ವಲ್ಪ ನೆರಳು ಇರ್ತಿತ್ತು. ಆಗಿನ ಕಾಂಗ್ರೆಸ್ ಕಾರ್ಯಕರ್ತರು ಸ್ವಲ್ಪ ಆದರ್ಶದಿಂದ ಪ್ರೇರಿತರಾಗಿ ಇರ್ತಿದ್ರು.

ಸಂ: ಶಾಸಕರಾಗಿ ನಿಮ್ಮ ತೃಪ್ತಿಯ ಅನುಭವ ಅಂತ ಕೇಳಿದರೆ ಯಾವುದನ್ನ ಹೇಳ್ತೀರಿ?

ನೀಲ: ಶಾಸಕನಾಗಿ ನಂದು ಬೆಸ್ಟ್ ಎಕ್ಸ್‌ಪೀಯರೆನ್ಸು ಅಂದ್ರೆ, ೧೯೫೬ರ ಮುಂಬೈ ಭೂ ಸುಧಾರಣ ಕಾರ್ಯಕ್ರಮ. ನಮ್ಮದು ಮುಂಬೈ ಕಾಂಪೊಸಿಟ್ ಸ್ಟೇಟಿತ್ತು. ಗುಜರಾತಿ ಗಳು, ಮಹಾರಾಷ್ಟ್ರಿಕರು ಮತ್ತು ಕರ್ನಾಟಕದವ್ರು ಇರ್ತಿದ್ರು. ಭೂಸುಧಾರಣೆ ಕಾನೂನು ಚರ್ಚೆಗೆ ಬಂದಾಗ, ಇಲ್ಲಿ ಕರ್ನಾಟಕದ ನಾಲ್ಕು ಜಿಲ್ಲೆಗಳ ಶಾಸಕರು, 'ಇಲ್ಲಾ, ನಾವ್ ಇನ್ನು ಒಂದೆರಡ್ ವರ್ಷದೊಳಗ ಬೇರೆ ರಾಜ್ಯವಾಗಿ ಹೋಗ್ತೀವಿ. ನಮ್ಮ ಮ್ಯಾಲೆ ನೀವು ಈ ಭೂಶಾಸನವನ್ನ ಯಾಕ ಹೇರ್ತಿದೀರಿ' ಅಂತಿಳ್ಕೊಂಡು ಅಸೆಂಬ್ಲಿಗೆ ಬಹಿಷ್ಕಾರ ಹಾಕಿದ್ರು. ಇವ್ರು ಬಹಳಷ್ಟು ಭೂಮಾಲಕರ ಪರವಾಗಿದ್ದೋರು. ಕಾಂಗ್ರೆಸ್ ಅಂತಂದ್ರ, ಭೂಮಾಲಕ ವರ್ಗನ ಪ್ರತಿನಿಧಿಸೋದೇ ಆಗ್ಬಿಟ್ಟಿತ್ತಲ್ಲ ಆಗ. ಹೀಗಾಗಿ ನಾನು ಒಬ್ಬೊಬ್ನ ಮಾತ್ರ ಇವರನ್ನ ಪ್ರತಿಭಟಿಸಿ, ಈ ಭೂಶಾಸನದ ಪರವಾಗಿ ಭಾಷಣ ಮಾಡ್ದೆ. ಮತ್ತ ಅದನ್ನ ಸಪೋರ್ಟ್ ಮಾಡ್ದೆ.

ಸಂ: ಸರಕಾರದಲ್ಲಿ ಯಾರಿದ್ರು ಆವಾಗ?

ನೀಲ: ಚೀಫ್ ಮಿನಿಸ್ಟರ್ ಮುರಾರಜಿ ದೇಸಾಯಿ ಅವ್ರು. "ಟಿಲರ್ ವುಡ್ ಬಿ ದ ಓನರ್ ಆಫ್ ದಲ್ಯಾಂಡ್ "ಅಂತಿಳ್ಕೊಂಡು ಘೋಷಣೆ ಮಾಡುವಂಥ ಈ ಭೂಶಾಸನ, ೧೯೫೭ ಏಪ್ರಿಲ್ ೧ನೇ ತಾರೀಕನ್ನ 'ಟಿಲರ್ಸ್ ಡೇ' ಅಂತ ಅಬ್ಸರ್ವ್ ಮಾಡ್ಬೇಕು ಇತ್ತು. ಆದ್ರೆ ಮುರಾರಜಿ ಅವರಿಗೆ ಈ ಶಾಸನದ ಬಗ್ಗೆ ಬಹಳಷ್ಟು ಒಲವು ಇದ್ದಿದ್ದಿಲ್ಲ, ನಿಜವಾಗಿನೂ.

ಸಂ: ದೇವರಾಜ ಅರಸು ಅವರ ಕಾಲದಲ್ಲಾದ ಭೂಸುಧಾರಣೆಗೂ ನೀವು ಹೇಳ್ತಿರೋ ಭೂಸುಧಾರಣೆಗೂ ನಡುವೆ ಏನು ವ್ಯತ್ಯಾಸ?

ನೀಲ: ಮುಂಬೈ ಭೂಸುಧಾರಣೆ ಇದ್ರೊಳಗ, ಮಾಲಕಗಾ ತಾನು ಭೂಮಿನ ಸಾಗುವಳಿ ಮಾಡೋ ಅಪೇಕ್ಷೆ ಇತ್ತು ಅಂತಂದ್ನಪ್ಪ ಅಂದ್ರ, ಅದನ್ನ ಬಿಡಿಸಿಕೊಳ್ಳೊ ಒಂದ್ ಛಾನ್ಸ್ ಕೊಟ್ಟಿದ್ರು ಅವರಿಗೆ. ನಾಲ್ವತ್ತೆಂಟು ಎಕರೆ ಸೀಲಿಂಗ್ ಒಳಪಟ್ಟು, ತಾನು ಸ್ವತ: ಸಾಗುವಳಿ ಮಾಡೊದಿತ್ತಂದ್ರೆ, ರೈತರಿಂದ ಭೂಮಿನ ಬಿಡಿಸ್ಕೊಳ್ಳಿಕ್ಕೆ ಅಂತಿಳ್ಕೊಂಡು ಒಂದು ಅವಕಾಶ್ ಕೊಟ್ಟಿದ್ರು. ಆದರೆ ಇಲ್ಲೆ ಅರಸು ತಂದ ಸುಧಾರಣೆಯೊಳಗೆ ಆ ರೀತಿ ಅವಕಾಶ್ ಇರ್ಲಿಲ್ಲ.

ಸಂ: ಪರಿಣಾಮದ ದೃಷ್ಟಿಯಿಂದ ಅರಸು ಕಾಲದ ಭೂಸುಧಾರಣೆಯಿಂದ ಹೆಚ್ಚು ಉಪಯೋಗ ಆಗಿದೆ ಅಂತನ್ನಬಹುದಾ?

ನೀಲ: ನನಗೆ ಹಾಗೇನ್ ಕಾಣಿಸಲಿಲ್ಲ. ಕೆಲವು ಮಧ್ಯಮ ವರ್ಗದ ಭೂಮಾಲಕರು ಹೋಗಿರಬಹುದು. ದೊಡ್ಡ ಭೂಮಾಲಕ್ರು ಹಾಗೇ ಉಳಕೊಂಡದಾರೆ.

ಸಂ: ನಿಮ್ಮ ಹೆಬ್ಬಳ್ಳಿ ಭೂಹೋರಾಟ ಅರಸು ಭೂಸುಧಾರಣೆಗೆ ಮುಂಚಿಂದೋ?

ನೀಲ: ಬಹಳ ಮುಂಚೆ ನಡದದ್ದು. ಅದು ೧೯೫೨ನೇ ಇಸ್ವಿಯೊಳಗ ಹೋರಾಟ ನಡದಿತ್ತದು.

ಸಂ: ನೀವು ಶಾಸಕರಾಗಿ ಕಂಡ ಅಸಹಾಯಕ ಸಂದರ್ಭಗಳು ಇದ್ದಾವಾ?

ನೀಲ: ಅಂಥಾ ಪೇನ್ ಫುಲ್ ಎಕ್ಸಪೀರಿಯನ್ಸ್ ಏನ್ ಇದ್ದಿದ್ದಿಲ್ಲ.

ಸಂ: ಅಂದ್ರೆ, ಶಾಸಕರಾಗಿ ಕೂಡ ನಿಮ್ಮ ಆದರ್ಶಗಳನ್ನು ಈಡೇರಿದಲಿಕ್ಕಾಗದ ಒಂದು ಪೊಲಿಟಿಕಲ್ ಸಿಚಿಯೇಶನ್...

ನೀಲ: ಹೌದೌದು, ಆಗ್ತಿತ್ತು, ಹ್ಞೂ.... ಹೇಳ್‌ಬೇಕಂದ್ರೆ ಈ ರಾಜ್ಯ ಪುನರ್‌ರಚನೆ ಆಯೋಗದ ವರದಿ ಫಜಲಲಿ ಕಮಿಶನ್ ವರದಿ, ಶಾಸನಸಭೆಯೊಳಗ ಅದು ಚರ್ಚೆಗೆ ಬಂದಾಗ, ಮುಂಬೈ ವಿಷಯದೊಳಗ ಬಹಳಷ್ಟು ಮಹಾರಾಷ್ಟ್ರಿಗರು ನೊಂದು ಕೊಂಡಿದ್ರು. ಕಾರಣ ಅಂತಂದ್ರ 'ಮುಂಬೈನ ಮಹಾರಾಷ್ಟ್ರದಿಂದ ಪ್ರತ್ಯೇಕಿಸ್ಬೇಕು. ಮುಂಬೈನ ಒಂದು ಕೇಂದ್ರಾಡಳಿತ ಪ್ರದೇಶ ಮಾಡಬೇಕು' ಅಂತಿಳ್ಕೊಂಡು ಒಂದು ಸೂಚನೆ ಇತ್ತು. ಅದನ್ನ ಮಹಾರಾಷ್ಟ್ರಿಗರು ಬಹಳ ಉಗ್ರವಾಗಿ ಪ್ರತಿಭಟಿಸಿದ್ರು. ಆ ವರದಿ ಚರ್ಚೆಗೆ ಬಂದಾಗ ನಾನ್ ಹೇಳಿದ್ದಂದ್ರೆ- 'ಮುಂಬೈ ಮಹಾರಾಷ್ಟ್ರದ್ ನೆಲದಲ್ಲದ. ಉದರದಲ್ಲದ. ಅದನ್ನ ನಾವುಗುಜರಾತಿಗಳು ಅಥವಾ ಕರ್ನಾಟಕದವರು ನಮ್ಗೂನು ಅದ್ರಲ್ಲಿ ಭಾಗ ಇದೆ ಅಂತಿಳ್ಕೊಂಡು ಏನಾದ್ರೂ ಮಾಡೋದು ತಪ್ಪಾಗ್ತದ. ಅದು ಮಹಾರಾಷ್ಟ್ರದ ರಾಜಧಾನಿಯಾಗಿ ಇರ್ಬೇಕು ಅಂತಿಳ್ಕೊಂಡು.. ಆಗ ಮಹಾರಾಷ್ಟ್ರಿಗರಿಗೆ ನಾನು ಭಾಳ ಪ್ರಿಯ ಆಗ್ಬಿಟ್ಟೆ. ಯಾಕಂದ್ರೆ ಪ್ರತಿಯೊಬ್ಬರೂ ಗುಜರಾತಿಗಳು ಆತು, ಕರ್ನಾಟಕದವ್ರ್ ಆತು, ಮಹಾರಾಷ್ಟ್ರಕ್ಕ ಮುಂಬೈ ಸಿಗಬಾರ್ದು ಅಂತನ್ನ ಪ್ರಯತ್ನದೊಳಗ ಇದ್ರು.

ಸಂ: ಅಸೆಂಬ್ಲಿ ಚರ್ಚೆಗಳೆಲ್ಲ ಯಾವ ಭಾಷೆಯಲ್ಲಿ ನಡೀತಿದ್ವು? ನೀವು ಮರಾಠಿಯಲ್ಲಿ ಮಾತಾಡ್ತಿದ್ರಾ ಅಥವಾ ಇಂಗ್ಲಿಶಿನಲ್ಲೋ..

ನೀಲ: ಇಲ್ಲಿಲ್ಲ. ನಾ ಇಂಗ್ಲಿಶ್‌ನಲ್ಲಿ ಮಾತಾಡ್ತಿದ್ದೆ...

ಸಂ: ನಿಮ್ಮ ಕಾಲದಲ್ಲಿ ಮುಂಬೈ ವಿಧಾನಸಭೆಗೆ ಕರ್ನಾಟಕದಿಂದ ಪ್ರಮುಖ ರಾಜಕಾರಣಿಗಳು ಯಾರಿದ್ರು?

ನೀಲ: ಅಂಥಾವರು ಯಾರೂ ಇದ್ದಿದ್ದಿಲ್ರಿ, ಯಾರೂ ಇದ್ದಿದ್ದಿಲ್ಲ. ರಾಜ್ಯ ಪುನಾರಚನೆ ಆದ ನಂತರ, ಬೆಂಗಳೂರ್ಗೆ ಹೋದ ನಂತರ, ಕೆಲವು ಒಳ್ಳೇ ಡಿಬೇಟರ್ಸ್ ನ ನೋಡ್ದೆ. ಕೆ ಪಟ್ಟಾಭಿರಾಮನ್ ಅಂತ ಇದ್ರು. ಆಮೇಲೆ ಜಗಳೂರ ಇಮಾಂ ಸಾಹೇಬ್ರು ಇದ್ರು. ನಮ್ಮ ಗೋಪಾಲ್ ಗೌಡ್ರು ಭಲೋ ಡಿಬೇಟರ್ಸ್ ಇದ್ರು.

ಸಂ: ಕರ್ನಾಟಕದ ಏಕೀಕರಣವಾದ ಮೇಲೆ ನಿಮ್ಮ ಮುಂಬೈ ವಿಧಾನಸಭಾ ಸದಸ್ಯತ್ವ ವರ್ಗಾವಣೆ ಆಯ್ತಾ ?

ನೀಲ: ಹೌದ್ರಿ. ಕರ್ನಾಟಕ ವಿಧಾನ ಸಭೆಯೊಳಗೂ ವರ್ಕ್ ಮಾಡಿದೆ.

ಸಂ: ನಮ್ಮ ದೇಶ್‌ದಲ್ಲಿ, ಹೋರಾಟಗಳಿಗೆ ಧರ್ಮ ಮತ್ತು ಜಾತಿಗಳು ಬಿರುಕು ತರ್ತವೆ ಅಂತ ಹೇಳಲಾಗ್ತದೆ. ಅಂಥದ್ದೇನ್ನಾದರೂ ಅನುಭವ ನಿಮಗೆ ಆಯಿತಾ?

ನೀಲ: ನನಗೇನು ಅಂಥಾದ್ ಎಕ್ಸಪೀರಿಯನ್ಸ್ ಇಲ್ಲ. ಯಾಕಂದ್ರೆ ನಾನು ಕೆಳವರ್ಗದ ಜನರನ್ ಸಂಘಟಿಸ್ತಿದ್ದೆ. ಅಲ್ಲೆ ಮೇಲ್ಜಾತಿಯವಾರಾರೂ ಹೆಚ್ಚು ಜನ ಬರ್ತಿದ್ದಿಲ್ಲ.

ಸಂ: ಸಂಡೂರು ಭೂಹೋರಾಟ ಸಮಾಜವಾದಿ ಪಾರ್ಟಿಯಿಂದಲೇ ಆಗಿದ್ದಾ?.

ನೀಲ: ಹೌದು, ಸೊಂಡೂರು ಹೋರಾಟಕ್ಕ ಅಲ್ಲಿ ಮುಖ್ಯತಾ ಎಲಿಗಾರ್ ತಿಮ್ಮಪ್ಪ ಅಂತ ಇದ್ರು. ಜನನಾಯಕರು. ಬಹಳ ಒಳ್ಳೆ ಸ್ಥಳಿಕರು ಕಾರ್ಯಕರ್ತರು ಇದ್ರು. ಅವ್ರು ಮತ್ತೆ ಎಸ್ ವೆಂಕಟರಾಮ್ ಇಬ್ರೂ ಕೂಡ್ಕೊಂಡು ಘೋರ್ಪಡೆ ಅವರ ವಿರುದ್ಧ ಹೋರಾಟ ಮಾಡಿದ್ರು. ಸ್ವಲ್ಪ ಬುದ್ಧಿ ಒದಗಿಸಿ ಕೊಡಂತೌವ್ರು ಎಸ್ ವೆಂಕಟರಾಂ. ಆದರ ಏನ್ ಸಕ್ಸೆಸ್ ಪುಲ್ ಆಗ್ಲಿಲ್ಲ ಆ ಹೋರಾಟ.

ಸಂ: ಯಾಕೆ?

ನೀಲ: ಹ್ಯಾಗ ಇದು ಆಯ್ತೊ ಏನೊ ಗೊತ್ತಾಗಿಲ್ಲ ನನಗ.

ಸಂ: ಕಾಗೋಡು ಭೂಹೋರಾಟದ ಬಗ್ಗೆ ನೀವು "ಅದೊಂದು ರಾಹುಗನ್ನಡಿ ಇಟ್ಟು ನೋಡಿದ ಚಿತ್ರ" ಅಂತ ಹೇಳಿದೀರಿ. ಅದನ್ನ ಸ್ವಲ್ಪ ವಿವರಿಸಿ.

ನೀಲ: ಕಾಗೋಡು ಹೋರಾಟನಾ ಮೂಲತಾ ಗಣಪತಿಯಪ್ಪ ಅನ್ನವ್ರು, ಕೆ ಜೆ ಒಡೆಯರ್ ವಿರುದ್ಧ ಸಂಘಟಿಸಿದ್ದು. ಅಂವ ಮೂಲತ: ಕಾಂಗ್ರೆಸ್ಸಿಗ.

ಸಂ: ಗಣಪತಿ ಅಪ್ಪ..

ನೀಲ: ಗಣಪತಿ ಅಪ್ಪನೂ ಕಾಂಗ್ರೆಸ್ಸಿಗನ. ಒಡೆಯರ್ ಅವ್ರು ಕಾಂಗ್ರೆಸ್ ಎಂಪಿ ಇದ್ರು. ಮತ್ತೆ ಬಹಳ ಸಂಭಾವಿತ ಇದ್ರು. ಅಷ್ಟು ದೊಡ್ಡ ಜಮೀನ್ದಾರೀನೂ ಅಲ್ಲ ಅವರದು, ಏನು. ಇನ್ನ ಅಲ್ಲಿ ಇದ್ದಿದ್ದು ಈಡಿಗರ ಸಂಘಟನೆ. ಆ ಹೋರಾಟದೊಳಗ ಸ್ವತ: ದಲಿತ್ರು ಬರ್ಲಿಲ್ಲ. ಹೋರಾಟಕ್ಕ ವಿರುದ್ಧ ಇದ್ರು ಅವರು.

ಸಂ: ಅದರ ದೌರ್ಬಲ್ಯ ದಲಿತರು ಇರ್ಲಿಲ್ಲ ಅನ್ನೋದು ಒಂದೇನ ?

ನೀಲ: ಅಲ್ಲ. ಮತ್ತೆ ಭೂರಹಿತ ಕೃಷಿಕೂಲಿಕಾರರು ಅದರ ವಿರುದ್ಧ ಇದ್ರು. ಮೇಲಾಗಿ ಡಾ. ರಾಮಮನೋಹರ ಲೋಹಿಯಾ ಅವರಂಥ ಮುಖಂಡರು ಬಂದು, ಅದ್ರೊಳಗ ಪ್ರತ್ಯಕ್ಷ ಭಾಗ್ ವಹಿಸಿ ಸೆರೆಯಾಳಾದ್ರು ಕೂಡಾನು, ಅದು ಫಲದಾಯಿ ಆಗ್ಲಿಲ್ಲ.

ಸಂ: ಸಮಾಜವಾದಿ ಪಕ್ಷದ ಸಂಘಟನೆ ಕಡೆಯಿಂದ ಏನ್ ಸಮಸ್ಯೆ ಇತ್ತು, ತಾತ್ವಿಕವಾಗಿ?

ನೀಲ: ಅದು.. ಭೂರಹಿತರನ್ನ ಹೆಚ್ಚು ಇನವಾಲ್ವ್ ಆಗೋವಂತೆ ಮಾಡ್ಲೇ ಇಲ್ಲ.

ಸಂ: ನೀವು ಚಳುವಳಿಗಾರರಾಗಿ ಕರ್ನಾಟಕದಲ್ಲಿ ಅನೇಕ ಮಾದರಿಯ ಹೋರಾಟಗಳಿಗೆ ಸಾಕ್ಷಿಯಾಗಿದೀರಿ. ದಲಿತ ಸಂಘರ್ಷ ಸಮಿತಿಯವರದಿರಬಹುದು, ನಕ್ಸಲೈಟ್ ಹೋರಾಟಗಳಿರಬಹುದು........ ಈ ಭೂಹೋರಾಟಗಳ ಮಾದರಿ ಬಗ್ಗೆ ಕಾಮೆಂಟ್ ಮಾಡಿ..

ನೀಲ: ಡಿಎಸ್ ಎಸ್ ಹೋರಾಟ ಒಂದು ವರ್ಗಕಲಹ ಅಂತಿಳ್ಕೊಂಡು ಯೋಗ್ಯವಾದ ಹೋರಾಟನ. ಆದ್ರ ಅದು ಇನ್ನಷ್ಟು ತನ್ನ ಬೇಸನ್ನ ವಿಸ್ತರಿಸಿಕೊಳ್ಳಬೇಕಾಗ್ತದ. ಬರೇ ದಲಿತರಷ್ಟೇ ಅಲ್ಲ ಅಂ.. ದಲಿತರ ಸಮಾನ ಆಲೋಚನೆ ಇದ್ದವ್ರನ್ನ ತಮ್ಮ ಹೋರಾಟದೊಳಗ ಇನವಾಲ್ವ್ ಮಾಡ್ಕೊಬೇಕು. ಡಾ. ಲೋಹಿಯಾರವ್ರು ಯಾವಾಗ್ಲೂ ಅದನ್ನೇ ಹೇಳ್ತಿದ್ರು. ಡಾ. ಅಂಬೇಡ್ಕರ್ ಅವರನ್ನ ದಲಿತ್ರ ನಾಯಕರಾಗದೆ, ರಾಷ್ಟ್ರನಾಯಕರಾಗ್ಲಿಕ್ಕೆ ಪ್ರಯತ್ನ ಮಾಡ್ಬೇಕು ಅಂತಿಳ್ಕೊಂಡು ಹೇಳ್ತಿದ್ರು. ರಾಷ್ಟ್ರ ನಾಯಕರಾಗೋ ಅರ್ಹತೆ ಇತ್ ಅವ್ರಿಗೆ.

ಸಂ: ದಲಿತರು ವರ್ಗನೆಲೆಯಲ್ಲಿ ಕಟ್ಟಬೇಕಾದ ಹೋರಾಟಗಳಿಗೆ ಅಂಬೇಡ್ಕರ್ ಅವರ ಆಲೋಚನೆಗಳೇ ಒಂದು ಅಡ್ಡಿ ಅಂತ ಹೇಳ್ತಿದೀರಾ?

ನೀಲ: ಹೂಂ.... ಒಂದು ರೀತಿ ಹೌದು. ಯಾಕಂದ್ರೆ Ideologically he was apposed to socialism!

ಸಂ: ಮಾರ್ಕ್ಸ್‌ವಾದಕ್ಕೆ ಕೂಡ.

ನೀಲ: ಹೌದೌದು. Even to the marxism.

ಸಂ: ಆದರೆ ಸವರ್ಣೀಯ ಸಮಾಜದಲ್ಲಿ ದಲಿತರು ಹೆಂಗೆ ಸ್ವಾಭಿಮಾನ ಪಡ್ಕೊಳ್ಳಬೇಕನ್ನೋ ವಿಷಯದಲ್ಲಿ ಅವರ ಚಿಂತನೆ ಬಹಳ ಪ್ರಖರವಾಗಿತ್ತು.

ನೀಲ: ಹೌದು. ಬಹಳ ಪ್ರಖರವಾಗಿತ್ತು.......

ಸಂ: ಸಾಹಿತ್ಯಕ್ಕೆ ಸಂಬಂಧಿಸಿ ಕೆಲವು ಪ್ರಶ್ನೆ ಕೇಳ್ತೀನಿ. ಅನೇಕ ಕನ್ನಡದ ಬಹಳ ಗಂಭೀರ ಓದುಗರಲ್ಲಿ ಒಬ್ಬರು. ನಿಮ್ಮ ಪ್ರಿಯವಾದ ಬರಹಗಾರ ಯಾರು?

ನೀಲ: ಲಂಕೇಶ್ ಅವರದು ಓದ್ತೀನಿ. ಆಂ.. ಈ ತೇಜಸ್ವಿ ಅವರ ಕಾದಂಬ್ರಿನ ಓದ್ತಿದೀನ್ರಿ. ದೇವನೂರು ನಮ್ಗ ಭಾಳ ಅರ್ಥವಾಗದೇ ಇದ್ರೂ 'ಕುಸುಮಬಾಲೆ' ಓದಿನ್ರಿ. ಮತ್ತಾ 'ಒಡಲಾಳ' ಓದಿದೀನಿ. ಬಹಳ ದೊಡ್ಡ್ ಬಿಡ್ರಿ, ಈ ಕಾರಂತ.

ಸಂ: ಸಾರ್, ಉತ್ತರ ಕರ್ನಾಟಕದ ರಾಜಧಾನಿ ಅಂತ ಕರೆಯುವ ಧಾರವಾಡದಾಗಿದೀರಿ. ಪ್ರತ್ಯೇಕ ರಾಜ್ಯ ಆಗ್ಬೇಕು ಅಂತ ಕೆಲವರು ಕೇಳ್ತಿದಾರೆ. ನಮಗೆ ಅನ್ಯಾಯ ಆಗಿದೆ ಅನ್ನೋ ಭಾವನೆ ಇದೆ. ಇಲ್ಲಿನ ಸಮಸ್ಯೆಗಳ ಬಗ್ಗೆ ಸಂಪರ್ಕ ಇಟ್ಟುಕೊಂಡಿರೋ ನಿಮಗೆ ಏನಸ್ತಿದೆ?

ನೀಲ: ಏನು ಅಂದ್ರೆ Uneven development ಅದೇ ಅದ. ಅದಕ್ಕೆ ಪ್ರತ್ಯೇಕ ರಾಜ್ಯದಿಂದ ಪರಿಹಾರ ಹುಡುಕೋದ್ ಬಹಳ ತಪ್ಪಾಗ್ತದ. ಹಾಗೇನ್ ಆಗಬಾರ್ದು. ಉತ್ತರ ಕರ್ನಾಟಕದವ್ರಿಗೂ ರಾಜ್ಯ ಆಳೋ ಅವಕಾಶಗಳು ಸಿಕ್ಕಿದ್ವು. ಸಾಧಾರಣ ಹೊಸ ರಾಜ್ಯದ ರಾಜಕೀಯ ರೂಪಿಸ್ಲಿಕ್ಕೆ ನಮ್ಮಲ್ಲೆ ಹೆಚ್ಚು ಪ್ರಾಧಾನ್ಯತೆ ಇತ್ತು ಆಗ.

ಸಂ: ಕರ್ನಾಟಕ ಏಕೀಕರಣ ಚಳುವಳಿನಲ್ಲಿ ನೀವು ಚಿಕ್ಕೋರು ಅನಿಸ್ತದೆ.

ನೀಲ: ಹೂಂ... ದೊಡ್ಡ ಮೇಟಿ ಅನ್ನಾದಾನಪ್ಪನವರ ಅಂತ ಇದ್ರು. ಮಂತ್ರಿ ಆಗಿದ್ದಕ್ಕಿಂತ ಬಹಳ ದೊಡ್ಡವರಿದ್ರು. ಬಹಳ ದೊಡ್ಡವರು. ಕರ್ನಾಟಕ ಏಕೀಕರಣ ಚಳುವಳ್ಯಾಗ ಬಹಳ ಪ್ರಮುಖ ಪಾತ್ರ ಅವುರ್ದು ಏನ್ರಿ. ನನ್ನ ಮ್ಯಾಲ ಅವ್ರಿಗೆ ಭಾಳ ಪ್ರೀತಿ ಇತ್ತು ಬಿಡ್ರಿ. ಕರ್ನಾಟಕ ಏಕೀಕರಣ ಚಳುವಳೀನ ಅವರ ಸಮೀಪ ಇದ್ದುಕೊಂಡು ನೋಡ್ಲಿಕ್ಕೆ ಅವ್‌ಕಾಶ ಸಿಕ್ತು ನನಗ.

ಸಂ: ಲೋಹಿಯಾ ತಮ್ಮ ಚಿಂತನೆಯಲ್ಲಿ ಹೆಣ್ಣಿನ ಬಗ್ಗೆ ಬಹಳ ಕಾಳಜಿ ಮಾಡದೋರು. ಲೋಹಿಯಾವಾದ್ದಲ್ಲೇ ಸ್ತ್ರೀಯರ ಮತ್ತು ಮುಸಲ್ಮಾನರ ಚೈತನ್ಯ ನಾಶ ಆಗ್ತಿರೋ ಬಗ್ಗೆ ಬಹಳ ಆರ್ತವಾದಂಥ ಚಿಂತನೆ ಇದೆ. ಆದರೆ ಯಾಕೆ ಸಮಾಜವಾದಿ ಪಕ್ಷದಲ್ಲಿ ಹಾಗೂ ಚಿಂತಕರಲ್ಲಿ ಸ್ತ್ರೀಯರು ಬಹಳ ಕಡಿಮೆ....

ನೀಲ: ಕಡಿಮೆ, ಕಡಿಮೆ ಅದಾ. ಆಲ್ ಇಂಡಿಯಾ ಲೆವೆಲ್ಲಿನ್ಯಾಗು. ಇಲ್ಲ.

ಸಂ: ಲೋಹಿಯಾವಾದಿಗಳು ಭಾರತದ ಬೇರೆಬೇರೆ ರಾಜಕೀಯ ಪಕ್ಷಗಳಲ್ಲಿ ಹರಿದುಹಂಚಿ ಹೋಗಿ ಬಿಟ್ಟಿದ್ದಾರೆ. ಅದು ನಿಮಗೆ ನಿಮ್ಗೊತ್ತಿದೆ. ಈ ರೀತಿಯ ತಾತ್ವಿಕ ಛಿದ್ರೀಕರಣಕ್ಕೆ ಮಾರ್ಕ್ಸ್‌ವಾದದ ಬಗೆಗಿನ ಅವರ ಅವರ್ಶನ್ ಕೂಡ ಕಾರಣವಿರಬಹುದು ಅಂತ ಅನ್ಸುತ್ತಾ?

ನೀಲ: ಇಲ್ಲ. ಅದರ ಅವರ್ಶನ್ ಕಾರಣ ಇಲ್ರಿ. ಅದು ಮೂಲತ: ಜಾರಿದ್ವೇ ೬೭ನೇ ಇಸ್ವಿಯಲ್ಲಿ. ಆಂಟಿ ಕಾಂಗ್ರೆಸ್ಸಿಸಮ್ ಗೆ ಪನ್ ನಾವು ಜಾರಿದ್ವಿ, ಆವಾಗ್ನಿಂದ ಡ್ರಿಫ್ಟ್

ಸುರುವಾಗಿಬಿಡ್ತು ಅದು. ಇವರು ಎಲ್ಲಿಯವರಗೂ ಹೋದ್ರು ಅಂದ್ರೆ, ಇಂದಿರಾಗಾಂಧಿ ಪ್ರೀವಿಪರ್ಸ್ ಅಬಾಲಿಶನ್ ಮಾಡಿದ್ದು, ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿದ್ದನ್ನೂ ವಿರೋಧಿಸಿದರು. ಏನ್ ಮಾಡೋದು!(ನಗು)

ಸಂ: ಸೋಶಿಯಲಿಸ್ಟರಿಗೆ ವರ್ಗಹೋರಾಟದ ಬಗ್ಗೆ ನಂಬ್ಕೆ ಇರಲಿಲ್ಲವಾದ್ದರಿಂದ..

ನೀಲ: ವರ್ಗ ಹೋರಾಟದ ನಂಬಿಕೆ ಸೋಶಲಿಸ್ಟರು ಕಳಕೊಬಾರದ್ರಿ. ಅದ್ರಿಂದಾ ಹರಿತವಾಗಿರ್ತದ ಮೊನೆ ಹೋರಾಟದ್ದು.

ಸಂ: ಜಾತಿ ವಿಶ್ಲೇಷಣೆಗೆ ಹೆಚ್ಚು ಒತ್ತು ಕೊಟ್ಟಿದ್ರಿಂದ ಈ ಸಮಸ್ಯೆಗಳಾಗಿರಬಹುದಾ?

ನೀಲ: ಇಲ್ಲಿಲ್ಲ. ಹಂಗೇನ್ ಆಗ್ಲಿಲ್ಲರಿ ಅದು. ಹ್ಯಾಂಗತಂದ್ರ ವರ್ಗ ಸಂಘರ್ಷ ಬಿಟ್ಟು ಇವ್ರು ಕೋಮುವಾದಿಗಳ ಜತೆ ಮತ್ತ ವಾಲಿದ್ರು.

ಸಂ: ಸಾರ್, ಭಾರತದ ರಾಜಕಾರಣದಲ್ಲಿ ಲೋಹಿಯಾವಾದದ ಪ್ರಭಾವಗಳನ್ನು ಕುರಿತು ಚರ್ಚೆ ನಡೀಬೇಕಾಗಿದೆ. ವೈದಿಕ ವಿರೋಧ ಅದರ ಬಹಳ ಮುಖ್ಯವಾದ ಲಕ್ಷಣ. ಇದರೊಳಗ ಪ್ರವೇಶ ಮಾಡ್ದೋರೆಲ್ಲ ಹೆಚ್ಚು ಕಡಿಮೆ ಎಲೈಟ್ ಫ್ಯೂಡಲ್ ಜಾತಿಯವರು.. ಕರ್ನಾಟಕದ ಮಟ್ಟಿಗಂತು..

ನೀಲ: ಇಲ್ಲ, ಕರ್ನಾಟಕದಲ್ಲಿ ಇದ್ದಂಗ, ನಮ್ಮಲ್ಲಿ ಫ್ಯೂಡಲ್ ಹಿನ್ನೆಲೆಯಂದ ಬಂದೋರು ಜೆ ಎಚ್ ಪಟೇಲರೊಬ್ರೇ. ಉಳಿದೋರೆಲ್ಲ ಸಾಮಾನ್ಯರ ಇದ್ರು. ಬೇರೆ ಕಡೆಗಂತೂ ಬಿಹಾರ್, ಉತ್ತರಪ್ರದೇಶ ಇಲ್ಯಾದರೂ ಅಂಥಾದು ಇರ್ಲಿಲ್ಲ.

ಸಂ: ಗೋಪಾಲ ಗೌಡರಿಗೂ ನಿಮಗೂ ಎಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿದವು?

ನೀಲ: ನನಗೂ ಗೌಡ್ರಿಗೂ ಭಿನ್ನತೆ ಬಂದಿದ್ದು ಅಂದ್ರೆ.. ಅವರಿಗೊಬ್ಬರು ಸ್ನೇಹಿತರು ಇದ್ದರಿ, ಬಿ ನಾರಾಯಣ್ ರೆಡ್ಡಿ ಅಂತ ಕೋಲಾರ್ ಜಿಲ್ಲೆ ಗುಡಿಬಂಡಾದಿಂದ ಬರ್ತಿದ್ರು. ಭಾರೀ ಜಮೀನ್ದಾರ್ರಿ. ಅವ್ರನ್ನ ರಾಜ್ಯಸಭಾ ಇಲೆಕ್ಶನಿಗೆ ನಿಲ್ಸಿ ಗೆಲ್ಲಿಸಬೇಕಂತಾ ಗೌಡ್ರು ಪ್ರಯತ್ನಿಸಿದ್ರು.

ಸಂ: ಸಮಾಜವಾದಿ ಪಾರ್ಟಿಯಿಂದ.. ?

ನೀಲ: ಇಲ್ಲ, ಇಂಡಿಪೆಂಡೆಂಟ್ ಅಂತ್ ನಿಲ್ಸಿದ್ರು. ನಿಲ್ಸಿ, ಇವ್ರೇ ಎಲ್ಲ ಕ್ಯಾಂಪೇನ್ ತೊಗೊಂಡಿದ್ರು. He miserably failed ಬಿಡ್ರಿ ಅದ್ರಾಗ. ಪ್ರಚಾರಕ್ ಹೋಗೋದು ತಪ್ಪಾಗ್ತದ ಬ್ಯಾಡಂತ ಹೇಳಿದ್ನಿ ನಾನು. ಮುಂದ ವೀರೇಂದ್ರ ಪಾಟೀಲ್ರು ಗೋಪಾಲ್ ಗೌಡ್ರುನ್ನ ಮುಖ್ಯಮಂತ್ರಿ ಮಾಡಿ ತಾವು ಕೆಳಗಿಳಿಬೇಕಂತ ಪ್ರಯತ್ನ ಮಾಡಿದ್ರು. ಅಷ್ಟರೊಳಗ ಅವರ ಮಂತ್ರಿಮಂಡಲ ಬಿದ್ದೋತು ಏನ್ರಿ.

ಸಂ: ದೇವರಾಜ ಅರಸು ಕಾಂಗ್ರೆಸ್ಸಿನವರು. ಅವ್ರ ರಾಜಕಾರಣದಲ್ಲಿ ಕರ್ನಾಟಕದ ಒಂದು ದಶಕ ಇದೆಯಲ್ಲ ಅದು ಬಹಳ ನಿರ್ಣಾಯಕವಾದ ಕೆಲವು ಬದಲಾವಣೆಗಳನ್ನು ತಂದಿತು. ಅವ್ರು ಸಮಾಜವಾದಿ ಪಕ್ಷದೋರಲ್ಲ. ಎಮರ್ಜನ್ಸಿ ಇದ್ದ ಕಾಲದಲ್ಲಿ

ಮಂತ್ರಿಯಾಗಿದ್ದರೂ ಕೂಡ ಅವರು ಮಾಡಿದ ಸುಧಾರಣೆಗಳು ಯಾವುದೇ ಸಮಾಜವಾದಿ ಚಳುವಳಿ ಮಾಡಲಿಲ್ಲ. ಇದೊಂದು ವಿಚಿತ್ರ ವಿದ್ಯಮಾನ.

ನೀಲ: ಹೌದು ಹೌದು. ಬಹಳ ಫಾಸ್ಟ್ ಬದಲಾವಣೆಗಳಾದ್ವು ಬಿಡ್ರಿ.

ಸಂ: ಅರಸು ಅವರಿಗೇನಾದರೂ ಸಮಾಜವಾದಿ ಪಕ್ಷದ ಹಿನ್ನೆಲೆ ಇತ್ತಾ?

ನೀಲ: ಇಲ್ಲಿಲ್ಲ. ದೇವರಾಜ್ ಅರಸೂ ಅವ್ರಿಗೆ ಲೋಹಿಯಾವಾದದ ಹಿನ್ನೆಲೆ ಇದ್ದಿದ್ದಿಲ್ಲ. ಬದರಿನಾರಾಯಣ ಅಯ್ಯಂಗಾರ ಅವರ ಅಳಿಯ ಒಬ್ಬ ಇದ್ದ. ಬಹಳ ಬ್ರಿಲಿಯಂಟ್ ಇದ್ದ. ಬಿ ಎಲ್ ಆರ್ ಅಯ್ಯಂಗಾರ್ ಅಂತಿಳ್ಕೊಂಡು, ಸುಪ್ರೀಂಕೋರ್ಟ್ ಅಡ್ವೊಕೇಟ. ಈ ಪರ್ಸಪ್ಷನ್ ಇತ್ ಅವಗ. ಅಂವ್ನಾ ಇವರಿಗೆ ಗುರುವಾದ. ಹೀಗಾಗಿ ಇವ್ರು ಆಂ.. ಈ ಲಿಂಗಾಯತೇತರ ಫ್ರಂಟ್ ಮಾಡ್ಬೇಕು, ಲಿಂಗಾಯತ ಬೇಸ್‌ಕಟ್ ಮಾಡ್ಬೇಕು ಅಂತಂದ್ರೆ, ಈ ಉಳಿದ ವರ್ಗಗಳನ್ನೆಲ್ಲ ತಮ್ಮೊಳಗ ಹಾಕ್ಕೋಬೇಕು ಅಂತಂದು ಇದುನ್ ಮಾಡಿಕೊಟ್ಟವ ಅಂವ. ಸೋಶಿಯಲ್ ಪರ್ಸೆಪ್ಷನ್ ಇತ್ತು ಅವನಿಗೆ. ಚದುರಂಗರಿಗೆ ಸೋಶಿಯಲ್ ಇನ್ ಸೈಟನ್ನ ನೀಡಿದವನು ಅಂವ್ನ.

ಸಂ: ನೀವು ಚಳುವಳಿಗಳನ್ನ ಮಾಡಿದೀರಿ. ಚುನಾವಣಾ ರಾಜಕೀಯದಲ್ಲಿ ನಿಂತು ಶಾಸಕರಾಗಿ ಕೆಲಸ ಮಾಡಿದೀರಿ. ಇವರಡು ಮಾದರಿಯ ಒಳಗೆ ಜನರಿಗೆ ಕೆಲಸ ಮಾಡೋ ವಿಷಯದಲ್ಲಿ ಯಾವುದು ಬಹಳ ಅರ್ಥಪೂರ್ಣ ಅನಿಸಿತು?

ನೀಲ: ನನಗೆ ಮೀನಿಂಗ್ ಫುಲ್ ಅಂದ್ರೆ ಹೋರಾಟಾನರಿ. ಹೋರಾಟ ನನಗ್ ಬಹಳ ಪ್ರಿಯವಾದದ್ದು. ಒಂದಲ್ಲಾಂತ ಬಹಳಷ್ಟು ಹೋರಾಟ್ ಮಾಡಿದೀನಿ. ಇಲ್ಲೆ ಹುಬ್ಬಳ್ಳಿಯೊಳಗ ನಿವೇಶನ ರಹಿತರದು ಎರಡುಹೋರಾಟ ಮಾಡ್ದೆವು. ಒಂದು ಹೋರಾಟದೊಳಗ ಎರಡು ಸಾವಿರ ಜನಕ್ಕ ನಿವೇಶನ ದೊರಕಿತು. ಮತ್ತೊಂದು ಹೋರಾಟ್‌ದೊಳಗ ಸುಮಾರು ಮೂರು ಸಾವಿರ ನಿವೇಶಗಳನ್ನ ದುರ್ಬಲ ವರ್ಗಕ್ಕ ದೊರಕಿಸಿ ಕೊಡೋವಂಥ ಹೋರಾಟ ಮಾಡ್ದೆ. ಮೊದಲೇ ಅದರ ಆಕಾರ ರೂಪಿಸಿ ಸಂಘಟಿಸಿ ವಿಜಯ ಸಂಪಾದಿಸಬೇಕಂತನ ಮಾಡ್ವಿವಿ, ವಿಜಯ ಸಂಪಾದಿವಿ.

(ಬರೆಹರೂಪ: **ಜಿ ಕೆ ಶಂಕರ್**)

●

ಆಕರಸೂಚಿ

## ಕನ್ನಡ ಹಸ್ತಪ್ರತಿಶಾಸ್ತ್ರ

● ಎಫ್.ಟಿ. ಹಳ್ಳಿಕೇರಿ

ಪ್ರಾಚೀನ ಕರ್ನಾಟಕದ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಮುಂತಾದ ಸಾಂಸ್ಕೃತಿಕ ಸಂಗತಿಗಳನ್ನು ತಿಳಿದುಕೊಳ್ಳುವಲ್ಲಿ ಹಲವಾರು ಆಕರಗಳು ನೆರವಾಗುತ್ತವೆ. ಅಂಥವುಗಳಲ್ಲಿ ಭಾಷಾಸಾಮಗ್ರಿಗಳು ಪ್ರಧಾನವಾಗಿದ್ದು, ಅವುಗಳಲ್ಲಿಯೇ ಹಸ್ತಪ್ರತಿಗಳು ಪ್ರಮುಖವಾಗಿ ಪರಿಗಣಿಸಲ್ಪಟ್ಟಿವೆ. ಇಂಗ್ಲೀಷಿನ manuscriptology ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಹಸ್ತಪ್ರತಿಶಾಸ್ತ್ರ ಪದವು ಬಳಕೆಗೊಂಡಿದೆ. ೧೯೭೪ರಲ್ಲಿ ಮಂಡ್ಯದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಡಾ. ಆರ್.ಸಿ. ಹಿರೇಮಠ ಅವರು "ಹಸ್ತಪ್ರತಿ ಸಂಗ್ರಹ, ಅವುಗಳ ಸೂಚೀಕರಣ ಮೊದಲಾದವುಗಳನ್ನೊಳಗೊಂಡ Manuscriptology ಎಂಬ ಹೊಸ ಶಾಸ್ತ್ರವೇ ಬೆಳೆದು ಬರಬೇಕಾಗಿದೆ ಎಂದು ಹೇಳುವುದರ ಮೂಲಕ, ಈ ಪದವನ್ನು ಮೊದಲ ಸಲ ಪ್ರಯೋಗಿಸಿದರೆಂದು ಕಾಣುತ್ತದೆ. ಹೀಗಿದ್ದೂ ಈ ಕ್ಷೇತ್ರವನ್ನು ಕುರಿತಂತೆ ಈ ಮೊದಲು ಗ್ರಂಥಗಳು, ಲೇಖನಗಳು, ಸೂಚೀ ಸಂಪುಟಗಳು ಕನ್ನಡದಲ್ಲಿ ಪ್ರಕಟವಾಗಿದ್ದವು. ಇತ್ತೀಚೆಗೆ ಇದೊಂದು ಅಧ್ಯಯನ ಶಿಸ್ತಾಗಿ ರೂಪುಗೊಂಡಿದೆ.

೧೮೨೮ರಲ್ಲಿ ಪ್ರಕಟವಾದ ಎಚ್.ಎಚ್. ವಿಲ್ಸನ್ ಸಂಪಾದಕತ್ವದಲ್ಲಿ Mackanzie collection; A Descriptive catalogue of the oriental manuscripts(vo-I) ಎಂಬ ಸೂಚಿಸಂಪುಟವೇ ಹಸ್ತಪ್ರತಿಯನ್ನು ಕುರಿತ ಮೊದಲ ಸಂಪಾದಿತ ಕೃತಿ. ಇದರಲ್ಲಿ ಕನ್ನಡದ ಹಲವಾರು ಕೃತಿಗಳ ವಿವರಗಳಿವೆ. ನಂತರ ಮದ್ರಾಸ್, ಮೈಸೂರು, ಧಾರವಾಡ ಮುಂತಾದ ನಾನಾ ಭಾಗಗಳಲ್ಲಿ ಈ ವಿಷಯವನ್ನು ಕುರಿತಂತೆ ಹತ್ತು ಹಲವು ಕೃತಿಗಳು ಲೇಖನಗಳು, ಸೂಚೀಸಂಪುಟಗಳು ಪ್ರಕಟಗೊಂಡಿವೆ. ಪ್ರಸ್ತುತ ಅಧ್ಯಯನ ಸೂಚಿಯಲ್ಲಿ ೧೮೨೮ರಿಂದ ೨೦೦೦ರ ಕಾಲಾವಧಿಯಲ್ಲಿ ಬಂದ ಹಸ್ತಪ್ರತಿಶಾಸ್ತ್ರ ಕುರಿತ ಆಕರಗಳ ವಿವರಗಳನ್ನು ಕೊಡಲಾಗಿದೆ.

ಇಲ್ಲಿ ಗ್ರಂಥಗಳು, ಲೇಖನಗಳು, ಸೂಚೀಸಂಪುಟಗಳು ಎಂದು ಮೂರು ವಿಭಾಗಗಳನ್ನು

ಮಾಡಿಕೊಳ್ಳಲಾಗಿದೆ. ಗ್ರಂಥಗಳು ಭಾಗದಲ್ಲಿ ಗ್ರಂಥದ ಹೆಸರು, ಲೇಖಕರು/ಸಂಪಾದಕರು, ಪ್ರಕಾಶಕರು, ಪ್ರಕಟಿತ ವರ್ಷವನ್ನು ನಮೂದಿಸಿದ್ದಾರೆ, ಲೇಖನಗಳು ಎಂಬ ಎರಡನೆಯ ಭಾಗದಲ್ಲಿ ಲೇಖನದ ಹೆಸರು, ಲೇಖಕರ ಹೆಸರು, ಪ್ರಕಟವಾದ ಪತ್ರಿಕೆ/ಗ್ರಂಥ, ಪತ್ರಿಕೆಯ ಸಂಪುಟ-ಸಂಚಿಕೆ, ಪ್ರಕಟಿತ ವರ್ಷವನ್ನು ಕೊಡಲಾಗಿದೆ. 'ಸೂಚೀ ಸಂಪುಟಗಳು' ಭಾಗದಲ್ಲಿ ಸೂಚಿ ಸಂಪುಟದ ಹೆಸರು (ಸಂಸ್ಥೆಯ ಹೆಸರಿನೊಂದಿಗೆ), ಸಂಪಾದಕರ ಹೆಸರು ಪ್ರಕಟಿತ ವರ್ಷವನ್ನು ಸೂಚಿಸಲಾಗಿದೆ. ಈ ಸೂಚಿಯ ಪ್ರಕಾರ ಹಸ್ತಪ್ರತಿಶಾಸ್ತ್ರವನ್ನು ಕುರಿತಂತೆ ಈತನಕ ೧೫ ಗ್ರಂಥಗಳು, ೬೧ ಲೇಖನಗಳು, ೬೨ ಹಸ್ತಪ್ರತಿಸೂಚಿಗಳು(ಸಂಪುಟ ಹಾಗೂ ಲೇಖನರೂಪದಲ್ಲಿ) ಪ್ರಕಟವಾದಂತಾಗಿವೆ.

ಹಸ್ತಪ್ರತಿಶಾಸ್ತ್ರ ಅಧ್ಯಯನಸೂಚಿಯನ್ನು ಕುರಿತಂತೆ ಈವರೆಗೆ ಎರಡು ಮುಖ್ಯ ಲೇಖನಗಳು ಪ್ರಕಟಗೊಂಡಿವೆ. ಒಂದನೆಯದಾಗಿ ಡಾ. ಎಂ.ಎಂ. ಕಲಬುರ್ಗಿಯವರ 'ಕನ್ನಡ ಹಸ್ತಪ್ರತಿ ಸೂಚಿಗಳು(ಕರ್ನಾಟಕ ಭಾರತಿ ೨೫-೧) ಎಂಬ ಲೇಖನದಲ್ಲಿ ಹಸ್ತಪ್ರತಿಸೂಚಿ ತಯಾರಿಕೆಯ ಮಾದರಿಯನ್ನು ವಿಶ್ಲೇಷಣೆ ಜೊತೆಗೆ, ೧೯೯೨ರವರೆಗೂ ಬಂದ ಹಸ್ತಪ್ರತಿ ಸೂಚಿಸಂಪುಟಗಳ ವಿವರಗಳಿವೆ. ಎರಡನೆಯದಾಗಿ ಶ್ರೀ ಎಸ್. ಶಿವಣ್ಣನವರ 'ಕನ್ನಡ ಹಸ್ತಪ್ರತಿಗಳು: ಒಂದು ಮಾಹಿತಿ(ಸಾರ್ಥಕ: ಪ್ರೊ.ಎಂ.ಮರಿಯಪ್ಪ ಭಟ್ಟ ಅವರ ಅಭಿನಂದನ ಗ್ರಂಥ) ಎಂಬ ಲೇಖನ, ಇದರಲ್ಲಿ ೧೯೭೫ರ ವರೆಗೆ ಬಂದ ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದ ಲೇಖನಗಳ ವಿವರಗಳಿವೆ. ಈ ಅಧ್ಯಯನ ಸೂಚಿಯನ್ನು ಸಿದ್ಧಪಡಿಸುವಲ್ಲಿ ಡಾ. ಎಂ. ಎಂ. ಕಲಬುರ್ಗಿ ಹಾಗೂ ಶ್ರೀ ಎಸ್. ಶಿವಣ್ಣನವರ ಈ ಲೇಖನಗಳು ತುಂಬಾ ಸಹಾಯಕಾರಿಯಾಗಿವೆ.

ಇಲ್ಲಿಯ ಗ್ರಂಥ, ಸಂಪುಟ, ಲೇಖನಗಳನ್ನು ಪರಿಶೀಲಿಸಿದಾಗ ಹಸ್ತಪ್ರತಿಶಾಸ್ತ್ರವು ಒಂದು ಸ್ವತಂತ್ರವಾದ ಅಧ್ಯಯನ ಶಾಖೆಯೆಂಬುದು ನಮಗೆ ಮನವರಿಕೆಯಾಗುತ್ತದೆ. ಮೊದಮೊದಲು ಇದನ್ನು ಗ್ರಂಥ ಸಂಪಾದನಾಶಾಸ್ತ್ರದ ಒಂದು ಭಾಗವೆಂದೇ ವಿದ್ವಾಂಸರು ಗುರುತಿಸುತ್ತಾ ಬಂದಿದ್ದರು. ಸ್ವಾತಂತ್ರ್ಯಾನಂತರದ ಕಾಲದಲ್ಲಿ ಇದನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿರುವು ದನ್ನು ನಾವು ಕಾಣುತ್ತೇವೆ. ಇಲ್ಲಿಯ ಸೂಚೀಸಂಪುಟಗಳನ್ನು ಗಮನಿಸಿದಾಗ ಸೂಚಿಶಿಲ್ಪರಚನೆ ಯಲ್ಲಿ ಏಕರೀತಿಯ ಮಾದರಿಯನ್ನು ಅನುಸರಿಸಿಲ್ಲ. ವಿಶ್ವವಿದ್ಯಾಲಯಗಳು, ಸಾರ್ವಜನಿಕ ಮಠ-ಮಾನ್ಯಗಳು, ಸಂಸ್ಥೆಗಳು ತಮಗೆ ತೋಚಿದ ರೀತಿಯಲ್ಲಿ ಸೂಚಿಯನ್ನು ಸಿದ್ಧಪಡಿಸಿದ್ದಾರೆ. ಹೀಗಾಗಿ ಸೂಚೀಸಂಪುಟಗಳಲ್ಲಿ ಕ್ರಮಬದ್ಧವಾದ ಮಾದರಿಯನ್ನು ಅಳವಡಿಸಿಕೊಳ್ಳಬೇಕಾದ ಅಗತ್ಯತೆಯಿದೆ. ವಿವರಣಾತ್ಮಕ ಸೂಚೀ ಸಂಪುಟಗಳಲ್ಲಿ ಹಸ್ತಪ್ರತಿಗಳ ಸಮಗ್ರವಾದ ವಿವರಗಳು ದೊರಕಿದರೆ, ಪರಿಚಯಾತ್ಮಕ ಸೂಚಿಸಂಪುಟಗಳಲ್ಲಿ ಅಷ್ಟೊಂದು ಮಾಹಿತಿಗಳು ಲಭ್ಯವಾಗುವುದಿಲ್ಲ. ಆದುದರಿಂದ ವಿವರಣಾತ್ಮಕ ಸೂಚೀಸಂಪುಟಗಳನ್ನು ಪ್ರಕಟಿಸುವುದೇ ಹೆಚ್ಚು ಪ್ರಯೋಜನಕಾರಿಯಾದುದು.

ಪ್ರಸ್ತುತ ಅಧ್ಯಯನ ಸೂಚಿಯಲ್ಲಿ ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೂ

ಬಂದ ಗ್ರಂಥ, ಲೇಖನ, ಸೂಚೀ ಸಂಪುಟಗಳ ವಿವರಗಳನ್ನು ಸಮಗ್ರವಾಗಿ ಒಂದೆಡೆ ಸಂಗ್ರಹಿಸುವ ಪ್ರಯತ್ನ ಮಾಡಲಾಗಿದೆ.

## ೧. ಗ್ರಂಥಗಳು


೧. ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ -ಹಿರೇಮಠ ಬಿ.ಕೆ. ವೀರಶೈವ ಅಧ್ಯಯನ ವೇದಿಕೆ, ಹಿರೇಮಠ ಕಸಬಾ ಜಂಬಗಿ ವಿಜಾಪುರ ಜಿಲ್ಲೆ ೧೯೯೨

೨. ಕನ್ನಡ ಹಸ್ತಪ್ರತಿಶಾಸ್ತ್ರ-ಎಂ.ಎಂ. ಕಲಬುರ್ಗಿ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೩

೩. ಕನ್ನಡ ಹಸ್ತಪ್ರತಿ ಲಿಪಿಕಾರರು-ಪ್ರಶಸ್ತಿಗಳು-ಬಿ.ಆರ್.ಹಿರೇಮಠ, ಅರುಣೋದಯ ಪ್ರಕಾಶನ ಧಾರವಾಡ, ೧೯೯೩

೪. ಕನ್ನಡ ಹಸ್ತಪ್ರತಿಗಳ ಇತಿಹಾಸ-ಎಚ್.ದೇವೀರಪ್ಪ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೭೭

೫. ಹಸ್ತಪ್ರತಿಶಾಸ್ತ್ರ ಪರಿಚಯ-ಬಿ.ಎಸ್. ಸಣ್ಣಯ್ಯ, ಬಿ.ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೯೨

೬. ಹಸ್ತಪ್ರತಿಶಾಸ್ತ್ರ ಸಂ: ಎಂ.ವಿ. ಸೀತಾರಾಮಯ್ಯ, ಎಂ. ಚಿದಾನಂದಮೂರ್ತಿ,. ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು, ೧೯೮೩

೭. ಕನ್ನಡ ಗ್ರಂಥಸಂಪಾದನ ಶಾಸ್ತ್ರ-ಎಂ.ಎಂ.ಕಲಬುರ್ಗಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೨

೮. ಮಣಿಹ (ಶ್ರೀ ಫ.ಗು. ಹಳಕಟ್ಟಿಯವರ ಅಭಿನಂದನ ಗ್ರಂಥ) ಸಂ: ಎಂ.ವಿ. ಸೀತಾರಾಮಯ್ಯ, ಆರ್. ಶೇಷಶಾಸ್ತ್ರಿ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೮೨

೯. ಕನ್ನಡ ಗ್ರಂಥಸಂಪಾದನೆ-ಡಿ.ಎಲ್. ನರಸಿಂಹಾಚಾರ್, ಶಾರದಾಮಂದಿರ, ರಾಮಯ್ಯರ್ ರಸ್ತೆ, ಮೈಸೂರು-೪, ೧೯೬೪

೧೦. ಗ್ರಂಥಸಂಪಾದನಶಾಸ್ತ್ರ ಪರಿಚಯ-ಸೀತಾರಾಮ್ ಜಾಗೀರದಾರ್, ಕನ್ನಡ ಸಾಹಿತ್ಯ ಸಂಘ, ರಂಗಂಪೇಟೆ(ಸುರಪುರ), ೧೯೭೮

೧೧. ಗ್ರಂಥ ಸಂರಕ್ಷಣೆ-ಬಿ.ಎಸ್. ಸಣ್ಣಯ್ಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೧

೧೨. ಭಾರತೀಯ ಗ್ರಂಥಸಂಪಾದನ ಪರಿಚಯ,ಮೂಲ: ಎಸ್.ಎಂ. ಕತ್ರೆ, ಅನು: ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ೧೯೬೮

೧೩. ಪ್ರಾಚೀನ ಹಸ್ತಪ್ರತಿಗಳು-ಎಚ್.ಎಲ್.ಎನ್. ಭಾರತಿ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು, ೧೯೭೧

೧೪. ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು,ಸಂ: ಎಸ್.ಶಿವಣ್ಣ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೪

೧೫. ಹಸ್ತಪ್ರತಿ ಕ್ಷೇತ್ರಕಾರ್ಯ, ಡಾ. ಎಫ್.ಟಿ. ಹಳ್ಳಿಕೇರಿ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೦

೨. ಲೇಖನಗಳು

೧. ಅಪರೂಪದ ಹಸ್ತಪ್ರತಿಗಳು, ಬಿ.ಎಸ್. ಸಣ್ಣಯ್ಯ, ಲೋಚನ ೮-೨, ೧೯೯೫

೨. ಆಕರ ಸಾಮಗ್ರಿಗಳಾಗಿ ಹಸ್ತಪ್ರತಿ ಪ್ರಶಸ್ತಿ(colophones)ಗಳು ಡಾ. ಎಫ್.ಟಿ.ಹಳ್ಳಿಕೇರಿ, ಇತಿಹಾಸ ದರ್ಶನ ಸಂ.೧೩, ೧೯೯೮

೩. ಆಕರ ಸಾಮಗ್ರಿಯಾಗಿ ಹಸ್ತಪ್ರತಿ ಪ್ರಶಸ್ತಿಗಳು-ಡಾ.ಬಿ.ಆರ್. ಹಿರೇಮಠ, ಚಿನ್ಮೂಲಾದ್ರಿ ಚೇತನ ೧೯೮೯

೪. ಈ ಶತಮಾನದ ಓಲೆಗರಿಯ ಲಿಪಿಕಾರ-ಹಾಗಲವಾಡಿ ಅಳಗಯ್ಯ(೧೯೫೬-೧೯೯೫)-ಡಾ. ಬಿ. ನಂಜುಂಡಸ್ವಾಮಿ-ಇತಿಹಾಸ ದರ್ಶನ ಸಂ೧೧ ೧೯೯೬

೫. ಉತ್ತಂಗಿಯ ಶ್ರೀ ಶಂಕರಮಠದ ಹಸ್ತಪ್ರತಿಗಳು, ಡಾ. ಎಫ್.ಟಿ. ಹಳ್ಳಿಕೇರಿ, ಇತಿಹಾಸ ದರ್ಶನ ಸಂ.೧೪ ೧೯೯೯

೬. ಉಪೇಕ್ಷಿತ ಹಸ್ತಪ್ರತಿಗಳು, ನಾ. ಗೀತಾಚಾರ್ಯ, ಮಣಿಹ ೧೯೮೨

೭. ಎತ್ತಗದ ಮಠದಲ್ಲಿ ಕನ್ನಡ ಪ್ರಾಚಿನ ಕಾವ್ಯಗಳ ಓಲೆಗರಿ ಪುಸ್ತಕ ಭಾಂಡಾರ-ಎನ್.ಎಸ್. ರಾಮಚಂದ್ರಯ್ಯ ಕನ್ನಡ ನುಡಿ ೩-೨೬ ೧೯೪೧

೮. ಓಲೆಗರಿಗಳ ಇತಿಹಾಸ-ಕೆಳದಿ ಗುಂಡಾಜೋಯಿಸ್, ಲಹರಿ ೧೬-೨, ೧೯೯೬

೯. ಓಲೆಗ್ರಂಥಗಳು-ಬಿ.ಎಸ್. ಸಣ್ಣಯ್ಯ, ಪ್ರಬುದ್ಧ ಕರ್ನಾಟಕ ೫೨-೧, ೧೯೭೦

೧೦. ಕಡತ-ದೇವರಕೊಂಡಾರೆಡ್ಡಿ, ಮಣಿಹ ೧೯೮೨

೧೧. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರ-ಎಂ.ಎಂ. ಕಲಬುರ್ಗಿ ಮಾರ್ಗ ಸಂ.೨, ೧೯೯೮

೧೨. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟಗಳು-ಎಫ್. ಟಿ. ಹಳ್ಳಿಕೇರಿ, ತರಳುಬಾಳು-೭೧, ೧೯೯೩

೧೩. ಕನ್ನಡ ಓಲೆಗರಿ ಗ್ರಂಥಗಳಲ್ಲಿ ಕಲಾತ್ಮಕತೆ-ಬಿ.ಕೆ. ಹಿರೇಮಠ, ಹರತಿಸಿರಿ (ಎಚ್.ವಿ. ವೀರನಾಯಕಹರತಿ' ನೆನಪು ಸಂಪುಟ) ೧೯೮

೧೪. ಕನ್ನಡ ಗ್ರಂಥಗಳ ಸಂಸ್ಕರಣ ಅಥವಾ ಗ್ರಂಥ ಸಂಪಾದನೆ-ಎನ್ ಅನಂತರಂಗಾಚಾರ್, ಪ್ರಬುದ್ಧ ಕರ್ನಾಟಕ ೩೧-೨, ೧೯೪೯

೧೫. ಕನ್ನಡ ಗ್ರಂಥಸಂಪಾದನೆಗೆ ಎಂ.ವಿ.ಸೀ. ಅವರ ಕೊಡುಗೆ-ಎನ್ ಬಸವಾರಾಧ್ಯ, ಆಸ್ವಾದ ೧೯೮೩

೧೬. ಕನ್ನಡ ಗ್ರಂಥಸಂಪಾದನೆಗೆ ತೀ.ನಂ.ಶ್ರೀಯವರ ಕೊಡುಗೆ-ಎಂ.ವಿ. ಸೀತಾರಾಮಯ್ಯ, ಶ್ರೀಕಂಠತೀರ್ಥ ೧೯೭೯

೧೭. ಕನ್ನಡ ಗ್ರಂಥಸಂಪಾದನೆಗೆ ಪರಿಷತ್ತಿನ ಕೊಡುಗೆ, ಹಂಪ ನಾಗರಾಜಯ್ಯ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೮೫-೧,೨, ೧೯೮೦

೧೮. ಕನ್ನಡ ಗ್ರಂಥಸಂಪಾದನೆಗೆ ಹಳಕಟ್ಟಿಯವರ ಕೊಡುಗೆ-ಎಸ್. ವಿದ್ಯಾಶಂಕರ, ಬಸವಪಥ-೨-೨, ೧೯೮೦

೧೯. ಕನ್ನಡದಲ್ಲಿ ಗ್ರಂಥಸಂಪಾದನೆಯ ಸಾಧನೆ-ಎಂ.ಎಂ.ಕಲಬುರ್ಗಿ, ಕನ್ನಡ ನುಡಿ ೩೭-೧೫

೨೦. ಕನ್ನಡ ನಾಡಿನ ಹಸ್ತಪ್ರತಿಗಳು-ಎಚ್.ದೇವೀರಪ್ಪ, ಸಂಶೋಧನ ಸಂಪುಟ-೧೯೮೪
೨೧. ಕನ್ನಡ ಯಕ್ಷಗಾನ ಕೃತಿಗಳ ಸಂಪಾದನೆ-ಟಿ.ಕೇಶವಭಟ್. ಮಣಿಹ ೧೯೮೨
೨೨. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಭಾಂಡಾರ-ಎಫ್.ಟಿ. ಹಳ್ಳಿಕೇರಿ, ಪ್ರಜಾವಾಣಿ, ೩-೧-೧೯೯೯
೨೩. ಕನ್ನಡ ಸಾಹಿತ್ಯ ಪರಿಷತ್ತಿನ ಸಂಗ್ರಹದಲ್ಲಿರುವ ಹಸ್ತಪ್ರತಿಗಳ ಲಿಪಿಗಾರರು-ಸಿ. ನಾಗರಾಜು, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೭೧-೨,೭೨-೧, ೧೯೮೬-೮೭
೨೪. ಕನ್ನಡ ಹಸ್ತಪ್ರತಿಗಳು ಪುಷ್ಪಿಕೆ(colophones)ಗಳಲ್ಲಿ ಕಂಡು ಬರುವ ಸ್ತ್ರೀಯರ ಶಿಕ್ಷಣದ ಚಿತ್ರಣ-ಸಿ. ನಾಗಭೂಷಣ, ಬಸವಪಥ ೧೦-೭,೮, ೧೯೮೮
೨೫. ಕನ್ನಡ ಹಸ್ತಪ್ರತಿಗಳ ವಿಷಯ ವೈವಿಧ್ಯ-ವೀರಣ್ಣ ರಾಜೂರ, ಕರ್ನಾಟಕ ಭಾರತಿ ೧೬-೧,೨, ೧೯೮೩
೨೬. ಕನ್ನಡ ಹಸ್ತಪ್ರತಿಗಳು: ಒಂದು ಅವಲೋಕನ-ಕೆಳದಿ ಗುಂಡಾಜೋಯಿಸ್, ಸಾರ್ಥಕ(ಪ್ರೊ.ಎಂ. ಮರಿಯಪ್ಪಭಟ್ಟರ ಅಭಿನಂದನ ಗ್ರಂಥ)೧೯೯೫
೨೭. ಕನ್ನಡ ಹಸ್ತಪ್ರತಿಗಳು: ಒಂದು ಮಾಹಿತಿ-ಎಸ್.ಶಿವಣ್ಣ, ಸಾರ್ಥಕ(ಪ್ರೊ.ಎಂ. ಮರಿಯಪ್ಪಭಟ್ಟರ ಅಭಿನಂದನ ಗ್ರಂಥ)೧೯೯೫
೨೮. ಕನ್ನಡ ಹಸ್ತಪ್ರತಿಗಳು; ಒಂದು ಅಧ್ಯಯನ-ಬಿ.ಆರ್. ಹಿರೇಮಠ, ಸಂತುಷ್ಟಿ(ಡಾ. ಎಂ.ಎಸ್. ಲಠ್ಠೆ ಅವರ ಅಭಿನಂದನ ಗ್ರಂಥ)೧೯೯೩
೨೯. ಕನ್ನಡ ಹಸ್ತಪ್ರತಿ-ಗ್ರಂಥ ಸಂಪಾದನೆ-ವೈ.ಸಿ. ಭಾನುಮತಿ, ಮಹಾಮಾರ್ಗ (ಡಾ.ಎಂ.ಎಂ. ಕಲಬುರ್ಗಿಯವರ ಅಭಿನಂದನ ಗ್ರಂಥ) ೧೯೯೮
೩೦. ಕನ್ನಡ ಹಸ್ತಪ್ರತಿ ಪ್ರಶಸ್ತಿಗಳು-ಬಿ.ಆರ್. ಹಿರೇಮಠ, ಅನುಭಾವ ಪಥ ೩-೧, ೧೯೯೦
೩೧. ಕನ್ನಡ ಹಸ್ತಪ್ರತಿ ಸೂಚಿಗಳು-ಎಂ.ಎಂ.ಕಲಬುರ್ಗಿ, ಕರ್ನಾಟಕ ಭಾರತಿ ೨೫.೧,೧೯೯೨
೩೨. ಕನ್ನಡ ಹಸ್ತಪ್ರತಿ ಸೂಚಿಗಳು-ಎಸ್. ಶಿವಣ್ಣ, ಮಣಿಹ.೧೯೮೨
೩೩. ಕನ್ನಡ ಹಸ್ತಪ್ರತಿ ಸೂಚಿಗಳು ಹಾಗೂ ಹಸ್ತಪ್ರತಿಗಳ ಸಮಗ್ರ ಗ್ರಂಥಸೂಚಿ ನಿರ್ಮಾಣ-ಎಸ್. ಶಿವಣ್ಣ, ಹಸ್ತಪ್ರತಿಶಾಸ್ತ್ರ ೧೯೮೩
೩೪. ಕರ್ನಾಟಕದಲ್ಲಿ ಹಸ್ತಪ್ರತಿ ಗ್ರಂಥಾಲಯಗಳು-ಹ.ಕ. ರಾಜೇಗೌಡ, ಗ್ರಂಥಾಮೃತ, ೧೯೯೦
೩೫. ಕೇಂದ್ರ ಹಸ್ತಪ್ರತಿ ಭಂಡಾರದ ಅವಶ್ಯಕತೆ-ಬಿ.ಎಸ್. ಸಣ್ಣಯ್ಯ, ಮಣಿಹ, ೧೯೮೨
೩೬. ಕೆಳದಿ ಆಸ್ಥಾನಕವಿ ಭಟ್ಟೋಜಿ ದೀಕ್ಷಿತನ ಅಪ್ರಕಟಿತ ತಾಳೆಯೋಲೆ ಹಸ್ತಪ್ರತಿ-ಕಲ್ಲಾಪುರ ಜಿ.ವಿ., ಇತಿಹಾಸ ದರ್ಶನ ಸಂ.೬
೩೭. ಕೈ ಬರೆಹದ ಗ್ರಂಥಗಳ ಶೋಧನೆ-ಶಿ.ಚೆ.ನಂದೀಮಠ, ಶಿವಾನುಭವ ೭.೧, ೧೯೩೭
೩೮. ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಜೈನಮಠದ ಹಸ್ತಪ್ರತಿ ಭಾಂಡಾರ-ಬಿ.ಆರ್. ಹಿರೇಮಠ, ಕರ್ನಾಟಕ ಭಾರತಿ ೧೧.೧, ೧೯೭೮
೩೯. ಚಿತ್ರದುರ್ಗ ಬೃಹನ್ಮಠ ಸಂಗ್ರಹದಲ್ಲಿನ ಕೆಲವು ಕೃತಿಗಳು-ಎಸ್.ಶಿವಣ್ಣ, ಇತಿಹಾಸ ದರ್ಶನ ಸಂ.೭, ೧೯೯೨
೪೦. ಚಿತ್ರಾಲಂಕೃತ ಹಸ್ತಪ್ರತಿಗಳು-ಬಿ.ಎಸ್. ಸಣ್ಣಯ್ಯ, ಕನ್ನಡ ವಿಶ್ವಕೋಶ ಸಂ-vii ೧೯೭೪

೪೧. ಜರ್ಮನಿಯ ರಾಷ್ಟ್ರೀಯ ಗ್ರಂಥಾಲಯದಲ್ಲಿ ಜೈನ ಹಸ್ತಪ್ರತಿಗಳು-ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪ್ರಬುದ್ಧ ಕರ್ನಾಟಕ ೫೭.೧, ೧೯೭೫

೪೨. ಜೈನ ಹಸ್ತಪ್ರತಿಕಾರರು-ವೈ.ಸಿ.ಭಾನುಮತಿ, ಗ್ರಂಥ ಸಂಪಾದನೆ: ಕೆಲವು ಅಧ್ಯಯನಗಳು ೧೯೯೭

೪೩. ತಂಜಾವೂರು ಸರಸ್ವತಿ ಮಂಡಲ ಹಸ್ತಪ್ರತಿ ಗ್ರಂಥಾಲಯ-ಆರ್.ಆರ್.ಅತಗೂರು ಗ್ರಂಥಾಲಯ ರಜತ ದೀಪ್ತಿ ೧೯೯೪

೪೪. ತಾಡವೋಲೆ ಗ್ರಂಥಗಳು ಮತ್ತು ಮಠಾಧಿಪತಿಗಳು -ಗೌ.ಮ. ಉಮಾಪತಿಶಾಸ್ತ್ರಿ, ಸುಕುಮಾರ ೨-೧೨, ೧೯೫೨

೪೫. ತಾಳಪತ್ರಗಳಲ್ಲಿ ಚಿತ್ರವಿನ್ಯಾಸ:(ಮೂಡಬಿದ್ರೆಯ ಹೊಯ್ಸಳರ ಕಾಲದ ತಾಳಪತ್ರ ಚಿತ್ರಗಳ ವಿಶೇಷ ಉಲ್ಲೇಖದೊಂದಿಗೆ)-ವಿ.ಟಿ.ಎಸ್.ರಾವ್, ಇತಿಹಾಸ ದರ್ಶನ ಸಂ. ೯, ೧೯೯೪

೪೬. ತಾಳೆಗರಿ ಗ್ರಂಥಗಳಲ್ಲಿ ಚಿತ್ರನ್ಯಾಸ-ವಿ.ಟಿ.ಎಸ್.ರಾವ್, ಮಣಿಹ ೧೯೮೨

೪೭. ತಾಳೆಗರಿಯಲ್ಲಿ ಚಿತ್ರಕಲೆ ಸುಂದರ, ಮನೋಹರ-ಕೃಷ್ಣಾನಂದ ಕಾಮತ್, ಪ್ರಜಾವಾಣಿ (ದೀಪಾವಳಿ ಸಂಚಿಕೆ)೧೯೮೮

೪೮. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಸ್ತಪ್ರತಿ-ಸಂಗ್ರಹ, ಎನ್.ಅನಂತರಂಗಾಚಾರ್, ಲೋಚನ ೩.೧,೧೯೮೫

೪೯. ದಕ್ಷಿಣ ಭಾರತದ ಮೊತ್ತಮೊದಲ ಸಾರ್ವಜನಿಕ ಹಸ್ತಪ್ರತಿ ಭಾಂಡಾರ-ಎಂ.ಜಿ. ಹೆಗಡೆ, ಸಾಧನೆ, ೧೦.೩, ೧೯೮೨

೫೦. ಪ್ರಾಚೀನತಮ ಕನ್ನಡ ಹಸ್ತಪ್ರತಿಯ ಲಿಪಿವಿನ್ಯಾಸ-ಎಚ್.ಆರ್. ರಘುನಾಥಭಟ್, ಮಣಿಹ ೧೯೮೨.

೫೧. ಪ್ರಾಚೀನ ಲೇಖನ ಸಾಮಗ್ರಿ-ಎಸ್. ಶಿವಣ್ಣ, ಕರ್ನಾಟಕ ಭಾರತಿ ೧೬-೧,೨,೧೯೮೩

೫೨. ಬಳ್ಳಾರಿ ಜಿಲ್ಲೆಯ ಹಸ್ತಪ್ರತಿ ಸಂಪತ್ತು-ಕೆ. ರವೀಂದ್ರನಾಥ, ಕುಸುಮ ಸೌರಭ(ಬಳ್ಳಾರಿ ಜಿಲ್ಲಾ ೧೧ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣಸಂಚಿಕೆ)೧೯೯೯

೫೩. ಬರೋಡಾದಲ್ಲಿಯ ಓಲೆಪ್ರತಿಗಳು-ಚೆನ್ನಮಲ್ಲಿಕಾರ್ಜುನರು ಸದ್ಧರ್ಮ ದೀಪಿಕೆ ೪೫ -೬, ೧೯೩೯

೫೪. ಬೆಂಗಳೂರು ವಸ್ತು ಸಂಗ್ರಹಾಲಯದಲ್ಲಿದ್ದ ಗ್ರಂಥ ಭಾಂಡಾರ-ವೇಮಗಲ್ ಸೋಮಶೇಖರ, ಇತಿಹಾಸ ದರ್ಶನ ಸಂ.೮.-೧೯೯೩

೫೫. ಮದ್ರಾಸ್ ಸರ್ಕಾರದ ಪ್ರಾಂತ್ಯಗ್ರಂಥಮಾಲೆ-ಪಿ. ಸುಂದರಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೧೧.೩, ೧೯೨೬

೫೬. ಮೈಸೂರು ಅರಮನೆಯ ಸರಸ್ವತಿ ಭಂಡಾರ-ಗಾಯತ್ರಿ ಜೆ.ವಿ., ಇತಿಹಾಸ ದರ್ಶನ ಸಂ.೭.-೧೯೯೨

೫೭. ಮೈಸೂರು ಪ್ರಾಚ್ಯಕೋಶಾಗಾರಕ್ಕೆ ಹೊಸದಾಗಿ ಸೇರಿರುವ ಕೈ ಬರೆಹದ ಕನ್ನಡ ಗ್ರಂಥಗಳು-ಎನ್.ಅನಂತರಂಗಾಚಾರ್, ಪ್ರಬುದ್ಧ ಕರ್ನಾಟಕ ೨೧.೧, ೧೯೩೯

೫೮. ರಾಜಪರ್ಗದವರ ಸ್ವಹಸ್ತಾಕ್ಷರದ ಹಸ್ತಪ್ರತಿಗಳು. ಬಿ.ಆರ್.ಹಿರೇಮಠ, ಕರ್ನಾಟಕ ಭಾರತಿ, ೨೪.೩,-೧೯೯೨

೫೯. ವಾಲೆಗ್ರಂಥಗಳ ಕಟ್ಟೊಂದರಿಂದ-ಎಂ.ಡಿ.ವಸಂತರಾಜ್, ಸನ್ಮತಿ-೨೨.೨.೩.೪-೧೯೭೮
೬೦. ವೀರಶೈವ ಮತಧರ್ಮ ಗ್ರಂಥ ಪರಿಶೋಧನಾ-ದುಮ್ಮೂರು ಗುರುಪಾದಪ್ಪ ಮುಪ್ಪಿನ-ರೆ.ರೇವಣಸಿದ್ದಪ್ಪ, ಮೈಸೂರು ಸ್ಟಾರ್, ನವ್ಹಂಬರ್ ೩೦,೧೯೨೪
೬೧. ವೀರಶೈವ ಹಸ್ತಪ್ರತಿಕಾರರು-ಜಿ.ಜಿ. ಮಂಜುನಾಥನ್, ಸಿದ್ಧಗಂಗಾಶ್ರೀ ೧೯೮೨
೬೨. ಶರಣ ಸಾಹಿತ್ಯ ಕಾರ್ಯಾಲಯದಲ್ಲಿರುವ ತಾಳೆಯೋಲೆ ಹಾಗೂ ಕಾಗದ ಪ್ರತಿಗಳು, ಶರಣ ಸಾಹಿತ್ಯ ೨೧.೫, ೧೯೫೮
೬೩. ಶ್ರವಣಬೆಳಗೊಳದ ಹಸ್ತಪ್ರತಿ ಲಿಪಿಕಾರರು-ಬಿ.ವಿ.ಶಿರೂರ, ಕರ್ನಾಟಕ ಭಾರತಿ ೧೯.೩. ೧೯೮೭
೬೪. ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಮಠದ ಹಸ್ತಪ್ರತಿ ಭಾಂಡಾರದ ಲಿಪಿಕಾರರು-ಬಿ.ಅರ್. ಹಿರೇಮಠ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೬೯.೨ -೧೯೮೪
೬೫. ಸಕೀಲಗಳು-ಶರಣರ ವರ್ಣಚಿತ್ರಗಳು, ಎಂ.ಚಿದಾನಂದಮೂರ್ತಿ, ವಚನಶೋಧ-೧, ೧೯೯೮
೬೬. ಹರಿದಾಸ ಸಾಹಿತ್ಯದ ಹಸ್ತಪ್ರತಿಗಳ ಸಂಗ್ರಹ-ಜಿ. ವರದರಾಜರಾವ್, ಅಧ್ಯಯನ ಶ್ರೀ ಶಂಬಾ ಜೋಶಿಯರ ಅಭಿನಂದನ ಗ್ರಂಥ (೧೯೮೦)
೬೭. ಹಸ್ತಪ್ರತಿ ಕ್ಷೇತ್ರಕಾರ್ಯ: ವಿಧಾನ-ಸಾಧನೆ, ಎಂ.ಎಂ. ಕಲಬುರ್ಗಿ, ಕರ್ನಾಟಕ ಭಾರತಿ ೧೬-೧,೨, ೧೯೮೩
೬೮. ಹಸ್ತಪ್ರತಿಗಳ ರಕ್ಷಣೆ ಮತ್ತು ಪರಿಚಲನೆ-ಬಿ.ಎಸ್. ಸಣ್ಣಯ್ಯ, ಕರ್ನಾಟಕ ಭಾರತಿ ೧೬-೧,೨ ೧೯೮೩
೬೯. ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ-ಕೆ.ಎಸ್. ದೇಶಪಾಂಡೆ, ಕರ್ನಾಟಕ ಭಾರತಿ ೧೬.೧.೨, ೧೯೮೩
೭೦. ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ-ಎನ್.ನಿ. ಶಿರಹಟ್ಟಿ ಗ್ರಂಥಾಲಯ, ರಜತ ರಸ್ತೆ, ೧೯೯೪
೭೧. ಹಸ್ತಪ್ರತಿಗಳ ವಿನ್ಯಾಸ ಸೌಂದರ್ಯ-ಬಿ.ಕೆ. ಹಿರೇಮಠ, ಕರ್ನಾಟಕ ಭಾರತಿ ೧೬.೧,೨ - ೧೯೮೩
೭೨. ಹಸ್ತಪ್ರತಿಗಳ ಸಂಗ್ರಹ ಕಾರ್ಯದಲ್ಲಿ ನನ್ನ ಅನುಭವ-ಬಿ.ಬಿ. ಮಹೀಶವಾಡಿ, ಮಣಿಹ ೧೯೮೨
೭೩. ಹಸ್ತಪ್ರತಿ ಪ್ರಶಸ್ತಿಗಳಲ್ಲಿ ಐತಿಹಾಸಿಕ ಸಂಗತಿಗಳು-ಬಿ.ಆರ್. ಹಿರೇಮಠ, ಸಂಶೋಧನ ವ್ಯಾಸಂಗ ೨-೧,೧೯೯೦
೭೪. ಹಸ್ತಪ್ರತಿ ಸಂಗ್ರಹಕಾರ್ಯ ಮತ್ತು ಗ್ರಂಥಸಂಪಾದನೆಗೆ ಬಿ. ಶಿವಮೂರ್ತಿಶಾಸ್ತ್ರಿಗಳ ಕೊಡುಗೆ-ಸಿ.ವಿ. ಮಂಜುನಾಥ, ಮಣಿಹ, ೧೯೮೨
೭೫. ಹಸ್ತಪ್ರತಿಗಳ ಸಂಗ್ರಹ ಕಾಲದಲ್ಲಿ ನನ್ನ ಅನುಭವ- ಜಿ. ಅಶ್ವತ್ಥನಾರಾಯಣ, ಮಣಿಹ, ೧೯೮೨
೭೬. ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣ -ಎಂ.ವಿ. ಸೀತಾರಾಮಯ್ಯ, ಮಣಿಹ, ೧೯೮೨.
೭೭. ಹಸ್ತ್ರಪ್ರತಿಗಳ ಸಂರಕ್ಷಣೆ ಮತ್ತು ಮೇಲ್ಮೆ-ಕೆ.ಎಸ್. ಮಹಂತದೇವರು, ಪ್ರಬುದ್ಧ ಕರ್ನಾಟಕ,೪೭.೨, ೧೯೬೫

೭೮. ಹಸ್ತಪ್ರತಿಗಳ ಸ್ವರೂಪ, ಬಿ.ಎಸ್. ಸಣ್ಣಯ್ಯ, ಲೋಚನ, ೧೦-೨, ೧೯೯೭

೭೯. ಹಸ್ತಪ್ರತಿಗಳು-ಮೆಕಂಜಿ ಸಂಗ್ರಹ-ಎಂ.ಜಿ. ಹೆಗಡೆ ಮಣಿಹ, ೧೯೮೨

೮೦. ಹಸ್ತಪ್ರತಿಯೊಂದರಲ್ಲಿ ಹರದೇಶಿ ನಾಗೇಶಿ ಹಾಡು-ಎಂ. ಚಿದಾನಂದಮೂರ್ತಿ, ಸಾಧನೆ ೧೮-೧,೨,೧೯೮೯

೮೧. ಹಸ್ತಪ್ರತಿ ಲಿಪಿಕಾರರು-ಗೌ.ಮ. ಉಮಾಪತಿಶಾಸ್ತ್ರಿ, ಚೆನ್ನುಡಿ ೨-೩೩,೩೫,೩೬,೩೮, ೪೧,೪೯,೫೦, ೩-೪೪

೮೨. ಹಸ್ತಪ್ರತಿ ಲಿಪಿಕಾರರು-ಬಿ.ಆರ್. ಹಿರೇಮಠ, ಸಾಧನೆ ೧೨-೨, ೧೯೮೩

೮೩. ಹಸ್ತಪ್ರತಿ ವಿಜ್ಞಾನ: ಒಂದು ಚಿಂತನೆ, ನಾ. ಗೀತಾಚಾರ್ಯ, ಸಂಶೋಧನ, (ಡಾ. ಎಂ.ಚಿದಾನಂದಮೂರ್ತಿ ಅಭಿನಂದನ ಗ್ರಂಥ) ೧೯೯೧

೮೪. ಹಸ್ತಪ್ರತಿ ವಿಜ್ಞಾನ: ಕೆಲವು ಪಾರಿಭಾಷಿಕ ಪದಗಳು-ಆರ್. ಎಸ್. ಶಿವಗಣೇಶಮೂರ್ತಿ, ಲೋಚನ ೫.೧, ೧೯೮೭

೮೫. ಹಸ್ತಪ್ರತಿಗಳು, ಪ್ರತಿಕಾರರು ಓದುಗರು-ಒಂದು ಸ್ಥೂಲ ಪರಿಚಯ-ಸದಾನಂದ ಪಾಟೀಲ, ಕರ್ನಾಟಕ ಭಾರತಿ ೧೮-೨,೩,೧೯೮೫

೮೬. Palm leaf manuscripts in kannada- A Glimpse - Hampa Nagarajaiah, Shrigandha-1978

೮೭. Manuscripts and Records of karnataka - H. Deveerappa, Studies in Education and culture 1959

೮೮. Maintanance of manusripts B.S. Kulkarni

೮೯. Dhaval Manuscripts illustrations-Shivarama Karanta, Karnataka paintings 1973

೯೦. Date and Authoriship Two early catholic manuscripts written inthe Kannada language- Edward Naronha, Journal of the Karnataka University vo-XXX 1986

೯೧. A rare manuscripts of J.F. Fleat- Srinivas Havanur

**೩. ಸೂಚಿ ಸಂಪುಟಗಳು**

**ಅ. ಮದ್ರಾಸ್ ಹಸ್ತಪ್ರತಿ ಸೂಚಿಗಳು:**

೧. Mackenzie collection: A descriptive catalogue of the oriental manuscripts, Edited by H.H. wilson, vol-1828

೨. Alphabetical Index of Manuscripts in the Government oriental manuscripts Library Madras(Sanskrit, Telugu, Tamil, Kanarese, Malayalam, Marathi, Oriya, Arabic, Persian and Hindustani) 1893

೩. An Alphabetical Index of Kanarese Manuscripts in the Govt. oriental manuscripts Library Madras- Ed: S. Kuppuswamyshastri, 1929.

೪. An Alphabetical Index of Kannada manuscripts in the Govt. Oriental Manuscripts Library, Madras. Ed: T. Chandrashekharn, 1952.

೫. A Descriptive Catalague of kanarese Manuscripts in the Govt Oriental Manuscripts Library, Madras, Vol.1, Ed: S. Kuppuswamy shastri, 1934.

೬. A Descriptive catalogue of Kanarese Manuscripts in the Govt. oriental manuscripts Library Madras, Vol.2, Ed: S. Kuppuswamy shastri, P.P.S. Shastri, 1937.

೭. A Descriptive catalogue of Kanarese manuscripts in the Govt. oriental manuscripts Library Madras, Vol.3, Ed: S. Kuppuswamy shastri, P.P.S. Shastri, 1939.

೮. A Descriptive catalogue of Kanarese manuscripts in the Govt. oriental manuscripts Library Madras, Vol.4, Ed: S. Shankaran, 1946.

೯. A Descriptive catalogue of Kanarese manuscripts in the Govt. oriental manuscripts Library Madras, Vol.5, Ed: T. Chandrashekharn, 1951.

೧೦. A Descriptive catalogue of Kanarese manuscripts in the Govt. oriental manuscripts Library Madras, Vol.6, Ed: T. Chandrashekharn, 1952.

೧೧. A Descriptive catalogue of Kanarese manuscripts in the Govt. oriental manuscripts Library Madras, Vol.7, Ed: T. Chandrashekharn, 1958.

೧೨. Mackenzie Manuscripts, summeries of the historical manuscripts in the mackenzie collection vo-II (Telugu, kannada, Marathi), Ed: T.V. Mahalingam 1976

**ಆ. ಮೈಸೂರು ಹಸ್ತಪ್ರತಿ ಸೂಚಿಗಳು**

೧೨. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೨, ಸಂ: ಬಿ.ಎಸ್. ಸಣ್ಣಯ್ಯ ೧೯೬೨

೧೩. ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿರುವ ಅಚ್ಚಿನ ಮತ್ತು ಕೈಬರಹದ ಪುಸ್ತಕಗಳ ಪಟ್ಟಿ ೧೯೨೧

೧೪. ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ (೧೯೨೨ರಿಂದ ೧೯೨೯ರ ಅವಧಿಯಲ್ಲಿ ಸಂಗ್ರಹಿಸಿದ ಅಚ್ಚಿನ ಮತ್ತು ಕೈ ಬರೆಹದ ಕನ್ನಡ ಪುಸ್ತಕಗಳ ಪಟ್ಟಿ) ೧೯೩೦

೧೫. ಮೈಸೂರು ಯುನಿವರ್ಸಿಟಿ ಓರಿಯಂಟಲ್ ರೀಸರ್ಚ ಇನ್‌ಸ್ಟಿಟ್ಯೂಟದಲ್ಲಿ ೧೯೪೧ರಿಂದ ೧೯೫೪ರವರೆಗಿನ ಸಂಗ್ರಹಿಸಿರುವ ಕೈಬರಹದ ಪುಸ್ತಕಗಳ ಪಟ್ಟಿ ೧೯೫೫

೧೬. ಮೈಸೂರು ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯಲ್ಲಿರುವ ಕೈಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚಿ (೧೮೯೧-೧೯೫೧ರವರೆಗೆ)೧೯೫೫

೧೭. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೧, ಸಂ: ಬಿ.ಎಸ್. ಸಣ್ಣಯ್ಯ ೧೯೬೨

೧೮. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೨, ಸಂ: ಬಿ.ಎಸ್. ಸಣ್ಣಯ್ಯ ೧೯೬೨

೧೯. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೩, ಸಂ: ಬಿ.ಎಸ್. ಸಣ್ಣಯ್ಯ ೧೯೬೩

೨೦. ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೪, ಸಂ: ಬಿ.ಎಸ್. ಸಣ್ಣಯ್ಯ ೧೯೬೩

೨೧. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ-೫ ಸಂ: ಬಿ.ಎಸ್. ಸಣ್ಣಯ್ಯ ೧೯೮೦

೨೨. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ-೬ ಸಂ: ಬಿ.ಎಸ್. ಸಣ್ಣಯ್ಯ ೧೯೮೦

೨೩. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ-೭ ಸಂ: ಬಿ.ಎಸ್. ಸಣ್ಣಯ್ಯ ೧೯೮೦

೨೪. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ-೮ ಸಂ: ಬಿ.ಎಸ್. ಸಣ್ಣಯ್ಯ ೧೯೮೦

೨೫. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ-೯ ಸಂ: ಬಿ.ಎಸ್. ಸಣ್ಣಯ್ಯ ೧೯೮೧

೨೬. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲ್ಮ ಸೂಚಿ, ಸಂ: ಬಿ.ಎಸ್. ಸಣ್ಣಯ್ಯ ೧೯೮೮

**೯. ಧಾರವಾಡ ಹಸ್ತಪ್ರತಿಸೂಚಿಗಳು**

೨೭. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೧, ಸಂ: ಆರ್.ಎಸ್. ಪಂಚಮುಖಿ ೧೯೫೩

೨೮. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೨, ಸಂ: ಎಸ್.ಎಸ್. ಮಾಳಾವಾಡ, ಬಿ.ಎಸ್.ಕುಲಕರ್ಣಿ ೧೯೫೫

೨೯. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೩, ಸಂ: ಬಿ.ಎಸ್. ಕುಲಕರ್ಣಿ ೧೯೫೭

೩೦. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೪, ಸಂ: ಎ.ಎಂ. ಅಣ್ಣಿಗೇರಿ, ಎಸ್.ಬಿ. ಪುರೋಹಿತ ೧೯೬೧

೩೧. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೫, ಸಂ: ಬಿ.ಎಸ್. ಕುಲಕರ್ಣಿ ೧೯೬೪

೩೨. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೬, ಸಂ: ಬಿ.ಎಸ್. ಕುಲಕರ್ಣಿ ೧೯೬೫

೩೩. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೭, ಸಂ: ಬಿ.ಎಸ್.ಕುಲಕರ್ಣಿ, ಎಸ್.ಬಿ. ಪುರೋಹಿತ ೧೯೬೭

೩೪. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೮. ಸಂ: ಬಿ.ಎಸ್. ಕುಲಕರ್ಣಿ, ಎಸ್.ಬಿ. ಪುರೋಹಿತ ೧೯೬೮

೩೫. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೯, ಸಂ: ಬಿ.ಎಸ್. ಕುಲಕರ್ಣಿ, ಎಸ್.ಬಿ. ಪುರೋಹಿತ ೧೯೭೦

೩೬. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೧೦, ಸಂ: ಬಿ.ಎಸ್. ಕುಲಕರ್ಣಿ ೧೯೭೬

೩೭. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೧೧, ಸಂ: ಬಿ.ಎಸ್.ಕುಲಕರ್ಣಿ ೧೯೮೨

೩೮. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೧೨, ಸಂ: ಬಿ.ಎಸ್. ಕುಲಕರ್ಣಿ ೧೯೮೩

೩೯. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ)ಸಂಪುಟ-೧೩, ಸಂ: ಸಿ.ಬಿ.ಕಡಕೋಳ, ಕೆ.ಪಿ. ಈರಣ್ಣ ೧೯೯೦

೪೦. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ-೧,ಸಂ: ಬಿ.ಆರ್. ಹಿರೇಮಠ,೧೯೯೨

೪೧. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ-೬,ಸಂ:ವಿ.ಬಿ. ರಾಜೂರ ೧೯೯೨

೪೨. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ-೭,ಸಂ:ವಿ.ಬಿ. ರಾಜೂರ ೧೯೯೨

೪೩. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ-೮,ಸಂ:ವಿ.ಬಿ. ರಾಜೂರ ೧೯೯೨

೪೪. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ-೯,ಸಂ: ವಿ.ಬಿ.ರಾಜೂರ ೧೯೯೨

೪೫. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂಪುಟ-೧೦,ಸಂ:ವಿ.ಬಿ. ರಾಜೂರ ೧೯೯೨

### ಈ. ಬೆಂಗಳೂರು ಮತ್ತು ಹೈದರಾಬಾದ್ ಹಸ್ತಪ್ರತಿಸೂಚಿಗಳು

೪೬. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ(ಬೆಂಗಳೂರು ಕನ್ನಡ ಅಧ್ಯಯನ ಸಂಸ್ಥೆ), ಸಂಪುಟ-೧, ಸಂ.ಎಸ್. ಶಿವಣ್ಣ ೧೯೮೨

೪೭. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ(ಬಿ.ಎಂ.ಶ್ರೀ ಪ್ರತಿಷ್ಠಾನ ಬೆಂಗಳೂರು) ಸಂಪುಟ-೧ ಸಂ: ಕೆಳದಿ ಗುಂಡಾಜೋಯಿಸ ಮತ್ತು ನಾ. ಗೀತಾಚಾರ್ಯ ೧೯೮೭

೪೮. ಹಸ್ತಪ್ರತಿ ಸೂಚಿ (ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು)ಸಂ: ಎಸ್. ಶಿವಣ್ಣ ೧೯೯೫

೪೯. A Descriptive catalogue of the Kannada manuscripts in the Usmania University Library, Ed: B. Ramachandrarao, T.V. Venkatachalashastri, 1966.

### ಉ. ಇತರ ಸೂಚಿಗಳು

೫೦. ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ ಸಂ: ಕೆ.ಭುಜಬಲಶಾಸ್ತ್ರೀ ೧೯೪೮

೫೧. ಶ್ರವಣಬೆಳಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಗಳ ವಿವರ, ಸಂ: ದೇವಕುಮಾರ ಶಾಸ್ತ್ರಿ ೧೯೮೦

೫೨. ಕೊಲ್ಲಾಪುರ ಲಕ್ಷ್ಮೀಸೇನ ಬಸದಿಯ ಹಸ್ತಪ್ರತಿ ಸೂಚಿ, ೧೯೦೦

೫೩. ಕೊಲ್ಲಾಪುರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನಬಸದಿಯ ಹಸ್ತಪ್ರತಿ ಸೂಚಿ, ಸಂ: ಎಂ.ಎಂ. ಕಲಬುರ್ಗಿ, ಬಿ.ಆರ್. ಹಿರೇಮಠ, ಎಸ್.ವಿ. ಅಯ್ಯನಗೌಡರ ೧೯೮೮

೫೪. ವೀರಶೈವ ಅಪ್ರಕಟಿತ ಗ್ರಂಥಸೂಚಿ ಸಂ: ಎಸ್. ಶಿವಣ್ಣ ೧೯೮೨

೫೫. ಗದುಗಿನ ತೋಂಟದಾರ್ಯಮಠದ ಹಸ್ತಪ್ರತಿ ಸೂಚಿ ಸಂ:ಎಸ್. ಶಿವಣ್ಣ ೧೯೮೫
೫೬. ಶ್ರಿ ಜಗದ್ಗುರು ಮೂರುಸಾವಿರ ಮಠದ ವರ್ಣನಾತ್ಮಕ ಹಸ್ತಪ್ರತಿ ಸೂಚಿ ಸಂ: ಕೆಳದಿ ಗುಂಡಾಜೋಯಿಸ್ ೧೯೮೯
೫೭. ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ ಸಂಪುಟ-೧, ಸಂ: ಎಸ್. ಶಿವಣ್ಣ ೧೯೯೧
೫೮. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿಸೂಚಿ ಸಂಪುಟ-೧ ಸಂ: ಪಂಡಿತ ಕೆ. ರಾಠೋಡ ೧೯೯೮
೫೯. ಯಕ್ಷಗಾನ ಹಸ್ತಪ್ರತಿಗಳು ವಿವರಣ ಸೂಚಿ(ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ ಧರ್ಮಸ್ಥಳ) ಸಂ: ಗೌ.ಮ. ಉಮಾಪತಿಶಾಸ್ತ್ರಿ, ೧೯೯೩
೬೦. ತುಳುಲಿಪಿ ಹಸ್ತಪ್ರತಿಗಳ ಸೂಚಿ(ಶ್ರೀ ಮಂಜುನಾಥೇಶ್ವರ ಸಂಸ್ಕೃತ ಸಂಶೋಧನ ಪ್ರತಿಷ್ಠಾನ ಧರ್ಮಸ್ಥಳ)ಸಂ:ಎಸ್.ಆರ್. ವಿಘ್ನರಾಜ್ ೧೯೯೭
೬೧. ಕೆಳದಿ ಸಂಗ್ರಹಾಲಯ ಕನ್ನಡ ಸಂಸ್ಕೃತ ಮತ್ತು ತೆಲುಗು ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ: ಎಸ್.ಆರ್. ರಾವ್, ೧೯೮೫
೬೨. ಉತ್ತರ ಭಾರತದ ಕನ್ನಡ ಹಸ್ತಪ್ರತಿ ಮತ್ತು ಇತರ ದಾಖಲೆಗಳ ಸೂಚಿ, ಸಂ: ವಿ. ಶಿವಾನಂದ ೧೯೯೨
೬೩. A classified catalogue of sansckrit and Kannada Manuscripts in the sarasvathi Bhandaram(palace sanskrit Library) of H.H. the Maharaja of Mysore collections of 1900-1905, 1995
೬೪. A list of the unprinted sanskrit and kannada manuscripts in the saraswati Bhandar(maharaja sanskrit college Mysore)1943
೬೫. A catalogue of sanskrit, prakrit & Hindi works in the jain siddant bhavan, Arrah, Ed: Sri Suparshwadas Gupta, Moolachandrajain, 1919.
೬೬. Catalogue of sanskrit & prakrit manuscripts in the central provinces & berar, Appendix B-list of Kanarese manuscritps on palm-leaves in the Balatkaragana Temple at Karanja, Ed: Rao Bahaddoora Heeralal, 1929.
೬೭. The unknown pages in the history of kannada Literature-1, Ed: C. Mahadevappa, 1960.
೬೮. ತಾಡವಾಲೆ ಗ್ರಂಥಸೂಚಿ(ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ), ಸಂ:ಎಂ. ರಾಜಗೋಪಾಲಾಚಾರ್ಯ ೧೯೯೧
೬೯. Catalogue of ancient Tigalari palm Leaf Manuscripts in India volume-I (south India) Keladi Gunda Jois,1997
೭೦. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ-೧, ಸಂ: ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦

೨೧. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ-೨, ಸಂ: ಡಾ. ವೀರೇಶ ಬಡಿಗೇರ, ಶ್ರೀ ಎಸ್.ಆರ್. ಚೆನ್ನವೀರಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೨. ಕನ್ನಡ ಹಸ್ತಪ್ರತಿಸೂಚಿ ಭಾಗ-೧, ಸಂ: ಗೌ.ಮ. ಉಮಾಪತೀಶಾಸ್ತ್ರೀ, ಪ್ರ: ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ ೫೭೪ ೨೪೦, ೨೦೦೦

೨೩. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಾಕ ಸೂಚಿ, ಸಂ: ಬಿ.ಎಸ್. ಸಣ್ಣಯ್ಯ, ಪ್ರ: ಆಗಮ ದರ್ಶನ ಗ್ರಂಥ ಭಂಡಾರ, ಶ್ರವಣಬೆಳ್ಗೊಳ, ೧೯೯೭

೨೪. ಪ್ರಾಕೃತ ಹಸ್ತಪ್ರತಿಗಳ ವರ್ಣಣಾತ್ಮಕ ಸೂಚಿ, ಸಂ: ಬಿ.ಎಸ್. ಸಣ್ಣಯ್ಯ, ಪ್ರ: ಆಗಮ ದರ್ಶನ ಗ್ರಂಥ ಭಂಡಾರ, ಶ್ರವಣಬೆಳ್ಗೊಳ, ೧೯೯೮

**ಊ. ಲೇಖನರೂಪದ ಸೂಚಿಗಳು**

೨೫. ಸ್ವಾದಿಯ ಜೈನಮಠದೊಳಗಿರುವ ಕನ್ನಡ ಗ್ರಂಥಗಳು ಸಂ: ಕೆ.ಜಿ. ಕುಂದಣಗಾರ, ಜಯಕರ್ನಾಟಕ ೭.೩, ೧೯೨೯

೨೬. ಧರಣೇಂದ್ರಪ್ಪಾ ಅಣ್ಣಾ ಆಲೂರ ಸಿರ್ಸಿ ಇವರಲ್ಲಿನ ತಾಡಪತ್ರ ಗ್ರಂಥಗಳು, ಸಂ: ಕೆ.ಜಿ. ಕುಂದಣಗಾರ, ಜಯಕರ್ನಾಟಕ ೭.೩, ೧೯೨೯

೨೭. ಇಸ್ಲೂರ ಮಠದಲ್ಲಿರುವ ವೀರಶೈವ ಗ್ರಂಥಗಳು-ಕೆ.ಜಿ.ಕುಂದಣಗಾರ, ಜಯಕರ್ನಾಟಕ ೭.೩,೧೯೨೯

೨೮. ಕೈ ಬರೆಹದ ಗ್ರಂಥಗಳ ಶೋಧನೆಯು, ಎಸ್.ಸಿ. ನಂದೀಮಠ, ಶಿವಾನುಭವ ೭.೧, ೧೯೩೨

೨೯. ಹೈದರಾಬಾದು ಪ್ರಾಂತದಲ್ಲಿ ಕನ್ನಡ ಗ್ರಂಥಗಳ ಸಂಶೋಧನೆ -ಡಿ.ಕೆ. ಭೀಮಸೇನರಾವ್, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೨೧.೩, ೧೯೩೬

೩೦. ಐನೂಲಿ ಗುಂಡಯ್ಯನ ಮನೆಯ ಸಂಗ್ರಹ, ಕಪಟರಾಳ ಕೃಷ್ಣರಾಯ, ಶರಣ ಸಾಹಿತ್ಯ ೪-೭, ೧೯೪೧

೩೧. ಹೊಂಬುಜಮಠದ ಗ್ರಂಥಗಳ ಪಟ್ಟಿ, ಶರಣ ಸಾಹಿತ್ಯ ೧೯೪೮

೩೨. ಕಂಚಗಲ್ಲ-ಬಿದರೆ ದೊಡ್ಡಮಠದಲ್ಲಿ ದೊರೆತ ತಾಡವೋಲೆ ಗ್ರಂಥಗಳು -ಜಿ.ಎಂ. ಉಮಾಪತಿಶಾಸ್ತ್ರಿ, ಸುಕುಮಾರ ೪-೩, ೪-೯, ೧೯೫೪

೩೩. ಗದಗ ತೋಂಟದಾರ್ಯಮಠದ ತಾಡವೋಲೆ ಜಿ. ಎಂ. ಉಮಾಪತಿಶಾಸ್ತ್ರಿ, ಸುಕುಮಾರ ೫.೩,೧೯೫೪

೩೪. ಹಾವೇರಿ ಹುಕ್ಕೇರಿ ಮಠದ ಓಲೆಸಂಗ್ರಹ-ಜಿ.ಎಂ. ಉಮಾಪತಿಶಾಸ್ತ್ರಿ, ಸುಕುಮಾರ ೫-೫, ೧೯೫೫.

೩೫. ಹಾರ್ನಹಳ್ಳಿ ಕೋಡಿಮಠದ ಓಲೆಗಳು, -ಜಿ.ಎಂ. ಉಮಾಪತಿಶಾಸ್ತ್ರಿ,ಸುಕುಮಾರ ೫-೮, ೯, ೧೯೫೫

೩೬. ಮದರಾಸು ಅಡಿಯಾರು ಪುಸ್ತಕಾಲಯದಲ್ಲಿರುವ ಕನ್ನಡ ಗ್ರಂಥಗಳು, ಶರಣ ಸಾಹಿತ್ಯ ೨೦-೬, ೧೯೫೭

೩೭. ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿಗ್ರಂಥಗಳ ಸೂಚಿ-ಜಿ.ಎಂ. ಉಮಾಪತಿಶಾಸ್ತ್ರಿ, ಹೇಮಕೂಟ ೧-೨. ೧೯೭೫

೮೮. ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿಗ್ರಂಥಗಳ ಸೂಚಿ, ಎಸ್.ಎಸ್. ಹಿರೇಮಠ, ಹೇಮಕೂಟ ೧-೧೧, ೧೯೭೬

೮೯. ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮದಲ್ಲಿ ಮೈಕ್ರೊಫಿಲ್ಮ್ ಮಾಡಿರುವ ಗ್ರಂಥಗಳು, ಬಿ.ಎಸ್. ಸಣ್ಣಯ್ಯ, ಸನ್ಮತಿ ೨೨-೧, ೧೯೭೮

೯೦. ಶ್ರಿ ತಾತನವರ ಮಠದ ಗ್ರಂಥಭಂಡಾರ ಸೂಚಿ, ಜಿ.ಎಂ. ಉಮಾಪತಿಶಾಸ್ತ್ರಿ, ಹೇಮಕೂಟ ೪-೧೨, ೧೯೭೯

೯೧. ಇಂಗ್ಲಂಡ್‌ನಲ್ಲಿರುವ ಕನ್ನಡ ಹಸ್ತಪ್ರತಿಗಳು-ಎಂ.ಎಂ. ಕಲಬುರ್ಗಿ, ಕರ್ನಾಟಕ ಭಾರತಿ ೧೮-೪, ೧೯೮೬

೯೨. ಬಸವಸಮಿತಿ(ಬೆಂಗಳೂರು)ಯಲ್ಲಿನ ಓಲೆಕಾಗದ ಪ್ರತಿಗಳ ಸೂಚಿ-ಎಸ್. ಶಿವಣ್ಣ, ಬಸವಪಥ ೮-೧೦, ೧೯೮೭

## ಈ ಸಂಚಿಕೆ ಲೇಖಕರು

೧. ಬಿ. ಚಂದ್ರೇಗೌಡ, ಲೇಖಕರು, ಎಲ್ಐಜಿ ಮನೆಗಳು, ಗೋಪಾಳ, ಶಿವಮೊಗ್ಗ-೫೭೭೨೦೨

೨. ನೀಲಗಂಗಯ್ಯ ಪೂಜಾರ, ವಕೀಲರು, ನಂ.೩೫, 'ಶ್ರೀಮಲ್ಲೇಶ', ೩ನೇ ಕ್ರಾಸ್, ವಿನಾಯಕನಗರ, ಧಾರವಾಡ-೫೮೦೦೦೮

೩. ಸಿ.ಜಿ. ಲಕ್ಷ್ಮೀಪತಿ, ಉಪನ್ಯಾಸಕರು, ಸಮಾಜಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೋಲಾರ

೪. ಬಾಲಸುಬ್ರಹ್ಮಣ್ಯ ಕಂಜರ್ಪಣೆ, 'ಸಿರಿ', ಬ್ರಾಹ್ಮಿನ್ ವ್ಯಾಲಿ, ಕೊಡಗು-೫೭೧೨೦೧

೫. ಟಿ.ಆರ್. ಅನಂತರಾಮು, ನಂ.೯, ೯ನೇ ೯ ಅಡ್ಡರಸ್ತೆ, ಎಸ್‌ಬಿಐ ಕಾಲೋನಿ, ಜೆಪಿ ನಗರ, ಮೊದಲಹಂತ, ಬೆಂಗಳೂರು-೫೬೦೦೭೮

೬. ಡಾ. ಕಮಲಾಶ್ರೀಧರ, Dept., of Linguistics, State University Newyork, Stony Brook, Newyork (USA)

೭. ಪಟ್ಟಾಭಿರಾಮ ಸೋಮಯಾಜಿ, ಉಪನ್ಯಾಸಕರು, ಇಂಗ್ಲೀಶ್ ವಿಭಾಗ, ವಿಶ್ವವಿದ್ಯಾಲಯ ಕಾಲೇಜು, ಮಡಿಕೇರಿ (ಕೊಡಗು)

೮. ಪ್ರೊ. ಎ.ವಿ. ನಾವಡ, ಪ್ರಾಧ್ಯಾಪಕ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಎಚ್.ಈ. ಬಸವರಾಜಪ್ಪ, ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ದಿ॥ ಡಾ. ಡಿ.ಆರ್. ನಾಗರಾಜ ಅವರು

೧೧. ದಿ॥ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿ ಅವರು

೧೨. ಡಾ. ಎಫ್.ಟಿ. ಹಳ್ಳಿಕೇರಿ, ರೀಡರ್, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಎಂ.ಎಂ. ಮಹಮ್ಮದ್ ಕೊಳಕೇರಿ, ಕೊಳಕೇರಿ ಗ್ರಾಮ, ಕೊಡಗು ಜಿಲ್ಲೆ

# ಕನ್ನಡ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯವು, ತಾನೊಂದು ಸಂಶೋಧನ ಸಂಸ್ಥೆಯಾಗಿ ಪ್ರಕಟಿಸುತ್ತಿರುವ ಹಲವು ನಿಯತಕಾಲಿಕೆಗಳಲ್ಲಿ, 'ಕನ್ನಡ ಅಧ್ಯಯನ'ವು ಒಂದು ವಿದ್ವತ್ ಪತ್ರಿಕೆಯಾಗಿದೆ. ಇದು ಕರ್ನಾಟಕದ ಅಧ್ಯಯನಗಳಿಗೆ ಮೀಸಲಾದ ಪತ್ರಿಕೆ. ಕರ್ನಾಟಕದ ಜನ, ಸಮಾಜ, ಭಾಷೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಧರ್ಮ, ಆರ್ಥಿಕತೆ, ರಾಜಕಾರಣ, ಪರಿಸರ, ಕಲೆ-ಮುಂತಾದ ಕ್ಷೇತ್ರಗಳಲ್ಲಿ ನಡೆಯುವ ಚರ್ಚೆ-ಶೋಧಗಳು ಇಲ್ಲಿ ಪ್ರಕಟವಾಗುತ್ತವೆ. 'ಕನ್ನಡ ಅಧ್ಯಯನ'ವು ಏಕಕಾಲಕ್ಕೆ ನಾಡಿನ ಗತದ ತಡಕಾಟವನ್ನು, ವರ್ತಮಾನದ ಮುಖಾಮುಖಿಯನ್ನು ಹಾಗೂ ಭವಿಷ್ಯದ ಕನಸು ಕಟ್ಟುವಿಕೆಯನ್ನು ಮಾಡಬಯಸುತ್ತದೆ. ಈ ಮೂಲಕ ವಿದ್ವಾಂಸರಿಗೆ ಸಾಂಸ್ಕೃತಿಕ ವೇದಿಕೆಯಂತೆಯೂ, ಓದುಗರಿಗೆ ಬೌದ್ಧಿಕ ಸಂಗಾತಿಯಂತೆಯೂ ಕೆಲಸ ಬೇಕೆಂಬುದು ಇದರ ಹಂಬಲ.

'ಕನ್ನಡ ಅಧ್ಯಯನ'ವು ಸೊಲ್ಲು, ಲೇಖನ, ಹಿಂದಣ ಹೆಜ್ಜೆ, ಕನ್ನಡಿ, ಎಲೆಮರೆ, ಮುಖಾಮುಖಿ, ಹೊಳಹು, ಪುಸ್ತಕ ಪರಿಚಯ, ಆಕರ ಸೂಚಿ -ಮುಂತಾದ ವಿಭಾಗಗಳಲ್ಲಿ ಬರಹಗಳನ್ನು ಒಳಗೊಂಡಿರುತ್ತದೆ. ಪತ್ರಿಕೆಯ ಪ್ರತಿ ಸಂಪುಟದಲ್ಲಿ ಮಳೆ, ಚಳಿ, ಗಾಳಿ, ಬಿಸಿಲು ಎಂಬ ಹೆಸರಿನ ನಾಲ್ಕು ಸಂಚಿಕೆಗಳು ಇರುತ್ತವೆ.

Reg. No. 05999/23/AL/93/TL